# ಇತ್ತೀಚಿನ ಕನ್ನಡ ಕಾವ್ಯ : ತಾತ್ವಿಕ ನೆಲೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
ಶರೀಫ್ ಸಾಬ್

ಮಾರ್ಗದರ್ಶಕರು
ಡಾ. ಎಂ. ಮಲ್ಲಿಕಾರ್ಜುನಗೌಡ
ಸಹಾಯಕ ಪ್ರಾಧ್ಯಾಪಕರು






ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಇತ್ತೀಚಿನ ಕನ್ನಡ ಕಾವ್ಯ : ತಾತ್ವಿಕ ನೆಲೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು
**ಶರೀಫ್ ಸಾಬ್**

ಮಾರ್ಗದರ್ಶಕರು
**ಡಾ. ಎಂ. ಮಲ್ಲಿಕಾರ್ಜುನಗೌಡ**
ಸಹಾಯಕ ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಸಂಶೋಧಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ **"ಇತ್ತೀಚಿನ ಕನ್ನಡ ಕಾವ್ಯ : ತಾತ್ವಿಕ ನೆಲೆಗಳು"** ಎಂಬ ಮಹಾಪ್ರಬಂಧವು **ಡಾ. ಎಂ. ಮಲ್ಲಿಕಾರ್ಜುನಗೌಡ,** ಸಹಾಯಕ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನು ಆಧರಿಸಿ ರಚನೆಗೊಂಡಿದ್ದಾಗಿದೆ. ಈ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೆ ಇಡಿಯಾಗಿ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಶರೀಫ್ ಸಾಬ್**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

**ದಿನಾಂಕ** : 29-1-2018
**ಸ್ಥಳ** : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಇತ್ತೀಚಿನ ಕನ್ನಡ ಕಾವ್ಯ : ತಾತ್ವಿಕ ನೆಲೆಗಳು"** ಎಂಬ ವಿಷಯದ ಕುರಿತು **ಶರೀಫ್ ಸಾಬ್** ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಹಾಗೂ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದು ಇವರ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ. ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನಗೌಡ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

**ದಿನಾಂಕ** : 29-1-2018
**ಸ್ಥಳ** : **ವಿದ್ಯಾರಣ್ಯ**

# ಪರಿವಿಡಿ


ಅಧ್ಯಾಯ : ಒಂದು

**ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ** ೧ - ೮

ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಮಹತ್ವ

ಅಧ್ಯಾಯ : ಎರಡು

**ಇತ್ತೀಚಿನ ಕನ್ನಡ ಕಾವ್ಯದ ಅಧ್ಯಯನದ ತಾತ್ವಿಕ ಸಮೀಕ್ಷೆ** ೯ - ೨೧

೨.೧. ಪರಿಕಲ್ಪನಾತ್ಮಕ ಚರ್ಚೆ

ಅಧ್ಯಾಯ : ಮೂರು

**ಇತ್ತೀಚಿನ ಕನ್ನಡ ಕಾವ್ಯ : ಸಾಮಾಜಿಕ ಸಂಘರ್ಷದ ನೆಲೆ** ೨೨ - ೪೬

೩.೧. ಸಾಂಸ್ಕೃತಿಕ ರಾಜಕಾರಣ

೩.೨. ಜಾತಿ ಸಂಘರ್ಷ

೩.೩. ಕೋಮು ಸಂಘರ್ಷದ ನೆಲೆ

೩.೪. ಆಹಾರ ರಾಜಕಾರಣ

ಅಧ್ಯಾಯ : ನಾಲ್ಕು

**ಇತ್ತೀಚಿನ ಕನ್ನಡ ಕಾವ್ಯದಲ್ಲಿ ವಿಷಾದದ ನೆಲೆ** ೪೭ - ೭೩

೪.೧. ನೋವಿನ ಸಂಕಥನ

೪.೨. ಪ್ರೀತಿಯ ಹುಡುಕಾಟ

೪.೩. ಮನುಷ್ಯತ್ವದ ತುಡಿತ

೪.೪. ಬದುಕಿನ ಅಸ್ಥಿರತೆ

ಅಧ್ಯಾಯ : ಐದು

**ಇತ್ತೀಚಿನ ಕನ್ನಡ ಕಾವ್ಯ : ಬಹುಕೇಂದ್ರಿಯ ನೆಲೆಗಳು** ೭೪ - ೧೦೫

೫.೧. ಸಾಮಾಜಿಕ ಸಮನ್ವಯತೆ

೫.೨. ದಮನಿತ ಸಮುದಾಯದ ಧ್ವನಿಯಾಗಿ ಕಾವ್ಯ

೫.೩. ಅಖಂಡತೆ
೫.೪. ದೈವಕೇಂದ್ರಿಯ ನೆಲೆ
೫.೫. ಕಾವ್ಯದ ಇತರ ಪ್ರಕಾರಗಳು
೫.೫.೧. ಗಜಲ್
೫.೫.೨. ಹೋರಾಟದ ಹಾಡುಗಳು

ಅಧ್ಯಾಯ : ಆರು

**ಇತ್ತೀಚಿನ ಕನ್ನಡ ಕಾವ್ಯ : ಮಹಿಳಾ ಅಸ್ಮಿತೆಯ ನೆಲೆ** ೧೦೬ - ೧೫೨

೬.೧. ಪ್ರತಿರೋಧ
೬.೨. ಚರಿತ್ರೆ ಮತ್ತು ಪುರಾಣ
೬.೩. ಕೌಟುಂಬಿಕ ಸಮನ್ವಯತೆ
೬.೪. ಆತ್ಮಸಂಗಾತ
೬.೫. ಆಧುನಿಕತೆ ಮತ್ತು ಪರಂಪರೆ

ಅಧ್ಯಾಯ : ಏಳು

**ಇತ್ತೀಚಿನ ಕನ್ನಡ ಕಾವ್ಯ : ವೈಚಾರಿಕ ನೆಲೆ** ೧೫೩ - ೧೯೮

೭.೧. ಮತ, ಧರ್ಮ
೭.೨. ವಿಶ್ವಮಾನವ ಪ್ರಜ್ಞೆ
೭.೩. ಮಾನವೀಯ ಮೌಲ್ಯಗಳು
೭.೪. ಜೀವಪರ ಆದರ್ಶದ ನೆಲೆಗಳು

ಅಧ್ಯಾಯ : ಎಂಟು

**ಸಮಾರೋಪ** ೧೯೯ - ೨೦೭

* ಅಧ್ಯಯನದ ಫಲಿತಗಳು
* ಮುಂದಿನ ಅಧ್ಯಯನದ ಸಾಧ್ಯತೆಗಳು

**ಅನುಬಂಧಗಳು**

೧. ಮೂಲ ಆಕರಗಳು ೨೦೮ - ೨೧೧
೨. ಪರಾಮರ್ಶನ ಗ್ರಂಥಗಳು ೨೧೨ - ೨೧೫

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಮಹತ್ವ

ಅಧ್ಯಾಯ : ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

## ಪ್ರಸ್ತಾವನೆ

ಕನ್ನಡ ಸಾಹಿತ್ಯ ಪರಂಪರೆಯು ಬಹುದೀರ್ಘವಾಗಿದೆ. ಜೊತೆಗೆ ಕಾವ್ಯಲೋಕವು ಸಹ ಕವಿರಾಜಮಾರ್ಗದಿಂದ ಇವತ್ತಿನ ಹೊಸ ತಲೆಮಾರಿನ ಕವಿಗಳೊಂದಿಗೆ ತನ್ನ ವೈವಿಧ್ಯತೆಯನ್ನು ಮೆರೆಯುತ್ತಾ ಬಂದಿದೆ. ಈ ಕಾವ್ಯ ಪರಂಪರೆಯು ಕಾಲಘಟ್ಟದಿಂದ ಕಾಲಘಟ್ಟಕ್ಕೆ ತನ್ನ ಸ್ವರೂಪವನ್ನು ಬದಲಿಸಿಕೊಂಡು ಸಾಗುತ್ತಾ ಬಂದಿದೆ. ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯವು ಒಂದು ಸೃಜನಶೀಲ ಪ್ರಕಾರವಾಗಿದೆ. ಕಾವ್ಯ ಸೂಕ್ಷ್ಮ ಸಂವೇದನೆಗೆ ಹಿಡಿದ ಕನ್ನಡಿಯಂತೆ. ಕಾವ್ಯದ ಸಂವೇದನೆಗಳು ಕಾಲಮಾನದಿಂದ ಕಾಲಮಾನಕ್ಕೆ ಭಾಷಿಕ ಹಿನ್ನೆಲೆಯಲ್ಲಿ ಅಭಿವ್ಯಕ್ತಿ ಕ್ರಮದಲ್ಲಿ ರೂಪಕಗಳಲ್ಲಿ ಬದಲುಗೊಳ್ಳುತ್ತ ಬಂದಿವೆ. ಕವಿತೆ ರಚನೆ ಸಾಮಾನ್ಯಕ್ರಿಯೆಯಲ್ಲ. ಅದೊಂದು ಹೊಸ ಸೃಷ್ಟಿ ಕವಿಯು ಲೋಕದ ಅನುಭವವನ್ನು ಪಡೆದು ಕವಿಯ ಅಂತರಂಗದಲ್ಲಿ ಪರಿಪಕ್ವಗೊಂಡು ಹಣ್ಣಾಗಿ ಕಾವ್ಯವೋದಯಕ್ಕೆ ಕಾರಣವಾಗುತ್ತದೆ. ಈ ಲೋಕದ ಅನುಭವಗಳು ಕವಿಯ ಪ್ರಜ್ಞೆಯಲ್ಲಿ ಕರೆಯಾಗಿ ನಿಂತು ಕಾವ್ಯವಾಗಿ ಹೊರಹೊಮ್ಮುತ್ತವೆ. ಆಯಾ ಕಾಲಘಟ್ಟದ ಸಂವೇದನೆಗಳು ಕಾವ್ಯದಲ್ಲಿ ಮೂಡುತ್ತವೆ. ಅದರಂತೆ ಇತ್ತೀಚಿನ ಕಾವ್ಯದಲ್ಲಿ ಸಮಕಾಲೀನ ಸಂವೇದನೆಗಳು ಹೊಸ ಬಗೆಯಲ್ಲಿ ಅಭಿವ್ಯಕ್ತಿಗೊಂಡಿವೆ.

ಆಧುನಿಕ ಕನ್ನಡ ಕಾವ್ಯದ ಆರಂಭವು ಬಿ.ಎಂ.ಶ್ರೀರವರಿಂದ ಆರಂಭವಾಯಿತು. ವಸಾಹತುಶಾಹಿ ಶಿಕ್ಷಣದ ಪ್ರಭಾವದಿಂದ, ಇಂಗ್ಲಿಶ್ ಸಾಹಿತ್ಯದ ಪ್ರೇರಣೆಯಿಂದ ಆಧುನಿಕ ಕನ್ನಡ ಕಾವ್ಯದ ಸ್ವರೂಪ ಬದಲಿಗೊಂಡಿತು. ಇದಕ್ಕೂ ಮೊದಲು ತತ್ವಪದಕಾರರ ಕಾವ್ಯಸೃಷ್ಟಿಯಲ್ಲಿ ಆಧುನಿಕ ಕಾವ್ಯದ ಆರಂಭ ಕಂಡರೂ ಅದು ಸಂಪೂರ್ಣವಾಗಿ ನಿರ್ಮಾಣಗೊಳ್ಳಲಿಲ್ಲ. ಕಾವ್ಯ ಹಿಂದೆ ಇದ್ದ ಹಳಗನ್ನಡ, ನಡುಗನ್ನಡ, ವಚನ ಸಾಹಿತ್ಯ, ಕೀರ್ತನೆಗಳ ಸ್ವರೂಪಕ್ಕಿಂತ ಆಧುನಿಕ ಕನ್ನಡ ಕಾವ್ಯ ಭಿನ್ನವಾಗಿದೆ. ಕಾವ್ಯ ಮೂಲತಃ ಒಂದು ಅನುಭವ ವಿಶೇಷ. ಈ ಅನುಭವ ವಿಶೇಷವೇ ಕಾವ್ಯದ ಮೊದಲೂ ಹೌದು. ತುದಿಯೂ ಹೌದು, ಪ್ರಯೋಜನವು ಹೌದು, ಕವಿಗೊದಗುವ ಲೋಕಾನುಭವ ಜನ್ಯವಾದ ಒಂದು ಅನುಭವ ವಿಶೇಷವನ್ನು ಓದುಗ ಅನುಭವ

ವಿಶೇಷವನ್ನಾಗಿಸಲು ಒದಗಿ ಬರತಕ್ಕವು ಭಾಷೆ, ಪ್ರತಿಮೆ, ಲಯ, ಇತ್ಯಾದಿ. ಬೇರೊಂದು ಮಾತಿನಲ್ಲಿ ಹೇಳುವುದಾದರೆ, ಈ ಅನುಭವ ವಿಶೇಷವನ್ನು ಕಟ್ಟಿಕೊಡುವ ಶಬ್ದಾರ್ಥ ರೂಪದ ಅಭಿವ್ಯಕ್ತಿಗಳು. ಹೀಗೆ ಶಬ್ದಾರ್ಥ ರೂಪದ ಅಭಿವ್ಯಕ್ತಿಯಲ್ಲಿ ಮೈ ಪಡೆದುಕೊಳ್ಳುವ ಅನುಭವ ವಿಶೇಷವೇ ಕಾವ್ಯ. ಕಾವ್ಯ ಅಭಿವ್ಯಕ್ತಿಸುವುದು ಅನುಭವವನ್ನು ಎನ್ನದೆ ಅನುಭವದ ವಿಶೇಷವೆಂದು ಹೇಳುವುದು ಸೂಕ್ತ. ಲೋಕದ ಅನುಭವವನ್ನು ಇದ್ದಹಾಗೇ ಹೇಳುವುದಾದರೆ ಅದು ಕಾವ್ಯವಾಗುವುದಿಲ್ಲ. ಅದು ವರದಿಯಾಗುತ್ತದೆ. ಅಥವಾ ವಾರ್ತೆಯಾಗುತ್ತದೆ. ವ್ಯವಹಾರಿಕ ವಾದವಾಗುತ್ತದೆ. ಆದರೆ ಅನುಭವ ವಿಶೇಷ ಯಾಕೆ ಅಂದರೆ, ಅದು ಸಾಧಾರಣಕ್ಕಿಂತ ಬೇರೆಯಾದದ್ದು ಅಥವಾ ಬೇರೆಯಾಗುವಂತಹ ಒಂದು ಸ್ಥಿತಿಗೆ ಏರಿದ್ದು. ಅತಿಶಯವಾದದ್ದು. ಈ ಅತಿಶಯದ ಅಂಶವೆ ಈ ಅನುಭವ ವಿಶೇಷದ ಮುಖ್ಯ ಲಕ್ಷಣ. ಇಲ್ಲಿ ವಿಶೇಷ ಎಂದರೆ ಅನುಭವದಲ್ಲೇ ವಿಶೇಷ ಮೊದಲೇ ಇರುತ್ತದೆ ಎಂದಲ್ಲ. ಅದು ಇರಬಹುದು ಇಲ್ಲದಿರಬಹುದು. ಆದರೆ ಅದನ್ನು ಗ್ರಹಿಸುವ ಪರಿಭಾವಿಸುವ ಹಾಗೂ ಅಭಿವ್ಯಕ್ತಿಸುವ ವಿಶೇಷತೆಯಿಂದ ಅದು ಅನುಭವದ ವಿಶೇಷವಾಗುತ್ತದೆ. ಕಣ್ಮುಂದೆ ನಡೆದ ಸಂಗತಿಯೊಂದನ್ನು ಅನುಭವಿಸಿ ಅದಕ್ಕೆ ಕಲ್ಪನೆಯನ್ನು ಬೆರೆಸಿ ತನ್ನೊಳಗಿನ ಸಿದ್ಧಾಂತ ಕೂಡಿಸಿ ವ್ಯಕ್ತಪಡಿಸಿದ ಬಗೆ ಕಾವ್ಯ. ಕಾವ್ಯ, ಭಾಷೆಯ ಮೂಲಕ ಭಾವಗಳನ್ನು ಅಭಿವ್ಯಕ್ತಪಡಿಸುವ ಕಲೆ, ಕಾವ್ಯ ಭಾಷೆಯ ಮೂಲಕವೇ ಸಂಭವಿಸುವಂಥದ್ದಾಗಿದೆ. ಕಾವ್ಯ ಭಾಷೆ, ವಿಶಿಷ್ಟ ಮತ್ತು ವಿಶೇಷತೆಯಿಂದ ಹಾಗೂ ಆಕರ್ಷಣೆಯಿಂದ ಕೂಡಿರುವಂತಹದ್ದು.

ಸಮಕಾಲೀನ ಕಾವ್ಯ ಅನ್ನುವಂತಹದ್ದು ಯಾವಾಗಲೂ ಇರುವಂತಹ ಒಂದೆ ಕಾಲಘಟ್ಟದಲ್ಲಿ ಹಿರಿಯ ತಲೆಮಾರಿನ ಜೊತೆ ಜೊತೆ ಸಮಕಾಲೀನ ಸಂವೇದನೆಯನ್ನು ವಿಶಿಷ್ಟವಾಗಿ ಕಾಣುವ ಅಭಿವ್ಯಕ್ತಿಸುವ ಯುವಪಡೆ, ಹೊಸ ತಲೆಮಾರು ಇದ್ದೇ ಇರುತ್ತದೆ. ಆಧುನಿಕ ಸಾಹಿತ್ಯ ಎಂದು ಕರೆಯುವ ನಾವು ಸಾಹಿತ್ಯ ಸೃಷ್ಟಿ ೧೯೨೧ರಲ್ಲಿ ಬಿ.ಎಂ.ಶ್ರೀ ಅವರ 'ಇಂಗ್ಲಿಷ ಗೀತಗಳು' ಎಂಬ ಕೃತಿ ಪ್ರಕಟವಾಯಿತು. ಇಲ್ಲಿಗೆ ಆಧುನಿಕ ಸಾಹಿತ್ಯದ ಹೆದ್ದಾರಿ ತೆರೆಯಿತು ಎನ್ನಬಹುದು. ಬಿ.ಎಂ.ಶ್ರೀ ಕಾಲಘಟ್ಟಕ್ಕೆ ಹೊಸ ತಲೆಮಾರಿನವರೆಂದರೆ ಕುವೆಂಪು, ಬೇಂದ್ರೆ, ಮಧುರಚೆನ್ನ ಇವರುಗಳನ್ನು ಹೊಸ ತಲೆಮಾರು ಎಂದು ನೋಡಬಹುದು. ಕಾಲಘಟ್ಟದ ನಂತರ ಮತ್ತೊಂದು ಯುವಪಡೆ ಹೊಸ ಸಂವೇದನೆಗಳೊಂದಿಗೆ ಕಾವ್ಯ ಸೃಷ್ಟಿಗೆ ತೊಡಗುತ್ತಿದೆ. ಅದು ಆ ಕಾಲಘಟ್ಟದ ಸಮಕಾಲೀನ ಕಾವ್ಯವಾಗುತ್ತದೆ. ಹೀಗೆ ಇತ್ತೀಚಿನ ಕಾವ್ಯ ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ವ್ಯಕ್ತಗೊಳ್ಳುವ ಹೊಸ ತಲೆಮಾರಿನ ಕಾವ್ಯವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಕಾವ್ಯವು ಜನಪರವಾದ ರಾಜಕೀಯ ಪ್ರಜ್ಞೆಯನ್ನು ತುಂಬುವ, ಸಾಮಾಜಿಕ ಚಿಂತನೆಗಳು, ಮೌಲ್ಯಗಳು, ಒಲವುಗಳು ಬಹಳ ಸೂಕ್ಷ್ಮವಾಗಿ ಮೂಡುತ್ತಾ ಬಂದಿದೆ. ಮಾನವ ಬದುಕಿನ ಚಿತ್ರಣವನ್ನು ಆಚರಣೆಗಳನ್ನು ಅನುಭವಿಸುವ ಯಾತನೆಗಳನ್ನು ಸಾಮಾಜಿಕ-ಸಾಂಸ್ಕೃತಿಕ, ಧಾರ್ಮಿಕ ಸಂಕಟಗಳನ್ನು ಮತ್ತು ಅಸ್ತಿತ್ವ, ಅಸ್ಮಿತೆಯ

ಮನೋಧರ್ಮಗಳನ್ನು ಕಾವ್ಯ ಒಳಗೊಳ್ಳುತ್ತಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತಬಂಡಾಯ ಕಾಲಘಟ್ಟದಲ್ಲಿ ಕಾವ್ಯ ರಚನೆಗೊಳ್ಳುವಾಗ ಯಾವುದಾದರೊಂದು ಪಂಥ ವಾದಕ್ಕೆ ಪ್ರತ್ಯಕ್ಷವಾಗಿಯೇ ಇಲ್ಲವೇ ಪರೋಕ್ಷವಾಗಿಯೋ ಪ್ರಭಾವಿತವಾಗಿ ಕಾವ್ಯ ಸೃಷ್ಟಿಯಲ್ಲಿ ತೊಡಗಿರುವುದು ಕಂಡುಬಂದಿದೆ. ಒಂದು ಚಳುವಳಿಯ ರೂಪದಲ್ಲಿ ಅಭಿವ್ಯಕ್ತಿಗೊಳ್ಳುತ್ತಿದ್ದವು. ಉದಾಹರಣೆಗೆ ನವೋದಯ ಸಂದರ್ಭದಲ್ಲಿ ಆದರ್ಶ, ನಿಸರ್ಗ, ವರ್ಣನೆ ಮನುಷ್ಯ ಸಂಬಂಧಗಳ ಕುರಿತಾಗಿ ಸಾಹಿತ್ಯದ ಪ್ರಭಾವದಿಂದ ರೂಪಿತಗೊಳ್ಳುತ್ತಿತ್ತು. ಹಾಗೆಯೇ ಪ್ರಗತಿಶೀಲದಲ್ಲಿ ಸಾಮಾಜಿಕ ಸಮಸ್ಯೆಗಳು, ಹೋರಾಟಗಳು, ಚಳುವಳಿಗಳ ಕಾಣಬಹುದು ಹಾಗೇ ನವ್ಯದಲ್ಲಿ ವ್ಯಕ್ತಿ ತನ್ನ ಅಸ್ಮಿತೆಯ ಕುರಿತಾಗಿ ಬಿಂಬಿಸುವ ಕಾವ್ಯ ಹೀಗೆ ಒಂದಲ್ಲಾ ಒಂದು ರೀತಿಯಲ್ಲಿ ಪ್ರಭಾವಿತಗೊಂಡು ರಚನೆಯಾಗುತ್ತಿದ್ದವು. ಆದರೆ ಈ ಹೊತ್ತಿನ ಕವಿಗಳು ಇಂತಹ ಯಾವುದೇ ವಾದಕ್ಕಾಗಲಿ, ಪಂಥಕ್ಕಾಗಲಿ, ಚಳುವಳಿಗಾಗಲಿ ಅಂಟಿಕೊಳ್ಳದೆ ಮುಕ್ತವಾಗಿ ಕಾವ್ಯರಚನೆಯಲ್ಲಿ ತೊಡಗಿದ್ದು ಕಂಡುಬರುತ್ತದೆ. ಇತ್ತೀಚಿನ ಕಾವ್ಯದಲ್ಲಿ ಮುಖ್ಯವಾಗಿ ಕಂಡುಬರುವ ಗುಣಲಕ್ಷಣಗಳೆಂದರೆ ಯಾವ ಪಂಥದ ತೆಕ್ಕೆಗೆ ಒಗ್ಗದಿದ್ದರೂ ಎಲ್ಲಾ ಪಂಥಗಳಿಂದ ತಮಗೆ ಬೇಕಾದದ್ದನ್ನು ಪಡೆಯುವ ಹಾಗೇ ಪಡೆದಿದ್ದನ್ನು ಬೇರೆ ಬೇರೆ ಕ್ರಮಗಳಲ್ಲಿ ಮುಂದುವರೆಸುವ, ಮರು ನಿರೂಪಿಸುವ ಸೂಕ್ಷ್ಮತೆ ಒಳಗೊಂಡಿದೆ. ಪೂರ್ವನಿರ್ಧಾರಿತ ಚೌಕಟ್ಟುಗಳ ಬಗ್ಗೆ ಗಾಢ ಅನುಮಾನ ಇರುವುದರಿಂದಲೇ ಇವರ ಕಾವ್ಯಕ್ಕೆ ಒಂದು ಹೊಸ ದಾರಿಯ ಚೈತನ್ಯ ಒದಗಿದೆ.

ಜಾಗತೀಕರಣದ ಹಿನ್ನೆಲೆಯಲ್ಲಿ ಹೊಸ ತಲೆಮಾರಿನ ಕಾವ್ಯದ ಮೇಲೆ ಅನೇಕ ಪರಿಣಾಮಗಳಾಗಿರುವುದು ಕಂಡುಬಂದಿದೆ. ಹಾಗೇ ಜಾಗತೀಕರಣದ ಪ್ರಭಾವದಿಂದ ಮಾನವನ ಬದುಕಿನ ಚಿತ್ರಣ ಯಾವ ರೀತಿಯಾಗಿದೆ ಎಂದು ಕಾವ್ಯ ಅಭಿವ್ಯಕ್ತಿಸುತ್ತಿದೆ. ಅದರಲ್ಲಿ ಮುಖ್ಯವಾಗಿ ಧರ್ಮ, ಜಾತಿ, ಲಿಂಗ, ವ್ಯಾಖ್ಯಾನಗಳ ಹೊಸ ರೂಪ ಪಡೆದಂತಿವೆ. ಇವುಗಳಲ್ಲದೆ ಸಮಕಾಲೀನ ಕಾವ್ಯಕ್ಕೆ ಸಂಗತಿಗಳೆಂದರೆ, ಭ್ರಷ್ಟಾಚಾರ, ಧಾರ್ಮಿಕಹಿಂಸೆ, ನೈತಿಕ ಅಧಃಪತನ, ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ಮತ್ತು ಕೌಟುಂಬಿಕ ವಿಘಟನೆ, ಹಸಿವು ಬಡತನ, ಕೋಮುವಾದ, ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಮೂಲಭೂತವಾದ ಹೀಗೆ ಇನ್ನೂ ಮುಂತಾದವುಗಳು. ಇವುಗಳು ಸಮಕಾಲೀನ ಕಾವ್ಯದಲ್ಲಿ ವಿಶೇಷವಾಗಿ ವಿಶಿಷ್ಟಪದ ರಚನೆಯಿಂದ ಅಭಿವ್ಯಕ್ತಗೊಂಡಿವೆ.

ಇತ್ತೀಚಿನ ಕನ್ನಡ ಕಾವ್ಯ ವರ್ತಮಾನದ ಕೈಗನ್ನಡಿಯಾಗಿದೆ. ಸಮಾಜವು ಚಲನಶೀಲವಾದಂತೆ ಕಾವ್ಯವೂ ಸಹ ತನ್ನ ಚಹರೆಗಳನ್ನು ವಿಸ್ತರಿಸಿಕೊಳ್ಳುತ್ತಾ ಹೊಸ ಹೊಸ ಆಲೋಚನೆ, ಚಿಂತನೆಗಳನ್ನು ರೂಪಿಸುತ್ತಿದೆ. ಹಾಗೇ ಕನ್ನಡ ಕಾವ್ಯ ಆರಂಭದಿಂದಲೂ ತನ್ನ ವೈವಿಧ್ಯತೆಯನ್ನು ಸಾರುತ್ತ ಇಲ್ಲಿಯವರೆಗೆ ತನ್ನದೇ ಆದ ನೆಲೆಯನ್ನು ಕಾಪಾಡಿಕೊಂಡಿದೆ. ಈ ಪರಂಪರೆಯ ಹಾದಿಯನ್ನು ಇತ್ತೀಚಿನ ಕಾವ್ಯ ಮುಂದುವರಿಕೆಯ ಕೊಂಡಿಯಾಗಿದೆ. ಹಾಗೇ ತನ್ನ ಕಾಲಘಟ್ಟದ ಸಂವೇದನೆಗಳನ್ನು ಹೊಸ ರೀತಿಯಲ್ಲಿ ಅಭಿವ್ಯಕ್ತಿಸುವುದರೊಂದಿಗೆ ಹೊಸ ಸಂವೇದನೆಗಳನ್ನು ಸೃಷ್ಟಿಸುತ್ತಿದೆ. ಹೊಸ ಪ್ರಯೋಗಗಳನ್ನು ರೂಪಕಗಳನ್ನು ಆಶಯವನ್ನು ವಿಶೇಷವಾಗಿ ಸೃಷ್ಟಿಮಾಡುತ್ತಿರುವುದು ವಿಶಿಷ್ಟವಾಗಿದೆ.

ಸಮಕಾಲೀನ ಸಂದರ್ಭದ ಸವಾಲುಗಳು ಮತ್ತು ತಲ್ಲಣಗಳನ್ನು ಅಭಿವ್ಯಕ್ತಿಸಿ ಹೊಸ ಚಿಂತನೆಯನ್ನು ಸೃಷ್ಟಿಸಲು ಮುಂದಾಗಿದೆ. ಹಾಗೇ ಕಾಲದ ಸಾಮಾಜಿಕ ಬಿಕ್ಕಟ್ಟು ಮತ್ತು ತುಡಿತಗಳನ್ನು ಒಳಗೊಂಡಿದೆ. ರಾಜಕೀಯ, ಶಿಕ್ಷಣ, ಆರ್ಥಿಕ, ಮಹಿಳಾ ಅಸ್ಮಿತೆಯ ಪ್ರಶ್ನೆ, ಜಾತಿಯ ಪ್ರಶ್ನೆ, ಇನ್ನಿತರ ಹಲವಾರು ವರ್ತಮಾನದ ಸಮಸ್ಯೆಗಳ ಕುರಿತಾಗಿ ಮಿಡಿದಿರುವುದು ಕಾಣುತ್ತೇವೆ. ಇತ್ತೀಚಿನ ಕಾವ್ಯ ಸಮಕಾಲೀನ ಸೂಕ್ಷ್ಮ ಸಂವೇದನೆಗಳನ್ನು ಒಂದು ತಾತ್ವಿಕ ನೆಲೆಯಲ್ಲಿ ವ್ಯಕ್ತಪಡಿಸುವುದು ಕಂಡುಬಂದಿದೆ. ಈ ತಾತ್ವಿಕತೆಯ ನೆಲೆಗಳು ಏಕ ಮುಖವಾಗಿರದೆ ಬಹುಮುಖ ನೆಲೆಯದ್ದಾಗಿರುವುದು ವಿಶೇಷವಾಗಿದೆ. ಹೆಚ್ಚು ಕಂಡುಬರುವ ಒಲವು ಸೌಹಾರ್ದ ಮತ್ತು ಪ್ರೀತಿಗಾಗಿ ಎನ್ನುವುದು ವಿಶೇಷ ಸಂಗತಿಯಾಗಿದೆ.

## ೧.೧. ಅಧ್ಯಯನದ ಉದ್ದೇಶ

ಇತ್ತೀಚಿನ ಕನ್ನಡ ಕಾವ್ಯ ತಾತ್ವಿಕ ನೆಲೆಗಳು ಎಂಬ ವಿಷಯವನ್ನು ಸಂಶೋಧನೆಗೆ ಆಯ್ದುಕೊಂಡಿದ್ದು. ಪ್ರಸ್ತುತ ಅಧ್ಯಯನದ ಉದ್ದೇಶವನ್ನು ಈ ಮುಂದಿನಂತೆ ಗುರುತಿಸಿಕೊಳ್ಳಲಾಗಿದೆ.

೧. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ಹಾಗೂ ಕಾವ್ಯಗಳ ಮೇಲೆ ಸಾಕಷ್ಟು ಅಧ್ಯಯನಗಳು ವಿಭಿನ್ನ ನೆಲೆಗಳಲ್ಲಿ ನಡೆದಿರುತ್ತವೆ. ಸಮಕಾಲೀನ ಸಮಾಜದ ಆಗು-ಹೋಗುಗಳನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಸಮಕಾಲೀನ ಯುವಬರಹಗಾರರ ಕಾವ್ಯಗಳ ಮೇಲೆ ಹೆಚ್ಚಿನ ಅಧ್ಯಯನಗಳು ನಡೆದಿರುವುದಿಲ್ಲ. ಆದ್ದರಿಂದ ಈ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವ ಉದ್ದೇಶವನ್ನು ಪ್ರಸ್ತುತವು ಒಳಗೊಂಡಿದೆ.

೨. ಇತ್ತೀಚಿನ ದಿನಮಾನಗಳಲ್ಲಿ ರಚನೆಯಾಗುತ್ತಿರುವ ಕಾವ್ಯಗಳು ಕೇವಲ ಮನರಂಜನೆಯ ಮಾಧ್ಯಮವಾಗಿ, ವರ್ಣನೆಯಂತಹ ಅಂಶಗಳನ್ನು ಮಾತ್ರ ಒಳಗೊಂಡಿಲ್ಲ. ಅದರಾಚೆ ಸಾಮಾಜಿಕ ಕಳಕಳಿಯನ್ನು ಹೊಂದಿರುವುದು ಕಂಡುಬರುತ್ತದೆ. ಇಂತಹ ಸಾಮಾಜಿಕ ಆಶಯವೊತ್ತ ವಿಭಿನ್ನ ತಾತ್ವಿಕ ನೆಲೆಗಳನ್ನು ಗುರುತಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

೩. ಇತ್ತೀಚಿನ ಕನ್ನಡ ಕಾವ್ಯ ಪರಂಪರೆಯಲ್ಲಿ ವಿವಿಧ ಧರ್ಮ ಹಾಗೂ ಸಮುದಾಯದ ಯುವ ಬರಹಗಾರರು ತಮ್ಮ ಪ್ರಾತಿನಿಧ್ಯವನ್ನು ಪ್ರದರ್ಶಿಸಿದ್ದಾರೆ. ವಿಭಿನ್ನವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದಲ್ಲಿ ಬೆಳೆದುಬಂದಿರುವ ಈ ಬರಹಗಾರರ ಕಾವ್ಯಗಳು ವಿಭಿನ್ನ ಶೈಲಿ ಮತ್ತು ವಸ್ತು ವಿಷಯವನ್ನು ಒಳಗೊಂಡಿವೆ. ಈ ವಿಭಿನ್ನ ನೆಲೆಗಳ ಹಿಂದಿನ ತಾತ್ವಿಕತೆಯನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೪. ಇತ್ತೀಚಿನ ಕನ್ನಡ ಕಾವ್ಯಗಳ ಹಿಂದೆ ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳಾದ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಹಾಗೂ ದಲಿತ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವವಿದ್ದರೂ

ಅದರಾಚೆ ಬಂದು ಕಾವ್ಯರಚನೆಗೆ ಮುಂದಾಗಿರುವ ಹಲವು ಮಾದರಿಗಳು ಸಮಕಾಲೀನ ಕಾವ್ಯಗಳಲ್ಲಿ ಕಂಡುಬರುತ್ತವೆ. ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳ ಆಶಯಗಳಿಗಿಂತ ಭಿನ್ನ ಧೋರಣೆಯುಳ್ಳ ಇತ್ತೀಚಿನ ಕಾವ್ಯಗಳ ತಾತ್ವಿಕ ಧೋರಣೆಯನ್ನು ಅರಿಯುವುದು ಮತ್ತು ಅಧ್ಯಯನಕ್ಕೆ ಒಳಪಡಿಸುವುದು ಪ್ರಸ್ತುತ ಅಧ್ಯಯನ ಉದ್ದೇಶಗಳಲ್ಲೊಂದಾಗಿದೆ.

೫. ಇತ್ತೀಚಿನ ಕನ್ನಡ ಕಾವ್ಯಗಳು ಜಾಗತಿಕ ಸಮಸ್ಯೆಗಳಾದ ಭಯೋತ್ಪಾದನೆ ಯುದ್ಧ ನೀತಿಯಂತಹ ಮಾರಕ ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವ ನೆಲೆಯಲ್ಲಿ ಮೂಡಿಬಂದಿವೆ. ಇಂತಹ ವಿಶ್ವಾತ್ಮಕ ದೃಷ್ಟಿಕೋನದ ತಾತ್ವಿಕ ನೆಲೆಯನ್ನು ಗುರುತಿಸುವ ಉದ್ದೇಶವನ್ನು ಪ್ರಸ್ತುತ ಪ್ರಬಂಧವು ಒಳಗೊಂಡಿದೆ.

೬. ಇತ್ತೀಚಿನ ಕನ್ನಡ ಕಾವ್ಯಗಳು ಸಾಮಾಜಿಕ ಸಮಸ್ಯೆಗಳಾದ ಕೋಮುವಾದ, ಮೂಲಭೂತವಾದ, ಅತಿಯಾದ ಧಾರ್ಮಿಕ ಮನೋಭಾವದ ಕುರಿತು ವ್ಯಕ್ತಪಡಿಸಿದ ಪ್ರತಿಕ್ರಿಯನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

೭. ಇತ್ತೀಚಿನ ಕನ್ನಡ ಕಾವ್ಯದ ಹೊಸ ಸಂವೇದನೆಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

೮. ಕಾವ್ಯ ಪರಂಪರೆಯ ಹಿನ್ನೆಲೆಯಲ್ಲಿ ಹಿಂದಿನ ಮತ್ತು ಇಂದಿನ ಇತ್ತೀಚಿನ ಕಾವ್ಯದ ಭಿನ್ನತೆಯನ್ನು ಪತ್ತೆಹಚ್ಚುವುದು.

೯. ಜಾಗತೀಕರಣದ ಪ್ರಭಾವಕ್ಕೆ ಮಾನವ ಸಂಬಂಧಗಳು ಮತ್ತು ಆರ್ಥಿಕತೆ ಯಾವ ಸ್ವರೂಪದ್ದಾಗಿದೆ ಎಂಬ ಅರಿವು ಮೂಡಿಸುವಲ್ಲಿ ಕಾವ್ಯ ಯಾವ ರೀತಿಯಾಗಿ ಸ್ಪಂದಿಸಿವೆ, ಅಭಿವ್ಯಕ್ತಿಸಿದೆ ಎಂಬುದನ್ನು ಅರಿಯುವುದು.

೧೦. ಮತಿಯ ಸಂಘರ್ಷದ ಸಂದರ್ಭದಲ್ಲಿ ಸಮಕಾಲೀನ ಕನ್ನಡ ಕಾವ್ಯ ಸೌಹಾರ್ದತೆಯನ್ನು ಪ್ರತಿಪಾದಿಸಿದ ಹಾಗೂ ಹಂಬಲಿಸಿದ ಸ್ವರೂಪವನ್ನು ಅರಿಯುವುದು.

೧೧. ಆಧುನಿಕ ಸಂದರ್ಭದಲ್ಲಿ ಮೌಢ್ಯತೆಯನ್ನು ಜಪಿಸುವ ಸಂಪ್ರದಾಯಸ್ಥ ಮನಸ್ಸುಗಳಿಗೆ ವೈಚಾರಿಕತೆಯ ನೆಲೆಯನ್ನು ಹೇಗೆ ಸಮಕಾಲೀನ ಕನ್ನಡ ಕಾವ್ಯ ಧ್ವನಿಸಿದೆ ಎಂಬುದನ್ನು ಅಧ್ಯಯನ ಮಾಡುವುದು.

೧೨. ಇತ್ತೀಚಿನ ಕನ್ನಡ ಕಾವ್ಯದ ತಾತ್ವಿಕ ನೆಲೆಗಳ ಕುರಿತಾಗಿ ಒಂದು ಅನನ್ಯ ಶೋಧವನ್ನು ಮಾಡುವ ಉದ್ದೇಶ ಈ ಅಧ್ಯಯನ ಒಳಗೊಂಡಿದೆ.

೧೩. ಇತ್ತೀಚಿನ ಕನ್ನಡ ಕಾವ್ಯ ಒಳಗೊಂಡಿರುವ ಮುಖ್ಯ ಒಲವುಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

೧೪. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಅನೇಕ ಮಹಿಳಾ ಕವಯತ್ರಿಯರು ಬರೆಯುತ್ತಿದ್ದಾರೆ. ಈ ಹಿಂದೆ ಇದ್ದ ಮಹಿಳಾ ಸಂವೇದನೆಗಿಂತ, ಜಾಗತೀಕರಣದ ಪ್ರಭಾವಕ್ಕೆ ಒಳಗಾದ ಮಹಿಳಾ ಬದುಕಿನ ಚಿತ್ರಣವನ್ನು ಇತ್ತೀಚಿನ ಕನ್ನಡ ಕಾವ್ಯಯಾನ ರೀತಿಯಾಗಿ ಅಭಿವ್ಯಕ್ತಿಸಿದೆ ಎಂಬುದು ಅರಿಯುವುದು.

೧೫. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಮಹಿಳಾ ಅಸ್ಮಿತೆಯ ನೆಲೆಗಳನ್ನು ಗುರುತಿಸುವುದು ಹಾಗೂ ಪರಂಪರೆ ಮತ್ತು ಆಧುನಿಕತೆ, ಪುರಾಣದ ಪಾತ್ರಗಳನ್ನು ವಿಭಿನ್ನ ನೆಲೆಯಲ್ಲಿ ಮರುಸೃಷ್ಟಿ ಮಾಡಿ ಬಗೆಯನ್ನು ಅರಿಯುವುದು.

## ೧.೨. ಅಧ್ಯಯನದ ವ್ಯಾಪ್ತಿ

ಕನ್ನಡ ಕಾವ್ಯಲೋಕವು ಇಂದು ನಿನ್ನೆಯದಲ್ಲ. ಅದರ ಇತಿಹಾಸ ತುಂಬಾ ದೊಡ್ಡದು. ಹಿಂದೆಂದಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಅನೇಕರು ಸಾಹಿತ್ಯ ಕೃಷಿಯಲ್ಲಿ ತೊಡಗಿ ಕಾವ್ಯರಚನೆ ಮಾಡುತ್ತಿದ್ದಾರೆ. ಹಾಗೆಯೇ ಅವರ ಅನುಭವಗಳು ಕೂಡ ಭಿನ್ನವಾದಂತಿವೆ, ಸಂವೇದನೆಗಳು ನುಡಿಗಟ್ಟುಗಳು ಹೊಸ ಬಗೆಯಲ್ಲಿವೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಯನ್ನು ೨೦೦೦ ರಿಂದ ೨೦೧೬ರವರೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಅಂದರೆ ಇಪ್ಪತ್ತೊಂದನೆಯ ಶತಮಾನದ ಮೊದಲ ಕಾಲಘಟ್ಟದಲ್ಲಿ ರಚನೆಗೊಳ್ಳುತ್ತಿರುವ ಕೃತಿಗಳು ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ಹಾಗೆಯೇ ಇತ್ತೀಚಿನ ಕನ್ನಡ ಕಾವ್ಯವನ್ನು ಇತ್ತೀಚೆಗೆ ಬರೆಯುತ್ತಿರುವ ಯುವ ಪೀಳಿಗೆಯನ್ನು ಅನುಸರಿಸಿ ಅಂದರೆ ೪೦ ವರ್ಷದೊಳಗಿನ ಕವಿಗಳ ಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿದೆ. ಅದರಲ್ಲಿ ಕಾವ್ಯ ರಚನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಂಡ ಕವಿಗಳ ಕಾವ್ಯವನ್ನು ಆಯ್ದು ಕೃತಿಗಳ ಅಧ್ಯಯನದ ವ್ಯಾಪ್ತಿಗೆ ಒಳಗೊಂಡಿವೆ.

## ೧.೩. ಅಧ್ಯಯನದ ವಿಧಾನ

ಪ್ರಸ್ತುತ ಸಂಶೋಧನ ವಿಷಯವಾಗಿರುವ "ಇತ್ತೀಚಿನ ಕನ್ನಡ ಕಾವ್ಯ : ತಾತ್ವಿಕ ನೆಲೆಗಳು" ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲು ಕೆಲವು ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಅವುಗಳು ಈ ಮುಂದಿನಂತಿವೆ. ಪ್ರಸ್ತುತ ಅಧ್ಯಯನ ವಿಷಯವು ಪಠ್ಯಕೇಂದ್ರಿತವಾಗಿರುವುದಕ್ಕೆ ಸಮಕಾಲೀನ ಸಂದರ್ಭದ ಕೆಲವು ನಿಗದಿತ ಕಾವ್ಯಕೃತಿಗಳನ್ನು ನಿಗದಿಪಡಿಸಿಕೊಳ್ಳಲಾಗಿದೆ. ಈ ನಿಗದಿತ ಪಠ್ಯಗಳನ್ನು ವಿಶ್ಲೇಷಣೆ ಮತ್ತು ವ್ಯಾಖ್ಯಾನ ಮಾದರಿಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸ್ತುತ ಸಂಶೋಧನ ವಿಷಯವು ಪಠ್ಯಕೇಂದ್ರಿತವಾಗಿದ್ದರೂ ಕಾವ್ಯ ಕ್ಷೇತ್ರದಲ್ಲಿ ಹೆಚ್ಚು ಅನುಭವ ಹೊಂದಿರುವ ಹಲವು ಕವಿಗಳೊಂದಿಗೆ ಚರ್ಚೆ ಸಂವಾದ, ಸಂದರ್ಶನದ ಮೂಲಕ ಪ್ರಸ್ತುತ ವಿಷಯಕ್ಕೆ ಪೂರಕವಾದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಹಾಗೆಯೇ ಸಮಕಾಲೀನ ಸಂದರ್ಭದ ತರುಣ ಕವಿಗಳೊಂದಿಗೆ ಚರ್ಚೆ, ಸಂವಾದ ಮಾಡುವ ಮೂಲಕ ಕಾವ್ಯ ರಚನೆಯ ಆಶಯ, ಪ್ರೇರಣೆ ಮತ್ತು ಪ್ರಭಾವಗಳ ಕುರಿತಾಗಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಈ ಎಲ್ಲಾ ವಿಧಾನಗಳ ಜೊತೆಗೆ ಇದುವರೆಗೂ ಕಾವ್ಯ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನದ ಮಾದರಿಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಪ್ರಸ್ತುತ ವಿಷಯಕ್ಕೆ ಮೇಲಿನ ಎಲ್ಲಾ ವಿಧಾನಗಳನ್ನು ಅಳವಡಿಸಿಕೊಂಡು ವಿಮರ್ಶಾತ್ಮಕ ನೆಲೆಯಲ್ಲಿ ಅಧ್ಯಯನವನ್ನು ಮುಂದುವರೆಸಲಾಗಿದೆ.

* ಇತ್ತೀಚಿನ ಕನ್ನಡ ಕಾವ್ಯದಲ್ಲಿ ವ್ಯಕ್ತವಾಗುವ ವಸ್ತು ವಿಷಯ ಮತ್ತು ಆಶಯವನ್ನು ಅಭಿವ್ಯಕ್ತಗೊಂಡಿದೆ ಎಂಬುದನ್ನು ಗ್ರಹಿಸುವುದು.
* ಆಶಯದ ಚರ್ಚೆಯನ್ನು ಆ ಕೃತಿಯ ಮೂಲಕ ವಿಶ್ಲೇಷಣೆ ಮಾಡುವುದು.
* ಇತ್ತೀಚಿನ ಕನ್ನಡ ಕಾವ್ಯ ಯಾವ ರೀತಿಯಾಗಿ ತನ್ನ ಪರಂಪರೆಗಿಂತ ಭಿನ್ನವಾಗಿದೆ ಎಂಬುದನ್ನು ವಿಮರ್ಶಾತ್ಮಕ ವಿಧಾನದಿಂದ ಅಧ್ಯಯನ ಮಾಡುವುದು.
* ಇತ್ತೀಚಿನ ಕನ್ನಡ ಕಾವ್ಯದಲ್ಲಿ ವ್ಯಕ್ತವಾದ ವರ್ತಮಾನದ ಸಂಸ್ಕೃತಿಯ ದರ್ಶನದ ಹುಡುಕಾಟ ಜಿಜ್ಞಾಸೆಯನ್ನು ಮಾಡುವ ಪ್ರಯತ್ನ ಮಾಡಲಾಗುವುದು.
* ಒಂದೇ ಕವಿತೆಯಲ್ಲಿ ಹಾಗೂ ಒಂದೇ ಸಂಕಲನದಲ್ಲಿ ವ್ಯಕ್ತಗೊಂಡಿರುವ ಹಲವು ಬಹುಕೇಂದ್ರಿಯ ತಾತ್ವಿಕ ನಿಲುವುಗಳನ್ನು ಪರಿಶೀಲಿಸಲಾಗುವುದು.
* ಇತ್ತೀಚಿನ ಕನ್ನಡಕಾವ್ಯದ ಕುರಿತು ಬಂದಿರುವ ವಿಮರ್ಶಾ ಲೇಖನಗಳನ್ನು ಬಳಸಿಕೊಂಡು ವಿಶ್ಲೇಷಿಸುವುದು ಹಾಗೂ ವಿಮರ್ಶಿಸುವುದು.
* ಸಮಕಾಲೀನ ಕನ್ನಡ ಕಾವ್ಯದಲ್ಲಿ ವ್ಯಕ್ತಗೊಂಡಿರುವ ವೈರುಧ್ಯ ಮತ್ತು ಬಿಕ್ಕಟ್ಟುಗಳ ಮೂಲಕ ಅರ್ಥಮಾಡಿಕೊಳ್ಳುವ ವಿಧಾನ.
* ಕಾವ್ಯ ಅಭಿವ್ಯಕ್ತಿಸಿದ ತಾಂತ್ರಿಕ ನಿಲುವುಗಳಿಗೆ ಪದ್ಯಗಳನ್ನು ಗುರುತಿಸಿ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸುವ ವಿಧಾನದಿಂದ ಅಧ್ಯಯನ ಮಾಡುವುದು.

## ೧.೪. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ತನ್ನದೇ ಆದ ಮಹತ್ವವನ್ನು ಒಳಗೊಂಡಿದ್ದು. ಅವುಗಳನ್ನು ಈ ಮುಂದಿನಂತೆ ತಿಳಿಯಬಹುದಾಗಿದೆ.

ಸಾಹಿತ್ಯವು ಆಯಾಕಾಲದ ಸಾಮಾಜಿಕ ವಿದ್ಯಾಮಾನಗಳನ್ನು ಪ್ರತಿನಿಧಿಸುತ್ತದೆ. ಈ ಹಿನ್ನೆಲೆಯಲ್ಲಿ ಸಮಕಾಲೀನ ಸಮಾಜದ ತಲ್ಲಣಗಳನ್ನು ಅರಿಯುವುದಕ್ಕೆ ಇತ್ತೀಚಿನ ಕಾವ್ಯ ಪ್ರಕಾರವು ಒಂದು ಪ್ರಮುಖ ಮಾಧ್ಯಮವಾಗಿ ಕಂಡುಬರುತ್ತದೆ. ಆದ್ದರಿಂದ ವರ್ತಮಾನದ ಸಮಾಜದ ಚಿತ್ರಣವನ್ನು ಕಾವ್ಯಗಳಲ್ಲಿ ಸೆರೆಹಿಡಿದಿರುವ ಕ್ರಮದಲ್ಲಿ ಅಂತರ್ಗತವಾಗಿರುವ ತಾತ್ವಿಕ ಹಿನ್ನೆಲೆಯನ್ನು ಅಧ್ಯಯನ ಮಾಡುವುದರಿಂದ ಇತ್ತೀಚಿನ ಕವಿಗಳ ತುಡಿತಗಳನ್ನು ಅರಿಯುವುದಕ್ಕೆ ಸಹಕಾರಿಯಾಗುತ್ತದೆ. ಈ ಕಾರಣದಿಂದ ಪ್ರಸ್ತುತ ಅಧ್ಯಯನವು ಮಹತ್ವವೆಂದು ತಿಳಿಯಲಾಗಿದೆ.

ಇತ್ತೀಚಿನ ಕಾವ್ಯಗಳು ಯಾವುದೇ ಒಂದು ನಿರ್ದಿಷ್ಟ ಸಾಹಿತ್ಯ ಪ್ರಕಾರದ ಆಶಯಗಳಿಗೆ ಸೀಮಿತವಾಗದೆ. ಸ್ವಾತಂತ್ರ್ಯ ದೃಷ್ಟಿಕೋನದ ಅಡಿಯಲ್ಲಿ ತನ್ನ ವಿಸ್ತಾರತೆಯನ್ನು ಹೆಚ್ಚಿಸಿಕೊಳ್ಳುತ್ತಿದೆ. ಹೀಗಾಗಿ ಸಮಕಾಲೀನ ಸಂದರ್ಭದ ಕವಿಗಳ ರಚನೆಯಾಗಿರುವ ಕಾವ್ಯ ಪ್ರಕಾರಗಳು ಭಿನ್ನ ಭಿನ್ನವಾದ ಆಶಯವನ್ನು ಹೊಂದಿದೆ. ಹಾಗೆಯೇ ಒಬ್ಬನೇ ಕವಿ ತನ್ನ ಹಲವು ಕವಿತೆಗಳನ್ನು ಭಿನ್ನವಾದ ತಾತ್ವಿಕತೆಯೊಳಗೆ ಕಾವ್ಯರಚನೆಗೆ ಮುಂದಾಗಿರುವುದು ಕಂಡುಬರುತ್ತದೆ. ಇಂತಹ ಕಾವ್ಯಗಳನ್ನು ವಿಭಿನ್ನವಾದ ತಾತ್ವಿಕ ವಿನ್ಯಾಸದ ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸುವುದು ಮಹತ್ವಪೂರ್ಣವಾಗುವುದಾಗಿದೆ.

ಇತ್ತೀಚಿನ ಕಾವ್ಯಗಳು ವಿಭಿನ್ನವಾದ ಮಾದರಿಗಳಲ್ಲಿ ಬೆಳೆದು ಬಂದಿವೆ. ಈ ವಿಭಿನ್ನ ಮಾದರಿಗಳ ತಾತ್ವಿಕ ವಿನ್ಯಾಸಗಳನ್ನು ವರ್ಗೀಕರಿಸಿಕೊಂಡು ಈ ಮಾದರಿಗಳು ಸಾಮಾಜಿಕ ಸಮಸ್ಯೆಗಳಿಗೆ ಹೇಗೆ ತನ್ನ ಸ್ಪಂದನೆಯನ್ನು ವ್ಯಕ್ತಪಡಿಸುತ್ತವೆ. ಎಂಬುದನ್ನು ಅಧ್ಯಯನಕ್ಕೆ ಒಳಪಡಿಸುವುದರಿಂದ ವಿಶಿಷ್ಟವಾದ ತಾತ್ವಿಕ ನೆಲೆಗಳನ್ನು ಗುರುತಿಸುವುದಕ್ಕೆ ಸಹಕಾರಿಯಾಗುತ್ತದೆ. ಇದರಿಂದ ಕಾವ್ಯ ಮತ್ತು ಸಮಕಾಲೀನ ಸಮಾಜದ ನಡುವಿನ ಸಂಬಂಧದ ಎಳೆಗಳನ್ನು ಗುರುತಿಸಬಹುದಾಗಿದೆ.

ಸಾಹಿತ್ಯ ಪರಂಪರೆಯಲ್ಲಿ ಕಾವ್ಯಕ್ಕೆ ತನ್ನದೇ ಆದ ಚಾರಿತ್ರಿಕ ಪರಂಪರೆಯಿದೆ, ಈ ಚಾರಿತ್ರಿಕ ಪರಂಪರೆಯಲ್ಲಿ ಕಾವ್ಯವು ಶೈಲಿ ಮತ್ತು ತಂತ್ರಗಾರಿಕೆಯಲ್ಲಿ ಹಲವು ಮಾರ್ಪಾಡು ಗಳೊಂದಿಗೆ ಬೆಳೆದು ಬಂದಿದೆ. ಹಾಗೆಯೇ ಇತ್ತೀಚಿನ ಕಾವ್ಯಗಳಲ್ಲಿ ಹೊಸದಾಗಿ ಸೇರ್ಪಡೆ ಗೊಳ್ಳುತ್ತಿರುವ ವಿವಿಧ ವಿನ್ಯಾಸ ಶೈಲಿ ಮತ್ತು ತಂತ್ರಗಾರಿಕೆಯನ್ನು ಗುರುತಿಸುವುದು ಮಹತ್ವದ ಕಾರ್ಯವಾಗಿದೆ.



ಅಧ್ಯಾಯ : ಎರಡು

# ಇತ್ತೀಚಿನ ಕನ್ನಡ ಕಾವ್ಯದ ಅಧ್ಯಯನದ ತಾತ್ವಿಕ ಸಮೀಕ್ಷೆ

ಕನ್ನಡವೂ ಒಳಗೊಂಡಂತೆ ಜಗತ್ತಿನ ಯಾವುದೇ ಭಾಷೆಯ ಕಾವ್ಯ ಪರಂಪರೆಯನ್ನು ಪರಿಶೀಲಿಸಿದರೆ ಅದು ಆಯಾ ಕಾಲಕ್ಕೆ ತಕ್ಕಂತೆ ಹಲವು ಪರಿವರ್ತನೆಗಳಿಗೆ ಒಳಗಾಗಿ ಬೆಳೆಯುತ್ತ ಬಂದಿರುವುದನ್ನು ಕಾಣಬಹುದು. ಪ್ರತಿಯೊಂದು ಕವಿತೆ, ಕೃತಿಯೂ ಕೂಡ ತನ್ನ ಸುತ್ತಣ ಸಮಾಜದ ವಿದ್ಯಮಾನಗಳಿಗೆ ಕಳಕಳಿ ಅಥವಾ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಲೇ ತನ್ನ ಸಮಕಾಲೀನ ಆಗುಹೋಗುಗಳಿಗೂ ಸಹ ಪ್ರತಿಸ್ಪಂದಿಸುವುದನ್ನು ನಾವು ಗಮನಿಸಬಹುದು.

ಹೊಸ ತಲೆಮಾರಿನ ಇತ್ತೀಚಿನ ಕಾವ್ಯದ ಬಗೆಗೆ ವ್ಯಾಪಕವಾದ ಅಧ್ಯಯನಗಳಾಗಿಲ್ಲವೆಂದೇ ಹೇಳಬೇಕು. ಅಂಶಿಕವಾಗಿ ಮುನ್ನುಡಿ, ಬೆನ್ನುಡಿ, ರೂಪದ ಅಭಿಪ್ರಾಯಗಳು, ಅನಿಸಿಕೆಗಳು ಹಾಗೂ ವಾರ್ಷಿಕ ವಿಶೇಷ ಸಂಚಿಕೆಗಳಲ್ಲಿನ ಕೆಲವು ಲೇಖನಗಳು, ಬಿಡಿ ಬಿಡಿ ಪದ್ಯದ ಕುರಿತು ವಿಶ್ಲೇಷಣೆಗಳು ಹಾಗೂ ವಿಚಾರ ಸಂಕಿರಣಗಳು ಇನ್ನು ಮುಂತಾದವು ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತು ಅಲ್ಲಲ್ಲಿ ಚರ್ಚಿಸಿರುವುದನ್ನು ಕಾಣಬಹುದು. ಇಡಿಯಾಗಿ ಸಂಶೋಧನೆ ಇನ್ನು ಒಳಗೊಂಡಿರದ ಕಾರಣ ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಪ್ರಬಂಧಗಳು ದೊರಕಿರುವುದಿಲ್ಲ. ಆದ್ದರಿಂದ ಲೇಖನ, ವಿಶ್ಲೇಷಣೆ, ಬೆನ್ನುಡಿ ಮುನ್ನುಡಿಗಳನ್ನೇ ಆಧರಿಸಿ ಸಮೀಕ್ಷೆ ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾದ ಕೆಲವು ಲೇಖನಗಳನ್ನು ಈ ಮುಂದಿನಂತೆ ವಿಶ್ಲೇಷಣೆಗೊಳಪಡಿಸಲಾಗಿದೆ.

### ಸಮಕಾಲೀನ ಸಾಹಿತ್ಯ ಸೃಷ್ಟಿಯ ಆಂತರಿಕ ನೆಲೆಗಳು

ಈ ಲೇಖನದಲ್ಲಿ ಎಚ್.ಎಸ್. ರಾಘವೇಂದ್ರರಾವ್ ಅವರು ಸಮಕಾಲೀನ ಕಾವ್ಯ ರಚನೆಗೊಳ್ಳುತ್ತಿರುವ ಆಂತರಿಕ ನೆಲೆಗಳ ಕುರಿತು ವಿಶ್ಲೇಷಣೆ ಮಾಡುತ್ತ ಕಾವ್ಯ ಮತ್ತು ಸಮಾಜವನ್ನು ಬೇರೆ ಬೇರೆಯಾಗಿ ನೋಡುವ ಕ್ರಮ ಸರಿಯಾದದ್ದಲ್ಲ ಎಂದು ಹೇಳುತ್ತ, ಸಮಕಾಲೀನ ಸಾಹಿತ್ಯದ ಆಲೋಚನ ಕ್ರಮಗಳ ಕುರಿತು ಹೊಸ ಮಾದರಿಗಳು ಹೇಗೆ ಹುಟ್ಟಿಕೊಳ್ಳುತ್ತಿವೆ ಅವುಗಳ ಆಂತರಿಕ ತುಡಿತ, ವಿಚಾರ, ಚಿಂತನೆ ಯಾವ ಬಗೆಯಾದದ್ದು ಎಂದು ವಿವರಿಸುತ್ತಾರೆ.

ಸಾಹಿತ್ಯದ ಆಶಯ ಮತ್ತು ಆಕೃತಿಯ ನಡುವೆ ಪರಸ್ಪರ ಅವಲಂಬನೆ ಇರುತ್ತದೆ. ಅದರಂತೆ ಹೊಸ ಕಾಲದ ಹೊಸ ಸಮಾಜದ ಹೊಸ ಬದುಕಿನ ಪರಿಣಾಮ ಮತ್ತು ಸವಾಲುಗಳನ್ನು ವ್ಯಕ್ತಪಡಿಸುವುದರೊಂದಿಗೆ ಕಾವ್ಯ ತನ್ನ ಹೊಸ ಹಾದಿಯನ್ನು ತುಳಿಯುತ್ತದೆ. ಹಾಗೇ ಕವಿ ಮತ್ತು ಸಮುದಾಯದ ಹೊಸ ಜೀವನ ಕ್ರಮ ಬದುಕಿನ ಚಿತ್ರಣ ಕಾವ್ಯ ನೀಡುತ್ತದೆ. ಇದರ ಮೂಲಕ ಚರಿತ್ರೆಯ ಹಿಡಿತ ಸಾಧಿಸಬಹುದು ಎಂದಿದ್ದಾರೆ. ಹೊಸಹಾದಿ ರೂಪಗೊಳ್ಳುವ ಬಗೆಗೆ ಅಡಿಗರ ಕಾವ್ಯದ ಸಾಲುಗಳನ್ನು ಉದಾಹರಿಸಿರುವುದು ವಿಶೇಷವಾಗಿದೆ. "ನನ್ನ ನುಡಿಯಲೇ ಬಣ್ಣಿಸುವ ಪನ್ನತಿಕೆ ಬರುವತನಕ ನನ್ನ ಬಾಳಿದು ನರಕ" ಎನ್ನುವ ಸಾಲುಗಳು ಹೊಸತನಕ್ಕೆ ಹಂಬಲಿಸುವುದರ ಸೂಚಕವಾಗಿದೆ. ಇದು ಪ್ರತಿ ಕಾಲದಲ್ಲೂ ನಡೆಯುತ್ತಿರುವ ಬಯಕೆಯಾಗಬೇಕು ಆಗ ಮಾತ್ರ ಹೊಸ ಆಶಯಗಳು ಆಕೃತಿಗಳು, ಸಂವೇದನೆಗಳು ರೂಪುಗೊಳ್ಳುತ್ತಿವೆ. ಅದರಂತೆ ಸಮಕಾಲೀನ ಕಾವ್ಯ ಅನೇಕ ಹೊಸ ಸಂವೇದನೆ, ಆಶಯವನ್ನು ಹೊತ್ತು ಸಾಗುತ್ತಿದೆ ಎಂದು ವಿವರಿಸಿದ್ದಾರೆ.

ಕಾವ್ಯ ಸೃಷ್ಟಿಯಾದ ನಂತರ ಚಿಂತನೆಗಳನ್ನು ನೋಡುವುದು ಸರಿಯಾದುದ್ದಲ್ಲ ಚಿಂತನೆಯನ್ನು ಸೃಷ್ಟಿಗೊಳ್ಳಿಸುವಲ್ಲಿ ಅನೇಕ ಸವಾಲುಗಳಿವೆ. ಆ ಸವಾಲುಗಳನ್ನು ಕಾವ್ಯ ಎದುರಿಸಿದರೆ ಕಾವ್ಯ ಪಕ್ವತೆಯನ್ನು ಪಡೆಯುತ್ತದೆ, ಹಾಗೇ ಆ ಸವಾಲುಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನದಲ್ಲೇ ಕಾವ್ಯ ಸೃಷ್ಟಿಯಾಗುತ್ತದೆ ಎಂದಿದ್ದಾರೆ. ತಾಂತ್ರಿಕತೆಯ ಜವಾಬ್ದಾರಿ ಕಾವ್ಯಕ್ಕೆ ಮಾತ್ರವಲ್ಲ ವ್ಯಕ್ತಿಗೂ ಅನ್ವಯವಾಗಬೇಕು ಆಧುನಿಕ ತಾತ್ವಿಕತೆಗೂ ಆಧುನಿಕೋತ್ತರ ತಾತ್ವಿಕತೆಗೂ ವ್ಯತ್ಯಾಸಗಳು ಇವೇ ಅದನ್ನು ಕಾವ್ಯ ಒಳಗೊಳ್ಳಬೇಕಾಗಿದೆ. ಹಾಗೇ ಸತ್ಯದ ಹಲವು ಮುಖಗಳನ್ನು ಪರಿಚಯಿಸಬೇಕಾಗಿದೆ. ಎಂದು ವಿವರಿಸಿರುವುದು ಈ ಲೇಖನದಲ್ಲಿ ಕಾಣುತ್ತೇವೆ. ಕವಿತೆಯು ಪಡೆಯುವ ಬಹಿರ್ಮುಖತೆಗೆ ನಾವು ಕಂಡುಕೊಂಡ ಪ್ರತಿಕ್ರಿಯೆಯು ಪಡೆಯುವ ಬಹುರ್ಮುಖತೆಗೆ ನಾವು ಕಂಡುಕೊಂಡ ಪ್ರತಿಕ್ರಿಯೆಯು ಅತಿಯಾಗಿ ಅಂತರ್ಮುಖವಾಗಿದೆ ಅಂತ ಅನಿಸುತ್ತದೆ ಎಂದು ಹೇಳಿ ಚಳುವಳಿಗಳನ್ನು ಉದಾಹರಣೆ ವಿಶ್ಲೇಷಿಸಿರುವುದು ಗಮನಿಸಬಹುದಾಗಿದೆ.

### ಹೊಸ ಮನುಷ್ಯನ ಸೃಷ್ಟಿ ಮತ್ತು ಸಾಹಿತ್ಯ

ಈ ಲೇಖನದಲ್ಲಿ ರಹಮತ್ ತರೀಕೆರೆ ಅವರು ಸಮಕಾಲೀನ ಕವಿಗಳ ಹಾಗೂ ಕಾವ್ಯ ತಲ್ಲಣಗಳಾಗಿ ನೋಡದೆ ನಮ್ಮ ಸಮಾಜದ ತಲ್ಲಣಗಳನ್ನು ನೋಡಬೇಕಾಗಿದೆ. ಅವುಗಳ ಮಧ್ಯ ಯಾವುದೇ ಅಂತರವಿಲ್ಲ ಇದಕ್ಕೆ ಕಾರಣ ನಮ್ಮ ನಾಡಿನ ಇತ್ತೀಚಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ವಿದ್ಯಮಾನಗಳಿಗೆ ಕಾವ್ಯ ನೀಡದ ಪ್ರತಿಕ್ರಿಯೆ ಹೇಗಿರಬೇಕು ಎನ್ನುವುದನ್ನು ಸೂಚಿಸಿದೆ. ನಾವು ಇಂದು ಕಾವ್ಯದ ಕುರಿತು ಮಾತನಾಡುತ್ತಿದ್ದೇವೆ ಎಂದರೆ ಸಮಾಜದ ಕುರಿತು ಮಾತನಾಡಿದಂತೆ, ಸಮಾಜದ ಕುರಿತು ಮಾತನಾಡಿದರೆ ಕಾವ್ಯದ ಕುರಿತು ಮಾತನಾಡಿದಂತೆ ಎಂದು ವಿಶ್ಲೇಷಿಸಿದ್ದಾರೆ. ಹಾಗೇ ಸಮಕಾಲೀನ ಕಾವ್ಯದಲ್ಲಿ ಮಾನವೀಯ ತುಡಿತಗಳ

ಮುಂದುವರಿಕೆಯ ಬಗೆ ಯಾವ ರೀತಿಯಾಗಿದೆ, ಸಾಗಿದೆ ಎನ್ನುವುದನ್ನು ವಿವರಿಸುತ್ತಾರೆ. ಒಂದು ಕಾವ್ಯದ ಅತ್ಯುತ್ತಮ ಆಶಯ, ಸಂವೇದನೆ, ಗುಣ ಸ್ವಭಾವ, ಅದು ಆ ಕಾವ್ಯದ ಗುಣ ಸ್ವಭಾವವಾಗಿರದೆ ಸಮಾಜದ ಲಕ್ಷಣವಾಗಿರುತ್ತದೆ. ಇದು ಕನ್ನಡ ಸಾಹಿತ್ಯದ ವಿಶೇಷತೆಯಾಗಿದೆ. ಅತ್ಯುತ್ತಮ ಸಾಹಿತ್ಯ ಸೃಷ್ಟಿ ಎನ್ನುವುದು ಆಶಯದಲ್ಲಿ ಅತ್ಯುತ್ತಮ ಮಾನವೀಯ ವ್ಯಕ್ತಿಯ ಸೃಷ್ಟಿ ಮತ್ತು ಮಾನವೀಯ ಸಮಾಜ ನಿರ್ಮಾಣ ಕೂಡ ಆಗಿರುತ್ತದೆ. ಈ ಚಿಂತನೆ ಕನ್ನಡ ಕಾವ್ಯದ ಒಂದು ಅಂತರ್ಗತವಾದ ಪ್ರಧಾನ ಗುಣವಾಗಿದೆ ಯಾಕೆಂದರೆ ಇಂತಹ ಮಾನವೀಯ ಹುಡುಕಾಟದ ಸಾಹಿತ್ಯ ಪರಂಪರೆಯಲ್ಲಿ ಅನೇಕ ಕೃತಿಗಳು ಹೊರಬರುತ್ತಿವೆ. ಅಂತಹ ಪ್ರಧಾನಗುಣ ಒಳಗೊಂಡು ಇಂದಿನ ಸಮಕಾಲೀನ ಕಾವ್ಯ ಅಭಿವ್ಯಕ್ತಗೊಳ್ಳುತ್ತಿರುವುದು ವಿಶೇಷವಾಗಿದೆ ಎಂದು ವಿವರಿಸುತ್ತಾರೆ. ಲೇಖಕರಿಗೆ ಹಾಗೂ ಕವಿಗಳಿಗೆ ಸಾಮಾಜಿಕ ಸಮಸ್ಯೆಗಳ ಕುರಿತು ಅರಿವು ಇರುವುದು ಅಗತ್ಯ ಕೆಲವೇ ಕೆಲವರ ಸಮಸ್ಯೆಗಳು ಇಡೀ ಸಾಮಾಜಿಕ ಸಮಸ್ಯೆಗಳೆಂದು ಭಾವಿಸಿ, ದೊಡ್ಡ ಅನೇಕ ಜನರ ಬದುಕನ್ನು ಹಿಂಸಿಸುವ ವ್ಯವಸ್ಥೆಯನ್ನು ಅರಿಯುವ ತಾತ್ವಿಕತೆ ಮಾಡಬೇಕಾಗಿದೆ. ಇಂತಹ ದೊಡ್ಡ ಸವಾಲುಗಳಿಗೆ ಕಾವ್ಯ ಮಿಡಿಯುವ ಹೊಸದಾರಿಗಳನ್ನು ತುಳಿಯಬೇಕಿದೆ ಯಾವುದು ಸಾಮಾಜಿಕ ಸಮಸ್ಯೆ ಎನ್ನುವುದರ ಕುರಿತು ಒಂದು ತಿಳುವಳಿಕೆ ಅಗತ್ಯ. ಪ್ರಜಾಪ್ರಭುತ್ವದ ನೆಲೆಯಲ್ಲಿ ಮನುಷ್ಯ ತನ್ನ ಬದುಕಿನ ಸ್ವರೂಪ ಯಾವ ರೀತಿಯಾಗಿ ಮೂಡಿಸಿಕೊಳ್ಳಬೇಕು ಹಾಗೇ ಹೇಗೆ ಸ್ಪಂದಿಸಬೇಕು ಎನ್ನುವ ಅರಿವು ಮುಖ್ಯವಾದದ್ದು ಎಂದಿದ್ದಾರೆ. ವರ್ತಮಾನದ ಸುಡು ವಾಸ್ತವದ ತಲ್ಲಣಗಳು ಕಾವ್ಯ ಒಳಗೊಳ್ಳದೇ ಹೋದರೆ ಅದು ಜೀವಂತಿಕೆಯನ್ನು ಉಳಿಸಿಕೊಳ್ಳಲಾರದು ಹಾಗೆ ವಿಶಿಷ್ಟತೆಯನ್ನು ಪಡೆಯಲಾರದು ಎಂದಿದ್ದಾರೆ.

ಪ್ರಸ್ತುತವಾಗಿ ರೂಪುಗೊಳ್ಳುತ್ತಿರುವ ಸಮಕಾಲೀನ ಕಾವ್ಯಕ್ಕೆ ತನ್ನ ಹಿಂದಿನ ಕಾಲಘಟ್ಟದ ಕವಿತೆಯ ತಾತ್ವಿಕತೆಯ ಪ್ರಭಾವ ಕಾಣ್ತಾಯಿಲ್ಲ. ಇದಕ್ಕೆ ಬದಲಾಗಿ ತಾತ್ವಿಕತೆ ದೃಷ್ಟಿಕೋನದ ಪ್ರಭಾವವಿದ್ದಂತೆ. ಇದು ನಿಜವಿದ್ದರೆ, ಹೊಸ ತಲೆಮಾರಿನ ಲೇಖಕರು ಬರಹಕ್ಕಿಂತಲೂ ವ್ಯಕ್ತಿತ್ವದ ಇಂಟೆಗ್ರಿಟಿಗೆ ಬೆಲೆ ಕೊಡುತ್ತಾರೆ ಅಂತ ಅರ್ಥವಾಗುತ್ತಿದೆ. ಎಂದಿದ್ದಾರೆ. ಸಂದಿಗ್ಧತೆ ಮತ್ತು ವೈರುಧ್ಯಗಳು ತುಂಬಿದ ಕಾಲದಲ್ಲಿ ನಾವು ಬದುಕುತ್ತಿದ್ದೇವೆ. ಇಂತಹ ವಾತಾವರಣದಲ್ಲಿ ಬದ್ಧತೆಯಲ್ಲಿ ಬರಹವನ್ನು ಸಾವು ಬದುಕಿನ ಪ್ರಶ್ನೆಯನ್ನಾಗಿ ಮಾಡಿಕೊಂಡು ದೊಡ್ಡ ಸಂಯಮವನ್ನು ಹೊಸ ತಲೆಮಾರಿನ ಹೆಚ್ಚಿನ ಲೇಖಕರು ತೋರಿಸುತ್ತಾ ಇರುವುದು ದೊಡ್ಡ ಸಂಗತಿಯಾಗಿದೆ. ಸಮಕಾಲೀನ ಕಾವ್ಯದಲ್ಲಿ ಪ್ರಕಟವಾಗುತ್ತಿರುವ ವಿವೇಕ ಮತ್ತು ಹೊಣೆಗಾರಿಕೆಯ ಪ್ರಜ್ಞೆಗಳು ಸಾಹಿತ್ಯದ ಮತ್ತು ನಾಡಿನ ಆರೋಗ್ಯ ಕಾಪಾಡುವ ಜನಾಂಗದ ವಿವೇಕದಂತಿವೆ ಎಂದು ವಿಶ್ಲೇಷಣೆ ಮಾಡಿದ್ದಾರೆ.

### ಹೊಸ ಕಾವ್ಯ ಹೊರಗಣ ಒಳಗಾದ ಬಗೆ

ಈ ಲೇಖನದಲ್ಲಿ ಬಿ. ಪೀರ್‌ಬಾಷ ಅವರು ಕನ್ನಡ ಸಾಹಿತ್ಯದ ವರ್ತಮಾನದ ಸಂದರ್ಭದಲ್ಲಿ ಸೃಷ್ಟಿಯಾಗುತ್ತಿರುವ ಕಾವ್ಯವನ್ನು ಗಮನಿಸಿದಾಗ ಅಭಿವ್ಯಕ್ತಿಯ ಹಲವು ಬಗೆಗಳನ್ನು ಹಾಗೂ

ಖಚಿತ ಧೋರಣೆಗಳನ್ನು ಗುರುತಿಸಬಹುದಾಗಿದೆ. ಎಂದಿದ್ದಾರೆ. ವರ್ತಮಾನದ ಕವಿತೆ ಬಹುಕೇಂದ್ರಿಯ ಕವಿತೆಯಾಗಿವೆ ಒಂದು ಕವಿತೆಯನ್ನು ಹಲವು ಆಯಾಮಗಳ ಮೂಲಕ ಹಾಗೂ ಹಲವು ಧ್ವನಿಗಳ ಧೋರಣೆಗಳ ಮೂಲಕ ಅವುಗಳ ಹಿಂದಿನ ಸಾಮಾಜಿಕ ವಾಸ್ತವಗಳು ಯಾವ ರೀತಿಯಾಗಿವೆ. ಎಂದು ತಿಳಿದು ಬರುತ್ತದೆ. ಚರಿತ್ರೆ ಹಿಂದಿನ ಘಟ್ಟಗಳಲ್ಲಿ ಹೋಲಿಸಿದಾಗ ಬೀದಿ ಬೀದಿ ಜಗಳವಾಗದ ಕಾವ್ಯ ಈ ಹಂತದಲ್ಲಿ ಪರ್ಯಾಯವೊಂದನ್ನು ಕಾಣಿಸುವ ಪಕ್ವತೆಗೆ ಬದಲಾಗಿದೆ. ನವೋದಯದಿಂದ ಬಂಡಾಯದವರೆಗಿನ ಕಾವ್ಯ ಪರಿಶ್ರಮದಲ್ಲಿ ಈ ಸಾಧ್ಯತೆ ತೀರಾ ಇತ್ತೀಚಿನದು. ಹೊಸ ಶತಮಾನ ಕರೆತಂದ ಜಾಗತೀಕರಣ ಎಂಬ ಮಾಯಾ ರಕ್ಕಸ ಮತ್ತು ಕೋಮುವಾದ ಎಂಬ ಮಾರಿಬೇನೆಗಳೆರಡನ್ನು ಏಕಕಾಲದಲ್ಲಿ ಎದುರಿಸುತ್ತಿರುವ ಕಾವ್ಯದ ಶಕ್ತಿ ಹೊಸತಲೆಮಾರಿನದ್ದಾಗಿದೆ ಹಾಗೇ ಇವು ಹೊಸ ಸೃಜನಶೀಲ ತಾತ್ವಿಕತೆಯನ್ನು ಕಟ್ಟಿಕೊಡುತ್ತೇವೆ ಎಂದಿದ್ದಾರೆ.

ಜಾಗತೀಕರಣವಾದ ಆರ್ಥಿಕ ಸಾಮ್ರಾಜ್ಯಶಾಹಿಗೆ ಭಾರತೀಯ ಕೋಮುವಾದ ವಾಹಕನ ವಾಕರಿಯ ಪಾಲುದಾರನೂ ಆಗಿ ಇವೆರಡು ಒಂದರ ಬಲದಿಂದ ಇನ್ನೊಂದು ಶಕ್ತಿ ಪಡೆದು ಜೋಡು ಆಕ್ರಮಣ ಮಾಡುತ್ತಿರುವ ಲೋಕದರ್ಶನ ಈ ಕಾಲದ ಕನ್ನಡ ಕಾವ್ಯದ ಕಾವ್ಯದರ್ಶನವನ್ನು ರೂಪಿಸುತ್ತದೆ ಎಂದಿದ್ದಾರೆ. ಈ ಮೂಲಕ ಹೊಸ ತಲೆಮಾರಿನ ಕಾವ್ಯದ ದರ್ಶನ ಮತ್ತು ಧೋರಣೆಯನ್ನು ವ್ಯಾಖ್ಯಾನಿಸಿದಂತಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಮತೀಯ ಭಾವನೆ ಅತಿಯಾಗಿ, ಕೋಮುವಾದ ಬೀದಿಗೆ ಬಂದು ನಿಂತು ಅಮಾಯಕರ ರಕ್ತ ನೆಕ್ಕುವಾಗ ಕಾವ್ಯ ಅದರ ವಿರುದ್ಧ ಧ್ವನಿ ಕೂಗಿದೆ ಎಂದು ಅರ್ಥೈಸಿದ್ದಾರೆ. ಹಾಗೇ ಮುಂದುವರೆದು ಚಳುವಳಿಯ ಅನುಭವ ಮತ್ತು ಪರಂಪರೆಯ ಅನುಭವಗಳ ಸಮತೋಲನದ ಫಲವಾಗಿ ಇಂತಹ ಕಾವ್ಯ ಹುಟ್ಟಲು ಸಾಧ್ಯ ಎಂದು ಭಾವಿಸಿ, ಪ್ರಸ್ತುತ ದಿನಮಾನಗಳಲ್ಲಿ ಚಳವಳಿಗೂ ಇಲ್ಲ ಅಂದರೂ ಆಂತರ್ಯದಲ್ಲಿ ಚಳವಳಿಯ ಮನಸ್ಥಿತಿ, ಮನೋಧೋರಣೆ ಇರುವುದು ಕಾಣಬಹುದಾಗಿದೆ ಎಂದಿದ್ದಾರೆ. ಹಾಗೇ ಆಹಾರ ಸಂಸ್ಕೃತಿಯ ಚರ್ಚೆ ಕನ್ನಡ ಕಾವ್ಯ ಪರಂಪರೆಯಲ್ಲಿ ತೀರ ಕಡಿಮೆ ಆದರೆ ಇಂದು ಅದರ ಪ್ರಭಾವ ಅತಿಯಾದ ಕಾರಣ ಆಹಾರ ಸಂಸ್ಕೃತಿಯನ್ನು ನಾಶಗೊಳಿಸುವ ಹುನ್ನಾರಿಗೆ ಕಾವ್ಯ ಭಾರವಾಗಿಯೇ 'ಆಹಾರದ ಕುರಿತು ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಗೋವು ತಿಂದು ಗೋವಿನಂತಾದವನು' ಎನ್ನುವ ಸಾಲನ್ನೂ ಉದಾಹರಿಸಿ ವಿವರಿಸಿದ ಬಗೆ ವಿಶೇಷವಾಗಿದೆ. ಇದು ನಿಜಕ್ಕೂ ಸಮ್ಮತಿಸಬಹುದಾಗಿದೆ. ಪ್ರಸ್ತುತ ಸಮಸ್ಯೆಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಆಹಾರ ಸಂಸ್ಕೃತಿಯ ಮೇಲೆ ಅತಿಯಾದ ಆಕ್ರಮಣ ನಡೆಯುತ್ತಿರುವ ಸಂದರ್ಭದಲ್ಲಿ ಕನ್ನಡ ಕಾವ್ಯ ಈ ರೀತಿಯೂ ಸ್ಪಷ್ಟನೆ ನೀಡಿರುವುದು ಶಕ್ತಿಯುತವಾಗಿದೆ. ಸಮಾಜಮುಖಿಯಾಗಿದೆ. ದಮನಿತ ಸಮುದಾಯದ ಧ್ವನಿಯಾಗಿದೆ. ಚಳುವಳಿಯ ಅನುಭವದ ಮೂಲಕ ಬೆಳೆದ ಕಾವ್ಯ ಕಾಲದ ಹಣ್ಣಿನ ಮರಗಳಂತೆ ಕಾವ್ಯ ಫಲವನ್ನು ಅರಳಿಸುತ್ತಲೇ ಇರುತ್ತದೆ. ಕಾಲ ಗಡಿಯಲ್ಲಿ ಚಳವಳಿಗಳು ಒಣಗಿದರೂ ಅವುಗಳ ತಾತ್ವಿಕ ಪ್ರಭಾವ, ಪ್ರೇರಣೆ

ಮತ್ತು ಅನುಭವಗಳು ಈ ಹೊತ್ತಿಗೂ ಹೊಸ ಬಗೆಯ ಸತ್ವಶಾಲಿ ಕವಿತೆಯ ಹುಟ್ಟಿಗೆ ಕಾರಣವಾಗಿದೆ ಎಂದಿದ್ದಾರೆ. ಹಾಗೇ ಅಂಬೇಡ್ಕರ್, ಗಾಂಧಿ, ಲೋಹಿಯಾ, ಬಸವ, ಬುದ್ಧ ಮಾರ್ಕ್ಸ್‌ವಾದ ಚಿಂತನೆಗಳು ಕನ್ನಡ ಕಾವ್ಯ ಸೃಷ್ಟಿಗೆ ತಾತ್ವಿಕ ನೆಲೆಗಟ್ಟನ್ನು ಒದಗಿಸಿದವು ಎನ್ನುವುದನ್ನು ಮರೆಯಬಾರದು ಎಂದಿದ್ದಾರೆ.

## ಕನ್ನಡ ಕಾವ್ಯದ ಇತ್ತೀಚಿನ ಒಲವುಗಳು

ಎನ್.ಕೆ. ಹನುಮಂತಯ್ಯ ಅವರು ಈ ಲೇಖನದಲ್ಲಿ ಇತ್ತೀಚಿನ ಕನ್ನಡ ಕಾವ್ಯ ಒಲವುಗಳು ಕುರಿತು ವಿವರಿಸಿದ್ದಾರೆ. ಕಾವ್ಯ ಪರಂಪರೆಯಲ್ಲಿ ನವ್ಯ, ದಲಿತ, ಬಂಡಾಯ, ನವ್ಯೇತರ ಇವುಗಳ ಗುಣಲಕ್ಷಣಗಳನ್ನು ಹೇಳುವಷ್ಟು ಸುಲಭವಾಗಿ ಹೇಳಿ ಬಿಡುವುದು ತುಂಬಾ ಕಷ್ಟ. ಅದು ಇನ್ನೂ ತಲುಪಬೇಕಾದ ತಲುಪಿಸಬೇಕಾದ ತಲುಪಿಸಬೇಕಾದ ಸ್ಥಿತಿಯಲ್ಲಿದೆ. ಈ ದೃಷ್ಟಿಯಿಂದ ನಿಖರವಾಗಿ ಹೇಳುವುದು ಸುಲಭವಲ್ಲ, ಆದರೂ ಅಭಿವ್ಯಕ್ತಿಗೊಂಡಿರುವ ಕಾವ್ಯದ ಆಶಯದ ಮೇಲೆ ಕೆಲವು ತಾತ್ವಿಕ ಒಲವುಗಳನ್ನು ಗುರುತಿಸಬಹುದಾಗಿದೆ. ಹಾಗೇ ಆ ಆಶಯಗಳು ಪರಂಪರೆಯಲ್ಲಿ ಮುಂದುವರಿಕೆಯ ಭಾಗವಾಗಿ ಹೊಸತನ ಪಡೆದಿವೆ ಎಂಬುದನ್ನು ವಿವರಿಸಿದ್ದಾರೆ. ನಮ್ಮ ಕನ್ನಡ ಕಾವ್ಯ ಪರಂಪರೆಯ ಬಹಳ ದೊಡ್ಡ ಶಕ್ತಿಯನ್ನು ನಾವು ಅದರೊಳಗೆ ನೋಡಬಹುದು. ಅದು ವ್ಯಕ್ತಿ ಮತ್ತು ಸಮಾಜದೊಳಗಡೆ ಆಳವಾಗಿ ಬೇರುಗಳನ್ನು ಬಿತ್ತಿ ಸದಾ ಕೇಡನ್ನು ಪ್ರತಿಭಟಿಸುತ್ತಾ ಹೊಸ ಸಮಾಜದ ಅನ್ವೇಷಣೆಗಾಗಿ ತನ್ನದೇ ಆದ ಕಾವ್ಯಧರ್ಮವನ್ನು ಪ್ರಾಚೀನ ಕಾಲದಿಂದಲೂ ಕಂಡುಬಂದಿದೆ. ಪ್ರಸ್ತುತ ಸಂದರ್ಭದಲ್ಲಿ ನಮ್ಮ ಮುಂದೆ ಅನೇಕ ಸವಾಲುಗಳಿವೆ ಆ ಸವಾಲುಗಳಿಗೆ ಹೊಸ ತಲೆಮಾರಿನ ಕಾವ್ಯ ಪ್ರತಿಕ್ರಿಯಿಸಬೇಕಾದ ಬಗೆಯ ಕುರಿತು ನುಡಿಯುತ್ತ ಹೊಸ ಚಿಂತನೆಯ ದಾರಿ ಕಂಡುಕೊಂಡಿದೆ ಎಂದು ವಿವರಿಸಿದ್ದಾರೆ. ಅಪಮಾನ, ಸಂಕಟಗಳನ್ನು ಓದಿ ಓದಿ, ಬರೆದು ಬರೆದು ಇದು ಏಕತಾನತೆಯಾಗಿದೆ. ಆದ್ದರಿಂದ ಇದರಿಂದ ಬಿಡುಗಡೆಗೊಳ್ಳಬೇಕಾದ ಅನಿವಾರ್ಯತೆ ಇದೆ ಎಂದು ವಿವರಿಸಿದ್ದಾರೆ.

ಇತ್ತೀಚಿನ ಕಾವ್ಯದಲ್ಲಿ ಕೇವಲ ಮನುಷ್ಯ ಕೇಂದ್ರಿತವಾದ ಜಗತ್ತೇ ಹೆಚ್ಚು ಕಾಣಿಸುತ್ತಾ ಬಂದಿದೆ. ಈ ಕಾವ್ಯದ ಅಕ್ಷರಗಳನ್ನು ಗಮನಿಸುತ್ತಾ ಹೋದರೆ ಅಲ್ಲಿ ಕೋಟ್ಯಾಂತರ ಸುರಂಗಗಳು ಕಾಣಿಸುತ್ತವೆ. ಅವುಗಳ ಒಳಗಡೆ ಜಾರಿ ಹೋದರೆ ಮನುಷ್ಯ ಜಗತ್ತು ಮಾತ್ರ ಇಲ್ಲದೆ ಅಲ್ಲಿ ದೇವರು ಧರ್ಮ, ಆಧ್ಯಾತ್ಮಿ, ಪ್ರಕೃತಿ, ಚರಿತ್ರೆ ಯಾವ್ಯಾವುದೋ ಹೊಸ ಲೋಕಗಳು ಅದರಲ್ಲಿ ದಾಖಲಾಗಿರುವುದು ಕಂಡು ಬರುತ್ತವೆ. ಇಂಥಾ ಅನಂತವಾದ ಸಂಗತಿಗಳಿಗೆ ಅವಕಾಶ ಕೊಡತಕ್ಕಂಥ ಅಂತಃಸತ್ವಗಳನ್ನು ನಮ್ಮನ್ನು ಪ್ರಭಾವಿಸಿದ ಕಾವ್ಯಗಳಲ್ಲಿ ನೋಡುತ್ತವೆ. ಆದರೆ ಇತ್ತೀಚಿಗೆ ನಮಗೆ ಮನುಷ್ಯನ ಆಚೆಗಿನ, ಮನುಷ್ಯ ಜೊತೆಗೆ ಇರತಕ್ಕಂಥ ಇತರ ಜಗತ್ತು ಒಳಗೊಳ್ಳತಕ್ಕಂಥ ಒಂದು ಅಂತಃಸತ್ವದ ಕಾವ್ಯವನ್ನು ಕಟ್ಟಲು ಬಹಳ ಕಷ್ಟವಾಗಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದು ನೋಡುತ್ತೇವೆ. ನಮ್ಮ ಕಾಲದ ಕವಿಗಳಲ್ಲಿ ಬಹಳಷ್ಟು ಸಂಕಟದ

ಪರಿಸ್ಥಿತಿಯೇ ನಮ್ಮ ಮುಂದೆ ಇದೆ ಇದು ಕಾವ್ಯದ ಮೂಲಕ ವ್ಯಕ್ತಗೊಂಡಿದೆ. ಅದು ಕವಿ ಸಂಕಟವಾಗದೆ ಸಮಾಜದ ಸಂಕಟವಾಗಿದೆ. ಆಧುನಿಕ ವೈಚಾರಿಕತೆಯನ್ನು ಹೊಸ ತಲೆಮಾರಿನ ಕಾವ್ಯ ಒಳಗೊಂಡಿದೆ ಎಂದು ಈ ಲೇಖನದಲ್ಲಿ ಎನ್.ಕೆ. ಹನುಮಂತಯ್ಯರವರು ವ್ಯಕ್ತಪಡಿಸಿದ್ದಾರೆ.

**ಆರೀಫ್ ರಾಜಾ ಅವರ ಜಂಗಮ ಫಕೀರನ ಜೋಳಿಗೆ**

ಟಿ.ಪಿ. ಅಶೋಕ ಅವರು 'ಕಾವ್ಯ ಪ್ರೀತಿ' ಎಂಬ ಪುಸ್ತಕದಲ್ಲಿ ಕನ್ನಡ ಕವಿತೆಗಳ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅದರಲ್ಲಿ ಹೊಸ ತಲೆಮಾರಿನ ಕೆಲವು ಕವಿಗಳ ಕಾವ್ಯದ ಕುರಿತು ವಿಮರ್ಶೆ ಮಾಡಿದ್ದಾರೆ. ಅದರಲ್ಲಿ ಆರೀಫ್ ರಾಜಾ ಅವರ ಜಂಗಮ ಫಕೀರನ ಜೋಳಿಗೆ ಎಂಬ ಸಂಕಲನದ ಕುರಿತು ಈ ಲೇಖನದಲ್ಲಿ ವಿಮರ್ಶೆ ಮಾಡಿರುವುದು ಕಾಣುತ್ತೇವೆ. ಸಮಕಾಲೀನ ಕಾವ್ಯ ಈ ಹೊತ್ತಿನ ಹಲವು ಸಾಮಾಜಿಕ–ರಾಜಕೀಯ ವಿದ್ಯಮಾನಗಳಿಗೆ ಬಹಿರ್ಮುಖಿಯಾಗಿ ತೀವ್ರವಾಗಿ ಪ್ರತಿಕ್ರಿಯಿಸುವ ಮನೋಭಾವ ಇಟ್ಟುಕೊಂಡು ಎಲ್ಲಾ ಗದ್ದಲಗಳ ನಡುವೆಯೇ ಅಂತರ್ಮುಖಿಯಾಗಿ ಧ್ಯಾನಿಸುವ ವ್ಯವಧಾನವನ್ನು ಹೊಂದಿರುವ ಕಾವ್ಯವಾಗಿದೆ ಅದರಲ್ಲಿ ವಿಶೇಷವಾಗಿ ಆರೀಫ್ ರಾಜಾ ಕಾವ್ಯ ವಿಶಿಷ್ಟ ರೂಪಕ ಶಕ್ತಿಯನ್ನು ಹೊಂದಿ ಕನ್ನಡ ಕಾವ್ಯ ಪರಂಪರೆಗೆ ಹೊಸ ಸಂವೇದನೆಗಳನ್ನು ನೀಡಿದೆ. ಎಂದಿದ್ದಾರೆ. ಇದು ಸಮಕಾಲೀನ ಕಾವ್ಯದ ಶ್ರೇಷ್ಠತೆಯನ್ನು ಸೂಚಿಸುತ್ತದೆ. ಕಾರಣ ಕಾವ್ಯ ತನ್ನ ಕಾಲದ ತಲ್ಲಣಗಳನ್ನು ಸಮರ್ಥಕವಾಗಿ ಹೇಳದೆ ಹೋದರೆ ಅದು ಜೀವಂತಿಕೆಯನ್ನು ಪಡೆಯಲಾರದು. ಸಂವೇದನಾ ಕಾವ್ಯವಾಗದೆ ಬರೀ ಅಕ್ಷರದ ಕಾವ್ಯವಾಗುತ್ತದೆ. ಈ ರೀತಿಯಾಗದ ಒಂದು ಮುಖ್ಯ ಮಹತ್ವದೊಂದಿಗೆ ಸಾಗಿ ಬಂದಿರುವ ಕಾವ್ಯ ಪರಂಪರೆಯನ್ನು ಮುಂದುವರಿಕೆಯ ವಾರಸುದಾರಿಕೆಯನ್ನು ಸಮಕಾಲೀನ ಕಾವ್ಯ ಹೊಂದಿದೆ. ಬಹಿರಂಗದಲ್ಲಿ ಜಗತ್ತಿನ ಜೊತೆ ನಾವು ನಡೆಸುವ ಜಗಳವು ವಾಗ್ವಿಲಾಸವನ್ನಷ್ಟೇ ಸೃಷ್ಟಿಸಬಲ್ಲದು, ನಮ್ಮ ಅಂತರಂಗದ ಜೊತೆ ಆಡುವ ಜಗಳಗಳಿಂದ ಕಾವ್ಯ ಹುಟ್ಟುತ್ತದೆ ಎಂಬ ಅರ್ಥವನ್ನು ಸೂಚಿಸುವ ಯೇಟ್ಸ್ ಕವಿಯ ಮಾತುಗಳನ್ನು ಸ್ಮರಿಸಿ ಇಂದಿನ ಕಾವ್ಯದ ಕುರಿತು ವಿವರಿಸುತ್ತಾರೆ. ಸಮಾಜವನ್ನು ಗಮನಿಸುತ್ತಾ ತನ್ನ ಅಂತರಂಗವನ್ನು ತಡವಿಕೊಳ್ಳುತ್ತ ಆ ಸಂಘರ್ಷದಲ್ಲಿ ಇವರು ಕಾವ್ಯ ರಚಿಸುತ್ತಾರೆ. ಇವರ ಎಲ್ಲ ಕವನಗಳ ಮಟ್ಟ ಒಂದೇ ತೆರನಾದುದಲ್ಲವಾದರೂ. ಒಂದು ಬಗೆಯ ಬೌದ್ಧಿಕ ಸಂಕಟ ಮತ್ತು ಭಾವತುಡಿತ ಇವರಲ್ಲಿ ಕಂಡು ಬಂದಿದೆ ಎಂದಿದ್ದಾರೆ. ಹಾಗಾಗಿ ಸದ್ಯದ ಕಾವ್ಯದ ಸೋಲು–ಗೆಲುವಿನ ಪ್ರಶ್ನೆಗಳಿಗಿಂತ ಉತ್ತಮ ಕಾವ್ಯಕ್ಕಾಗಿ ಮತ್ತು ತನ್ಮೂಲಕ ಆರೋಗ್ಯಕರ ಸಾಮಾಜಿಕ ವ್ಯವಸ್ಥೆಯೊಂದಕ್ಕಾಗಿ ಈ ಕಾವ್ಯ ನಡೆಸುತ್ತಿರುವ ಸೃಜನಶೀಲ ಹೋರಾಟ ಓದುಗರ ಮನ ತಟ್ಟುವಂತಿದೆ ಎಂದಿದ್ದಾರೆ. ಆರೀಫ್‌ರಾಜರ ಕವಿತೆಗಳು ಧಾರ್ಮಿಕ ಆಚರಣೆಗಳಿಗೂ ಮೀರಿದು, ಎಲ್ಲ ಮನುಷ್ಯರಿಗೂ ಅತ್ಯಗತ್ಯವಾಗಿರುವ ಅನ್ನ, ಘನತೆ, ಪ್ರೇಮಗಳಿಗಾಗಿ ಒಂದು ಬಗೆಯ ಆತುರ ಹಂಬಲ ಅವರ ಬಹಳಷ್ಟು ಕವನಗಳಲ್ಲಿ ಕಂಡುಬಂದಿದೆ ಎಂದು ವಿಶ್ಲೇಷಿಸಿದ್ದಾರೆ. ಹಾಗೇ ಮುಂದುವರೆದು

ಒಂದು ಸಮುದಾಯ ಅನುಭವಿಸುವ ಅವಮಾನ, ಅನುಮಾನಗಳಿಗೆ ತುತ್ತಾದ ಬಗೆಯನ್ನು ಕಾವ್ಯದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

ಈ ಬಗೆಯ ಅನುಭವವನ್ನು ಮುಸ್ಲಿಮರ ಬದುಕಿನ ಸಂದರ್ಭದಲ್ಲಿ ಕಟ್ಟಿಕೊಡುತ್ತದೆ. 'ನಮಗೆ ಮನೆ ಕೊಡುವುದಿಲ್ಲವಂತೆ' ಎಂಬ ಪದ್ಯ ಉದಾಹರಿಸಿ ವಿವರಿಸಿದ ಬಗೆ ಮನ ಮುಟ್ಟುತ್ತದೆ. ಯಾವುದೇ ಸಮುದಾಯವನ್ನು ಅವಮಾನಿಸುವುದು ಸರಿಯಲ್ಲ ಇದು ಮನುಷ್ಯವಿರೋಧಿ ಮನೋಭಾವವಾಗಿದೆ. ಆದ್ದರಿಂದ ಮನುಷ್ಯತ್ವಕ್ಕೆ ಮಿಡಿಯುವ ಕಾವ್ಯ ಇಂದಿನ ಕಾವ್ಯವಾಗಿದೆ. ಸಹಜ ನಾಗರಿಕ ಸೌಲಭ್ಯಗಳನ್ನು ಪಡೆಯಲು ಒದ್ದಾಡುತ್ತಿರುವ ಪರಿಸ್ಥಿತಿಯನ್ನು ಈ ಕವನ ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. ಅಮೆರಿಕದ ಕಪ್ಪು ಜನರು 'ನಾವೂ ಅಮೆರಿಕನ್ನರೆ' ಎಂದು ಒತ್ತಿ ಒತ್ತಿ ಹೇಳಿಕೊಳ್ಳಬೇಕಾದಂತೆ, ಭಾರತೀಯ ಮುಸ್ಲಿಮರು ತಾವೂ ಭಾರತೀಯರು ಎಂದು ಹೇಳಿಕೊಳ್ಳಬೇಕಾದ ಒತ್ತಡದಲ್ಲಿ ಬದುಕುತ್ತಿರುವ ಬಗೆಯನ್ನು ಆರೀಫ್‌ರಾಜರ ಕವನ ನಿವೇದಿಸುತ್ತದೆ ಎಂದು ವಿವರಿಸಿದ್ದು ನೋಡಬಹುದಾಗಿದೆ. ಈ ಅಂಶವನ್ನು ಮುಂದಿಟ್ಟುಕೊಂಡು ಈ ಸಂಶೋಧನೆಯಲ್ಲಿ ವಿಸ್ತರಿಸಲಾಗಿದೆ.

### ಎಸ್. ಮಂಜುನಾಥ ಅವರ 'ಜೀವಯಾನ'

ಸಮಕಾಲೀನ ಕವಿಗಳಲ್ಲಿ ಒಬ್ಬರಾದ ಎಸ್. ಮಂಜುನಾಥ ಅವರ 'ಜೀವಯಾನ' ಎಂಬ ಸಂಕಲನದ ಕುರಿತು ಟಿ.ಪಿ. ಅಶೋಕ ಅವರು ತಮ್ಮ 'ಪ್ರೀತಿ' ಎಂಬ ಪುಸ್ತಕದಲ್ಲಿ ವಿಮರ್ಶೆ ಮಾಡಿರುವುದು ಕಂಡುಬಂದಿದೆ. ಮಂಜುನಾಥ ಅವರ 'ಜೀವಯಾನ' ಸಂಕಲನದಲ್ಲಿ ವ್ಯಕ್ತಗೊಂಡ ಬಗೆ ಒಂದು ಬದುಕಿನ ಪ್ರಯಾಣದ ಹೆಜ್ಜೆ ಗುರುತುಗಳನ್ನು ದಾಖಲಿಸಲು ಪ್ರಯತ್ನಿಸಿದ ಕೃತಿಯಾಗಿದೆ. ವೈಯಕ್ತಿಕ ಅನುಭವಗಳ ಸಾಧಾರಣೀಕರಣಗೊಳ್ಳಬೇಕಾದ ಸಾಹಿತ್ಯದ ಮೂಲತತ್ವವನ್ನೇ ಮಂಜುನಾಥ್ ಇಲ್ಲಿ ಸ್ವಲ್ಪ ಬೇರೆ ಮಾತುಗಳಲ್ಲಿ ಹೇಳಿದ್ದಾರೆ. ಅನನ್ಯವಾಗಿದ್ದೂ ಅನ್ಯರರೂ ಆಗಬೇಕಾದ ಸವಾಲಿನಲ್ಲಿ ಇಲ್ಲಿನ ಬಹುತೇಕ ರಚನೆಗಳು ಯಶಸ್ವಿಯಾಗಿವೆ ಎಂಬುದು ಮೆಚ್ಚಬೇಕಾದ ಸಂಗತಿ ಎಂದಿದ್ದಾರೆ. ವೈಯಕ್ತಿಕ ಸಂವೇದನೆಗಳು ಅಭಿವ್ಯಕ್ತಿ ಕ್ರಮ ಅವುಗಳನ್ನು ಸಾರ್ವತ್ರಿಕ, ತಾತ್ವಿಕದೆಡೆಗೆ ಸಾಗಿಸಿ ಅಭಿವ್ಯಕ್ತಿಸುವುದು ಕಾವ್ಯ ರಚನೆಯ ಮಹತ್ವದ ಹಾದಿಯಾಗಿದೆ. ಈ ಹಾದಿಯಲ್ಲಿ ಮಂಜುನಾಥರ ಕವಿತೆಗಳು ಯಶಸ್ವಿಯಾಗಿ ಎಂದು ಹೇಳಬಹುದು.

ಮೂರ್ತವನ್ನು ಅಮೂರ್ತದ ನೆಲೆಗೆ ಕೊಂಡ್ಯೊಯ್ಯುವ ಪ್ರಯತ್ನವನ್ನು ಮಂಜುನಾಥ ಅವರ ಕಾವ್ಯದಲ್ಲಿ ವ್ಯಕ್ತಗೊಂಡಿದೆ. 'ಜೀವಯಾನ'ವು ಬಡಕುಟುಂಬವೊಂದು ದಿನನಿತ್ಯದ ಮೂಲಭೂತ ಅವಶ್ಯಕತೆಗಳಿಗೂ ಪರದಾಡಿದ ಬಡತನವನ್ನಷ್ಟೇ ಅಲ್ಲ. ಅದರ ಅವಮಾನ, ಮುಜುಗರಗಳನ್ನು ಎದುರಿಸಿ ಜರ್ಝರಿತವಾದ, ಅಗತ್ಯ ಮತ್ತು ಆತ್ಮಗೌರವದ ದ್ವಂದ್ವಗಳನ್ನು ಸದಾ ಎದುರಿಸಿದ ಪರಿಸ್ಥಿತಿಯನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ. ಸದ್ಯದ ಪ್ರಬುದ್ಧತೆಯಲ್ಲಿ ಮತ್ತು ಸಾಧಿಸಿಕೊಂಡಿರುವ ಮಾನಸಿಕ ದೂರದಲ್ಲಿ ಸಂಕೀರ್ಣ ವ್ಯಕ್ತಿತ್ವವಾದ ಮೈಗೂಡಿಸಿಕೊಂಡು

ಕಾವ್ಯ ವ್ಯಕ್ತಗೊಂಡಿದೆ ಎಂದು ವಿವರಿಸಿರುವುದು ಗಮನಿಸಬಹುದಾಗಿದೆ. ಸಮಕಾಲೀನ ಕನ್ನಡ ಕಾವ್ಯ ಸಂದರ್ಭವನ್ನು ಗಮನಿಸಿದರೆ ಮುಖ್ಯವಾಗಿ ಮೂರು ರೀತಿಯಲ್ಲಿ ಕವಿತೆಗಳು ರಚನೆಯಾಗುತ್ತಿರುವುದು ಕಂಡು ಬಂದಿದೆ. ಅವುಗಳೆಂದರೆ ಸದ್ಯದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ವಿದ್ಯಮಾನಗಳಿಗೆ ಬೇರೆ ಬೇರೆ ಮಟ್ಟದ ಪ್ರತಿಕ್ರಿಯೆಗಳ ವಲಯ ಹೊಂದಿದೆ. ತುಸು ವಾಚ್ಯವಾರ, ವಾಚಾಳಿಗಳ ಗುಂಪು ಇದು ಎನ್ನಬಹುದು. ಇನ್ನೊಂದು ಸಣ್ಣ ಪ್ರಮಾಣದ ಗುಂಪು ಈ ನೇರ ವಾಚ್ಯ ಮಾರ್ಗವನ್ನು ಬಿಟ್ಟ ಹೆಚ್ಚು ತಾತ್ವಿಕವಾದ ಆಧ್ಯಾತ್ಮಿಕವೆನ್ನಬಹುದಾದ ಶೋಧಗಳಲ್ಲಿ ತೊಡಗಿಸಿಕೊಂಡಿದೆ. ಇನ್ನು ಹನಿಗವನಗಳ ಬಹುಸಂಖ್ಯಾತರೂ ಇದ್ದಾರೆ. ಕೆಲವೇ ಕೆಲವು ಅಪವಾದಗಳನ್ನು ಹೊರತುಪಡಿಸಿದರೆ ಇವರಲ್ಲಿ ಹೆಚ್ಚು ಜನರು ಸಾಧಾರಣ ಹೇಳಿಕೆಗಳು ಮತ್ತು ಜೋಕುಗಳನ್ನು ಕೇವಲ ಪದ್ಯ ರೂಪದಲ್ಲಿ ಹೇಳುತ್ತಾ ಅದೇ ಕಾವ್ಯವೆಂದು ಭ್ರಮಿಸಿದ್ದಾರೆ. ಈ ಮೂರು ರೀತಿಯ ವಲಯಗಳನ್ನು ಕಾಣಬಹುದಾಗಿದೆ ಎಂದು ಅವರು ಈ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇದು ಮಂಜುನಾಥ ಕಾವ್ಯವನ್ನು ಕುರಿತಾಗಿ ಹೇಳಿದೆ ಇಡೀ ಕಾವ್ಯವನ್ನು ಕುರಿತು ಹೇಳಿದಂತಿದೆ ಈ ವಿಭಾಗ ಕ್ರಮ.

ಸಮಕಾಲೀನ ಕವಿತೆಗಳು, ಕವಿತೆಯ ಸ್ವರೂಪ ಮತ್ತು ಸಾಧ್ಯತೆಗಳನ್ನು ಧ್ಯಾನಿಸುವ ಹಲವು ಸಾರ್ಥಕ ಕವನಗಳು ರಚನೆಗೊಳ್ಳುತ್ತಿರುವುದಾಗಿದೆ ಕಾಣದೆ ಇರುವುದನ್ನು ಕಾಣಿಸುವುದೇ ಕಾವ್ಯ ಸಮಕಾಲೀನ ಬಹುತೇಕ ಕವಿತೆಗಳು ಕಾಣದ ಲೋಕವೊಂದನ್ನು, ಪ್ರೀತಿಯನ್ನು, ಮನುಷ್ಯತ್ವವನ್ನು ಹೊಸ ಬೆಳಕೊಂದನ್ನು ಕಾಣಿಸುವ ಹಂಬಲದಲ್ಲಿ ಇದೆ. ಬಹುತೇಕ ಎಲ್ಲಾ ಕವನಗಳಲ್ಲೂ ಈ ವಿಚಾರಗಳು ಪದೇ ಪದೇ ಪ್ರತ್ಯಕ್ಷವಾಗುತ್ತದೆ. ಒಲವು, ಪ್ರೀತಿ, ಮಾನವೀಯತೆ, ಆಸ್ಮಿತೆ ಕಾವ್ಯವೆನ್ನುವುದು ಕೇವಲ ಪುಟಗಳ ಮೇಲೆ ಮುದ್ರಿತವಾದ ಅಕ್ಷರಗಳಲ್ಲಿ ಅದು ಮತ್ತೆ ಮತ್ತೆ ಓದುಗರನ್ನು ಎಚ್ಚರಿಸುವ ಸಾಧನವಾಗಿದೆ. ಅಂತರಂಗದ ಅಮೂರ್ತ ಭಾವನೆ–ಅನುಭವಗಳನ್ನು ಮೂರ್ತವಾಗಿ ಹಿಡಿಯಲು ಭಾಷಿಕ ಆಕೃತಿಯೂ ಬೇಕು ಎಂಬ ಎಚ್ಚರ ಸ್ವತಃ ಕವಿಗೆ ಇರಬೇಕು ಎನ್ನುವ ಭಾವನೆ ಈ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

### ತಲ್ಲಣಗಳ ಸ್ವರೂಪ

ರಹಮತ್ ತರೀಕೆರೆ ಅವರು ಸಂಪಾದಿಸಿದ ಹೊಸ ತಲೆಮಾರಿನ ತಲ್ಲಣಗಳು ಪುಸ್ತಕದಲ್ಲಿ ಹೊಸತಲೆಮಾರಿನ ಅನೇಕ ಯುವ ಬರಹಗಾರರು ಕವಿಗಳು ಕಥೆಗಾರರು ತಮ್ಮ ತಳಮಳ ತಲ್ಲಣ, ಆಶಯವನ್ನು ವ್ಯಕ್ತಪಡಿಸಿದ್ದಾರೆ. ತಮ್ಮ ಬರಹದ ಕುರಿತು ಬರಹಕ್ಕೆ ಮುಖಮಾಡಿದ ಬಗೆ, ತಮ್ಮ ಜವಾಬ್ದಾರಿ ಮತ್ತು ಪ್ರಸ್ತುತ ಎದುರಾಗುವ ಸವಾಲುಗಳ ಕುರಿತು ವ್ಯಕ್ತಪಡಿಸಿದ ಬಗೆ ವಿಶೇಷವಾಗಿದೆ. ಹಾಗೇ ಸಂಪಾದಕರಾದ ರಹಮತ್ ತರೀಕೆರೆಯವರು 'ತಲ್ಲಣಗಳ ಸ್ವರೂಪ' ಎನ್ನುವ ಸಮಾರೋಪಾದಿಯೆನ್ನುವಂತೆ ಎಲ್ಲಾ ಬರಹದ ಆಶಯಗಳನ್ನು ತಲ್ಲಣಗಳನ್ನು ಕುರಿತು ವಿಮರ್ಶಿಸಿರುವುದು ಹೊಸ ಚಿಂತನೆಗಳಿಗೆ ದಾರಿಯಾದಂತಿದೆ. ಸಮಾಜ ಪ್ರಸ್ತುತ

ಕವಿಗಳ ಮೇಲೆ ಇಟ್ಟಿರುವ ಅಪೇಕ್ಷೆಯ ಕುರಿತಂತೆ, ಅನುಭವದ ಕುರಿತಂತೆ, ಹಾಗೂ ಕಾವ್ಯದ ಸಂವೇದನೆ ನೆಲೆಯ ಕುರಿತು ವಿವರಿಸಿದ್ದಾರೆ. ಹಾಗೆ ಸಮಕಾಲೀನ ಕಾವ್ಯದಲ್ಲಿ ಬಳಕೆಯಾದ ಭಾಷೆಯ ಬಗೆಗೆ ಅನೇಕ ಹೊಸ ವಿಚಾರಗಳನ್ನು ನೀಡಿದ್ದಾರೆ. ಹಾಗೆ ಸಮಕಾಲೀನ ಕಾವ್ಯದ ಇತಿ–ಮಿತಿಗಳನ್ನು ವಿಶೇಷವಾಗಿ ಗುರುತಿಸಿ ನಿಶ್ಚಿಸಿದ್ದಾರೆ.

ಸಮಾಜದಲ್ಲಿ ಜನರ ಜೀವನಕ್ರಮ ಆಲೋಚನಾ ವಿಧಾನ ಎಲ್ಲವೂ ಬದಲಾಗಿದೆ. ಬದಲಾದ ಸನ್ನಿವೇಶವನ್ನು ಹಿಡಿಯಲು ಹೊಸ ಸಾಹಿತ್ಯ ಆಕೃತಿಗಳ ಅಗತ್ಯವಿದೆ. ಹೊಸ ಭಾಷೆಯನ್ನು ಹುಟ್ಟಿಸಿಕೊಳ್ಳುವ ಅಗತ್ಯವಿದೆ. ಆದರೆ ಇದು ಸಾಧ್ಯವಾಗುತ್ತಿಲ್ಲ ಎಂದು ನಿರಾಶೆ ವ್ಯಕ್ತಪಡಿಸುತ್ತಾ ಹೊಸತಾದ ಮತ್ತು ಶಕ್ತವಾದ ಸಾಹಿತ್ಯವು ಹುಟ್ಟಿಬರಲಿ ಎಂಬ ಗಾಢ ಅಪೇಕ್ಷೆಯನ್ನು ಹೊಂದಿದ್ದಾರೆ. ಕನ್ನಡ ಪ್ರತಿಭೆ ಧ್ಯಾನಸ್ಥಗೊಂಡಿರುವ ಕಾಲವೆಂದೂ, ಮಾನವೆಂದು ತೋರುವ ಈ ಘಟ್ಟದಲ್ಲಿ ಹೊಸ ಹುಟ್ಟಿಗೆ ಬೇಕಾದ ಸಿದ್ಧತೆಗಳು ನಡೆಯುತ್ತಿವೆಯೆಂದೂ ಸಾಧ್ಯತೆಗಳ ಮುಗಿದು ಹೋಗಿವೆ ಎಂಬಂತೆ ಮಾತಾಡುವುದು ಸರಿಯಲ್ಲವೆಂದೂ ಪ್ರತಿವಾದ ಮಾಡುತ್ತಾರೆ.

ಸಮಕಾಲೀನ ಕಾವ್ಯದಲ್ಲಿ ಅನುಭವದ ಮಂಡನೆ ಯಾವ ರೀತಿಯಾಗಿ ಮೂಡಿದೆ ಎಂದು ವಿವರಿಸುತ್ತಾ ಬರಹದಲ್ಲಿ ಅನುಭವ ಎಷ್ಟು ಹೊಸತಾಗಿದೆ ಎಂಬುದಷ್ಟೇ ಮುಖ್ಯವಾದುದು. ಅದನ್ನು ಮಂಡಿಸುವ ಪ್ರಕ್ರಿಯೆಯಲ್ಲಿ ಸಂಭವಿಸುವ ರೂಪಾಂತರ ಈ ಪ್ರಕ್ರಿಯೆಯಲ್ಲಿ ಹುಟ್ಟುವ ಭಾಷೆ ಮತ್ತು ಅರ್ಥಗಳು ಎಷ್ಟು ಹೊಸತಾಗಿವೆ ಎನ್ನುವುದು. ಹೊಸತಲೆಮಾರಿನಲ್ಲಿ ನಮ್ಮ ಸಮಾಜದ ಬೇರೆ ಬೇರೆ ಸ್ತರಗಳ ಅನುಭವ ಲೋಕದಿಂದ ಲೇಖಕರು ಬರೆಯುವ ಪ್ರಕ್ರಿಯೆ ೭೦ರ ದಶಕದಲ್ಲಿ ಆರಂಭವಾಯಿತು. ಅದು ಕೆಲಮಟ್ಟಿಗೆ ಈಗಲೂ ಮುಂದುವರೆದಿದೆ. ಹೊಸ ಹೊಸ ಅನುಭವಲೋಕ ಕಾವ್ಯದಲ್ಲಿ ಕಾಣುವಂತಾಗಿದೆ. ಸಮಕಾಲೀನ ಕಾವ್ಯದ ಸಂವೇದನೆ ಸ್ವರೂಪ ದಮನಿತ ಸಮುದಾಯಗಳಿಂದ ಬಂದ ವಿಶಿಷ್ಟ ಅನುಭವಲೋಕ ಮತ್ತು ದೃಷ್ಟಿ ಕೋನಗಳ ಮೂಲಕ ಬರೆಯುವ ಬರಹಕ್ಕೆ ಸಂವೇದನೆ ಎನ್ನಬಹುದಾಗಿದೆ. ಒಟ್ಟಿನಲ್ಲಿ ಹೊಸ ಸಂವೇದನೆಗಳನ್ನು ಕಾವ್ಯ ಒಳಗೊಂಡಿದೆ. ಹಾಗೇ ಮುಂದುವರೆದು ಪ್ರಕಾರದ ಅನ್ಯಾಯವನ್ನು ಕುರಿತು ಚರ್ಚಿಸುತ್ತಾ ಹೊಸ ತಲೆಮಾರಿನ ಲೇಖಕರು ಅನೇಕ ಪ್ರಕಾರಗಳಲ್ಲಿ ಬರೆಯುತ್ತಿದ್ದರೂ ಹೆಚ್ಚಿನವರು ಕಾವ್ಯದಲ್ಲಿ ತೊಡಗಿದ್ದಾರೆ. ಕವಿಗಳು ತಮಗೆ ಬೇರೆ ಪ್ರಕಾರದಲ್ಲಿ ಅಭಿವ್ಯಕ್ತಿ ಸಾಧ್ಯವೇ ಇಲ್ಲವೆಂಬಷ್ಟು ತನ್ಮತೆಯಿಂದ ತೊಡಗಿರುವುದು ಇದು ಕಾವ್ಯವನ್ನು ಶಕ್ತಿಯುತವಾಗಿ ಕಟ್ಟು ನೆರವಾಗಬಹುದು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಹೊಸ ತಲೆಮಾರಿನ ಕಾವ್ಯದಲ್ಲಿ ತಲ್ಲಣ ಅಸ್ಪಷ್ಟತೆ, ಹುಡುಕಾಟ, ಉತ್ಸಾಹ, ಉಮೇದುಗಳೆಲ್ಲವೂ ಸೇರಿದಂತಹ ಒಂದು ಸಂಕೀರ್ಣ ಸನ್ನಿವೇಶದಲ್ಲಿ ಬರೆಯುತ್ತಿರುವ ಹೊಸ ತಲೆಮಾರಿನ ಲೇಖಕರು ಬರಹದ ಮೂಲಕ ಕನ್ನಡ ಸಾಹಿತ್ಯವು ೨೧ನೇ ಶತಮಾನದ ಈ ಮೊದಲ ಪಾದದಲ್ಲಿ ಹೊಸ ಹೊರಳಿಕೆಯನ್ನು ಪಡೆಯಲು ಯತ್ನಿಸುತ್ತಿದೆ. ಎನ್ನುವ ಆಶಯ ಮತ್ತು

ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ಕಾವ್ಯದ ಕುರಿತಾದ ಕಾವ್ಯದ ದಾರಿಗಳನ್ನು ಸ್ಪಷ್ಟಪಡಿಸುತ್ತದೆ.

**ಮುನ್ನುಡಿಗಳು**

* ಪ್ರಸ್ತುತ ಅಧ್ಯಯನದ ತಾತ್ವಿಕ ಸಮೀಕ್ಷೆಯಲ್ಲಿ ಸಮಕಾಲೀನ ಕವನ ಸಂಕಲನಗಳ ಕೆಲವು ಮುನ್ನುಡಿಗಳಲ್ಲಿರುವ ಅಂಶವನ್ನು ಚರ್ಚಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ ವೀರಣ್ಣ ಮಡಿವಾಳರ 'ನೆಲದ ಕರುಣೆಯ ದನಿ' ಎಂಬ ಸಂಕಲನಕ್ಕೆ ಜೆ.ಪಿ. ಬಸವರಾಜ ಅವರು ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ಸಮಕಾಲೀನ ಕಾವ್ಯದ ದಾರಿಗಳು ಅಭಿವ್ಯಕ್ತಿಯ ಆಶಯ ಮತ್ತು ಹೊಸ ಸಂವೇದನೆಯನ್ನು ಗುರುತಿಸಿದ್ದಾರೆ. ಸಮಕಾಲೀನ ಕಾವ್ಯ ಹೊಸ ಸಮಾಜಕ್ಕೆ ಹಂಬಲಿಸುವ ಬಗೆಯ ವಿಶೇಷತೆಯನ್ನು ವಿವರಿಸುತ್ತಾ ಕಾವ್ಯದಲ್ಲಿ ಕಂಡು ಬರುವ ಪ್ರತಿರೋಧವನ್ನು ಗಮನಿಸಬಹುದಾಗಿದೆ. ಎಂದಿದ್ದಾರೆ. ಇವತ್ತು ಬರೆಯುತ್ತಿರುವ ಹೊಸ ತಲೆಮಾರಿನ ಬಹುಪಾಲು ಕವಿಗಳ 'ಧ್ಯಾನ' ಕೇಂದ್ರ ಪ್ರಿಯತಮೆಯ ಧ್ಯಾನ ಮತ್ತು ಹೊಸ ಲೋಕಸೃಷ್ಟಿಯ ಹಂಬಲವೆಂದು ಹೇಳಿರುವುದು ಕಂಡುಬಂದಿದೆ. ಇಂದಿನ ಆಧುನಿಕ ಸಂದರ್ಭದಲ್ಲಿಯ ಆತ್ಯಂತಿಕ ಸ್ಥಿತಿಯನ್ನು ಕಂಡು ಮತ್ತು ಶೋಷಿತ ಸಮುದಾಯಗಳ ಸಂಕಟ ತುಂಬಾ ಕಂಡು ಬರುತ್ತಿದೆ. ಈ ಸಂಕಟಕ್ಕೆ ಸಮಕಾಲೀನ ಕಾವ್ಯ ಮಿಡಿದು ಪ್ರತಿಭಟಿಸುವ ಮನೋಭಾವ ಹೊಂದಿದೆ. ಪ್ರೀತಿ ಮತ್ತು ಕ್ರಾಂತಿ ಬೇರೆ ಬೇರೆ ಅಲ್ಲ. ಪ್ರೀತಿ ಸಮಾನತೆಯ ಮೇಲೆ ನಿಂತಿದ್ದ ಕ್ರಾಂತಿ ಆಶಯವೂ ಈ ಸಮಾನತೆಯನ್ನು ಹಂಬಲಿಸಿದ್ದು ಶೋಷಣೆಯನ್ನು ವಿರೋಧಿಸಿದ್ದು, ಈ ಕರಾಳ ಮುಖಗಳನ್ನು ಕಂಡು ರೊಚ್ಚಿಗೇಳುವುದು ಅಸಹಜವೇನಲ್ಲ ಎಂದು ಜೆ.ಪಿ. ಬಸವರಾಜ್ ಅವರು ಮುನ್ನುಡಿಯಲ್ಲಿ ವ್ಯಕ್ತಪಡಿಸಿದ್ದಾರೆ. ಇದು ಸಮಕಾಲೀನ ಕಾವ್ಯದ ಅಧ್ಯಯನಕ್ಕೆ ಹೊಸ ಆಯಾಮವನ್ನು ನೀಡಿದೆ ಎಂದು ಹೇಳಬಹುದು.

* ಆರೀಫ್ ರಾಜಾ ಅವರು ಜಂಗಮ ಫಕೀರನ ಜೋಳಿಗೆ ಎಂಬ ಸಂಕಲನಕ್ಕೆ ಎಚ್.ಎಸ್ ಶಿವಪ್ರಕಾಶ್ ಅವರು ಮುನ್ನುಡಿ ಬರೆಯುತ್ತಾ ಈ ಸಂಕಲನದ ಕವಿತೆಗಳನ್ನು ಓದಿದಾಗ ವಿಸ್ಮಯಗಳ ಲೋಕವೊಂದನ್ನು ಹೊಕ್ಕಂತಾಗುತ್ತದೆ. ಅಲ್ಲೊಂದು ಹೊಸ ಸಂವೇದನೆಯಿದೆ. ಹೊಸ ನುಡಿಗಟ್ಟನ್ನು ಕಟ್ಟುವ ಪ್ರಯತ್ನವಿದೆ. ಇಂದು ಅಪರೂಪವಾಗುತ್ತಿರುವ ತೀವ್ರತೆ ಮತ್ತು ಆರ್ದ್ರತೆಗಳಿವೆ. ಎಂದು ಸಮಕಾಲೀನ ಕಾವ್ಯದ ಶಕ್ತಿಯನ್ನು ಹೇಳಿದಂತೆ ಅನಿಸುತ್ತದೆ. ಇಂದಿನ ಸಂದರ್ಭದಲ್ಲಿ ಸಾಮಾಜಿಕ ಸನ್ನಿವೇಶಗಳ ತುಂಬಾ ಭಯಾನಕವಾದ ಸ್ಥಿತಿಯಲ್ಲಿರುವುದರಿಂದ ಮಾನವ ಸಂಬಂಧಗಳು ನಾಶವಾಗುತ್ತಿರುವ ಸಮಯದಲ್ಲಿ ಹೊಸ ಸಂವೇದನೆಯನ್ನು ಕಾವ್ಯ ವ್ಯಕ್ತಪಡಿಸಿ ಮಾನವೀಯತೆಗೆ ಹಂಬಲಿಸಿದ ಬಗೆಯನ್ನು ಗುರುತಿಸಬಹುದು ಕಾವ್ಯದ ಮೂಲಕ ಧರ್ಮವನ್ನು ಧರ್ಮನಿರಪೇಕ್ಷಗೊಳಿಸುತ್ತಿರುವುದು ಒಂದು ವಿಶೇಷವಾಗಿದೆ ಎಂದಿದ್ದಾರೆ.

ಕಾವ್ಯಕ್ಕೆ ಸದಾ ಆಚೆ ತೀರದ ದಾಹ ಬೇಕು ಅದು ಸಮಕಾಲೀನ ಕಾವ್ಯದಲ್ಲಿದೆ ಅಲ್ಪತೃಪ್ತರಾಗದೆ, ಮುನ್ನಡೆಯುವ ಬಯಕೆ ಹೊಸದನ್ನು ಸೃಷ್ಟಿಸಿ ಹೊಸತನ ಮೆರೆಯುವ ಹಂಬಲ ಕಾವ್ಯಕ್ಕೆ ಬೇಕು ಎಂದಿದ್ದಾರೆ. ಇದು ಇಲ್ಲದೆ ಇದ್ದಿದರೆ ನಮ್ಮ ಸಾಹಿತ್ಯದಲ್ಲಿ ಕಾವ್ಯ ಪರಂಪರೆಯಲ್ಲಿ ಹಲವು ಬಗೆಯ ಸಂವೇದನೆಗಳು, ಪ್ರಕಾರಗಳು ಹುಟ್ಟುತ್ತಿರಲಿಲ್ಲ.

* ಯಾಕೆ ಅಕ್ಷರಗಳೆಲ್ಲ ಒದ್ದೆ....

ಜಯಂತ ಕಾಯ್ಕಿಣಿ ಅವರು ವಿಭಾ ಅವರ ಜೀವ ಮಿಡಿತದ ಪದ್ಯ ಎನ್ನುವ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ 'ಯಾಕೋ ಅಕ್ಷರಗಳಲ್ಲಿ ಒದ್ದೆ ಎಂಬ ಶೀರ್ಷಿಕೆಯನಿಟ್ಟು ಬರೆದಿದ್ದಾರೆ. ಕಾವ್ಯದಲ್ಲಿ ವ್ಯಕ್ತಗೊಂಡಿರುವ ನೋವು, ಸಮಾಜದಲ್ಲಿರುವ ಸಂಕಟ, ಹೆಣ್ಣಿನ ಅಸಹಾಯಕ ನೋವು, ದುರಂತದ ಕಾಲಘಟ್ಟದ ಚಿತ್ರಣ ನೀಡಿದಂತಿದೆ ಶೀರ್ಷಿಕೆ. ಹಾಗೇ ವಿಭಾ ಅವರ ಕವಿತೆಯ ಕುರಿತು ಕಳೆದುಕೊಂಡದ್ದನ್ನು ಹುಡುಕುವ ತುಡಿತದಲ್ಲಿ ಆರಂಭಗೊಂಡಿರುವ ವಿಭಾ ಪದ್ಯಗಳು ಕ್ರಮೇಣ ನಿಲುಕದ ನಿಗೂಢಕ್ಕೂ ಕೈಚಾಚಿವೆ... ನಿಂತಲ್ಲಿ ನಿಲ್ಲಲಾಗದ ಚಂಚಲ ಚೈತನ್ಯದಲ್ಲೂ ನಿಶ್ಚಲ ನಿರಾಕಾರವನ್ನು ಅನುಭವಿಸುವ ಹಂಬಲವನ್ನು ಹೊತ್ತಂತಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ನಿಜಕ್ಕೂ ಹೊಸ ಬಗೆ ಲೋಕವನ್ನು ಆಪ್ತಗೊಳಿಸುವ ರೀತಿ ಕಾವ್ಯದಲ್ಲಿ ಕಂಡುಬಂದಿದೆ.

ಇದೇ ಸಂಕಲನದಲ್ಲಿ ವಿಕ್ರಮ್ ವಿಸಾಜಿ ಅವರು ವಿಭಾ ಅವರ ಕವಿತೆಯ ಕುರಿತು 'ಬೆಳಕಿನದೇ ಧ್ಯಾನ' ಎಂಬ ಲೇಖನ ಬರೆದಿದ್ದಾರೆ. ಈ ಲೇಖನದಲ್ಲಿ ವಿಭಾಳರಿಗೆ ಕಾಡಿರುವುದು 'ಪ್ರೀತಿ ಮತ್ತು ಸಮಾಜ' ಬಹುತೇಕ ಸಮಕಾಲೀನ ಕಾವ್ಯದಲ್ಲಿ 'ಪ್ರೀತಿ ಮತ್ತು ಸಮಾಜ' ತುಂಬಾ ಆಪ್ತವಾಗಿಸಿಕೊಳ್ಳುವ ಹೊಸ ಬಗೆಯ ವ್ಯಾಖ್ಯಾನ ಬರೆಯುವ ಹಂಬಲ ಕಂಡಿಂತಿದೆ. ವಿಭಾ ಅವರು ದಿಟ್ಟವಾಗಿ ಬರೆಯುವ ಸಂದರ್ಭದಲ್ಲೂ ಒಂದು ತರಹದ ಅಪಾಯಕತೆಯ ದನಿಯೇ ಮುನ್ನೆಡೆಗೆ ಬಂದಂತಿದೆ. ಕೆಲ ಕಡೆ ಸ್ವಾಭಿಮಾನಿಯಂತೆ, ನುಗ್ಗುವ ಭಾಷೆ, ಅನೇಕ ಕಡೆ ಸವರಿಸಿಕೊಂಡು ನಿಧಾನವಾಗಿ ಹೆಜ್ಜೆ ಹಾಕಿದೆ. ಹಾಗೇ ಕಂಪನಿಗಳಿಗೆ ಒಳಗಾದ ಮನಸ್ಸನ್ನು ಸಂತೈಸಿಕೊಳ್ಳುವ ಮತ್ತು ವಸಂತದ ಬರುವಿಕೆಯ ಮುನ್ನವೇ ಶಿಶಿರನನ್ನು ಅಸಹಾಯಕತೆಯಿಂದ ಕಾಣುವ ತಣ್ಣನೆಯ ನೋಟವಿದೆ ಎಂಬ ಅಭಿಪ್ರಾಯಪಟ್ಟಿದ್ದಾರೆ. ಹೆಣ್ಣಿನ ಅಸ್ಮಿತೆಯನ್ನು ಕಂಡುಕೊಳ್ಳುವ ರೀತಿ ಕಾವ್ಯದಲ್ಲಿ ವಿಶೇಷವಾಗಿ ಮೂಡಿಬಂದಿದೆ.

ರಮೇಶ ಅರೋಲಿ ಅವರು 'ಜುಲುಮೆ' ಎಂಬ ಸಂಕಲನಕ್ಕೆ ಕೆ.ವಿ.ತಿರುಮಲೇಶ್ ಅವರು ಮುನ್ನುಡಿಯನ್ನು 'ಕಂದೀಲು' ಎಂಬ ಶೀರ್ಷಿಕೆಯಡಿಯಲ್ಲಿ ಕಾವ್ಯ ಕುರಿತು ಕೆಲವು ಮಾಹಿತಿಯನ್ನು ನೀಡಿದ್ದಾರೆ. ಕವಿತೆಯೆಂದಿಗೂ ನಿಲ್ಲುವುದಿಲ್ಲ, ನಿಲ್ಲಬಾರದು, ಕವಿತೆಯು ಗಾದಿಯ ಹಾಗೆ, ಮತ್ತೆ ಮತ್ತೆ ಬರುತ್ತದೆ. ಆದರೆ ಪ್ರತಿ ಸಲವೂ ಹೊಸತಾಗಿ, ಹೊಸ ತಲೆಮಾರಿನ ಹೊಸ ಕವಿಗಳು ಮೂಡಿಬರುತ್ತಾರೆ. ಪ್ರತಿಯೊಬ್ಬ ಕವಿಯೂ ತನ್ನ ವಿಶಿಷ್ಟ ಅಭಿವ್ಯಕ್ತಿಗಾಗಿ ತುಡಿಯವುದು

ನೋಡುತ್ತೇವೆ. ರಮೇಶ ಅರೋಲಿಯನ ಕವಿತೆಗಳನ್ನು 'ಗೇಯ ಕವಿತೆಗಳು' ಎಂಬ ಪ್ರಕಾರವಾಗಿ ನೋಡಬಹುದು. ಈ ಎಲ್ಲಾ ಕವಿತೆಗಳು ಜನಪದ ರೀತಿಯಲ್ಲಿ ಹಾಡಲು ಬರುತ್ತದೆ ಒಂದು ಜನಪದ ಲಯಗಾರಿಕೆ ಇದೆ. ಇಂದು ಜಾಗತೀಕರಣದ ಭರಾಟೆಯಲ್ಲಿ ಹಾಡುಗಳು ಮಾಯವಾಗುತ್ತಿವೆ ಎಂಬ ಭಯದಲ್ಲಿರುವ ನಮ್ಮಯಗಳಿಗೆ ರಮೇಶ ಅರೋಲಿಯವರ ಕವಿತೆಗಳು ಹೊಸ ಭರವಸೆ, ಒಂದು ಆಪ್ತಜೀವಂತಿಕೆಯನ್ನು ಹೊಂದಲು ಪ್ರೇರಣೆ ನೀಡುತ್ತವೆ ಎಂದಿದ್ದಾರೆ. ಇದೊಂದು ಹೊಸ ಬಗೆಯ ತಂತ್ರವಾಗಿದೆ. ದೇಶಿತನದ ಮೂಲ ಅಭಿವ್ಯಕ್ತಿಯಾಗಿದೆ. ಚಂದ್ರಶೇಖರ ಕಂಬಾರ, ಬೇಂದ್ರೆ ಅವರ ಅಭಿವ್ಯಕ್ತಿ ಕ್ರಮದಂತೆ ಸಮಕಾಲೀನ ಸಂದರ್ಭದ ಸಾಮಾಜಿಕ ಚಿಂತನೆ ಮತ್ತು ತಲ್ಲಣಗಳನ್ನು ಹಾಡುಗಳ ಮೂಲಕ ಕಾವ್ಯ ಪಂಪರೆಯ ಹೊಸ ಪೊರೆಯನ್ನು ಸೃಷ್ಟಿಸಿ ಅಭಿವ್ಯಕ್ತಿಸಿರುವುದು ವಿಶೇಷವಾಗಿದೆ. ರಮೇಶರ ಕವಿತೆಗಳು ತಮ್ಮ ಆಧುನಿಕತೆಯಲ್ಲಿ ರಾಜಿ ಮಾಡಿಕೊಂಡಿಲ್ಲ. ಅರ್ಥಾತ್ ಅವು ಆಧುನಿಕ ಜಾನಪದ ಎಂಬ ದ್ವಂದ್ವವನ್ನು ಮೀರುವ ಹಾಗೆ ತೋರುತ್ತವೆ. ಜಾಗತೀಕರಣ, ಸ್ತ್ರೀ ದಮನ, ನಿಸರ್ಗದಹನ, ಸ್ವಾತಂತ್ರ್ಯ ಹರಣ ಮತ್ತು ಅಸಮಾನತೆ ಮುಂತಾದ ಆಧುನಿಕ ಜಗತ್ತಿನ ವಸ್ತುವಿಷಯಗಳಲ್ಲಿ ಇಲ್ಲಿ ಸೂಕ್ಷ್ಮವಾಗಿ ಬರುತ್ತವೆ. ಆರತಿ ಹಾಡಿನಂತೆ ಇವು ಲಯದಾರಿಕೆಯಲ್ಲಿ ಕಿವಿಯ ಕಾವ್ಯವಾಗಿ ಸಾಮಾಜಿಕ ಕಳವಳಿಯನ್ನು ಹೊತ್ತುನಿಂತಿವೆ.

## ೨.೧. ತಾತ್ವಿಕತೆಯ ಪರಿಕಲ್ಪನಾತ್ಮಕ ಚರ್ಚೆ

ಕಾವ್ಯದಲ್ಲಿ ತಾತ್ವಿಕತೆಯ ಪಾತ್ರ ಸಂಕೀರ್ಣವಾದುದು. ಕಾವ್ಯದ ಮೂಲಕ ಹೊಸ ಚಿಂತನೆಗಳು ಹುಟ್ಟಿವೆ. ತತ್ವಶಾಸ್ತ್ರ, ತತ್ವಜ್ಞಾನಗಳಿಗೆ ಅನುಗುಣವಾಗಿ ಸಾಹಿತ್ಯ ರಚನೆಯಾಗುವುದೆಂಬ ವಾದಗಳಿಂದ ತೊಡಗಿ ಸಾಹಿತ್ಯ ಸ್ವಾತಂತ್ರ್ಯ ಸಾಕ್ಷಿತ್ವವನ್ನು ಎತ್ತಿಹಿಡಿಯುವ ವಾದಗಳವರೆಗೆ ಶತಮಾನಗಳ ಕಾಲದಿಂದ ನಡೆದು ಬಂದಿರುವ ಚಿಂತನ–ಮಂಥನಗಳ ವಿಸ್ತಾರವಿದೆ. ಇಂಥ ವಾದಗಳ ಒಂದು ತುದಿಯಲ್ಲಿ ಸಾಹಿತ್ಯವು ತತ್ವಶಾಸ್ತ್ರದ ಉಪಕರಣದಂತೆ ಕಂಡಿದೆ. ಇನ್ನೊಂದು ತುದಿಯಲ್ಲಿ ತತ್ವ ವಿಚಾರಗಳು ಸಾಹಿತಿಯ ಅನೇಕ ಉಪಕರಣಗಳಲ್ಲಿ ಒಂದೊಂದು ಗ್ರಹಿಸಲಾಗುತ್ತಿದೆ. ಸಾಹಿತ್ಯವನ್ನು ಕಾವ್ಯಪ್ರತಿಮೆಗಳಿಗೆ ಅಳವಡಿಸಿದ ತಾತ್ವಿಕ ತಿಳಿವಳಿಕೆ ಎಂದು ಒಂದು ಬಗೆಯ ಚಿಂತನ ಕ್ರಮ ಕಾವ್ಯದಲ್ಲಿ ತತ್ವ ವಿಚಾರಗಳು ಮೈಗೂಡಿಕೊಂಡಿರಬೇಕೇ ಹೊರತು ಮನೆ ಮಾಡಿಕೊಂಡ ವಲಸೆ ಹಕ್ಕಿಗಳಾಗಬಾರದು ಎಂದು ನಿರೀಕ್ಷಿಸುತ್ತದೆ. ಇದು ಸ್ಥೂಲವಾಗಿ ವಿವಿಧ ನಿಲುವುಗಳ ಕುರಿತು ಹೇಳಬಹುದಾದದ್ದು. ಭಾರತೀಯ ಕಾವ್ಯ ಮೀಮಾಂಸೆಯಲ್ಲೂ ಇವೆರಡೂ ಮೀಮಾಂಸೆಗಳೂ ತತ್ವ ಮಂಥನಕ್ಕೆ ಏಕಕಾಲದಲ್ಲಿ ಒಳಪಡುವ ಆಧುನಿಕ ಹೊಸ ತಿಳುವಳಿಕೆಯು ಕಾವ್ಯ ಮತ್ತು ತಾತ್ವಿಕತೆಗಳ ಸಂಬಂಧ ಪಡೆಯುವ ವಿನ್ಯಾಸಗಳನ್ನು ವಿವರವಾಗಿ ಅರಿಯುವುದು ಮುಖ್ಯವಾಗಿದೆ. ಈ ಕುರಿತಂತೆ ತಾತ್ವಿಕತೆಯ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯ. ಜೀವನದ ರಹಸ್ಯಾಂಶಗಳ ಕುರಿತು ಕಾವ್ಯವು ತನ್ನ ಅಂತರಂಗದೊಳಗೆ ತೋರುವ ಪ್ರಸಕ್ತಿಯೇ ಅದರ ತಾತ್ವಿಕತೆ ಆಗಿರುತ್ತದೆ. ಜೀವ ಜಗತ್ತು, ಜೀವನ ಇಂದ್ರಿಯ ಗ್ರಹಿಕೆಗೆ ನಿಲುಕುವ ಮತ್ತು ನಿಲುಕದ ಸಂಗತಿಗಳು ಮುಂತಾದವುಗಳ ಕುರಿತು ಕಾವ್ಯವು ನಿಲುವು ಪಡೆದಿರುವ ತಿಳುವಳಿಕೆ,

ಶೋಧಿಸಬಯಸುವ ಅಂಶಗಳು, ಲೋಕಜೀವನದ ಜೀವಾರ್ಥ, ಗೂಡಾರ್ಥ, ಒಡಪು, ರಹಸ್ಯಮಯತೆ ಮುಂತಾಗಿಯೂ ವರ್ಣಿಸಬಹುದಾದ ಸಂಗತಿಯನ್ನು ತಾತ್ವಿಕತೆ ಎನ್ನಬಹುದಾಗಿದೆ. ಈ ಹಿಡಿಗಟ್ಟು ಕವಿಯ ಜೀವನ ದೃಷ್ಟಿ, ದರ್ಶನ, ತತ್ವಗ್ರಹಿಕೆ, ಲೋಕ ಗ್ರಹಿಕೆ, ನೋಟ ಕ್ರಮವನ್ನು ಸೂಚಿಸುವಂಥದ್ದು. ಈ ದೃಷ್ಟಿ ದರ್ಶನಗಳು ರೂಪುಗೊಳ್ಳುವ ಬಗೆಗಳು ಅನೇಕ ವಿಧಗಳಾಗಿರುವುದು ಸಾಧ್ಯ. ಇನ್ನೊಂದು ಬಗೆಯಲ್ಲಿ ವ್ಯಾಖ್ಯಾನಿಸಬಹುದಾದರೆ ಕಾವ್ಯ ಪ್ರಕ್ರಿಯೆಯಲ್ಲಿ ಪ್ರವೃತ್ತಿಗೊಂಡ ಕವಿಯ ಲೋಕಗ್ರಹಿಕೆಯನ್ನು ವಿಶ್ಲೇಷಣೆಯ ಮೂಲಕ ತಾತ್ವಿಕತೆಯಾಗಿ ಹೊರಪಡಿಸಿ ತೋರಬಹುದು. ಅಂದರೆ ತಾತ್ವಿಕತೆಯು ಅನುಭವ ಲೋಕದ ಕುರಿತು ಕವಿಯ ಮೂಲಭೂತ ಧಾರಣೆಗಳನ್ನು ಸೂಚಿಸುವಂಥದು. ಒಂದು ಕಲಾಕೃತಿಯನ್ನು ರೂಪಿಸುವ, ಅದರಲ್ಲಿ ಅವ್ಯಕ್ತಿವೆನಿಸುವಾಗಲೂ ಅಖಂಡವಾಗಿಯೇ ಇರುವ ಅಂಶಗಳಲ್ಲಿ ತಾತ್ವಿಕತೆಯೂ ಒಂದು ವಸ್ತುವನ್ನು, ಸಂಗಾತಿಯನ್ನು ಸನ್ನಿವೇಶವನ್ನು ಹೇಗೆ ನೋಡಬೇಕು, ಎಷ್ಟುನೋಡಬೇಕು ಎಂಬುದನ್ನು ನಿರ್ಣಯಿಸುವುದು ಕವಿಯ ಗ್ರಹಿಕೆಯ ವಿಧಾನವೇ. ಕವಿಯು ಅನುಭವವನ್ನು ತೂಗಿ ನೆಲೆಗಟ್ಟುವ ವಿಧಾನವೆಂದೂ ತಾತ್ವಿಕತೆಯನ್ನು ವಿವರಿಸಬಹುದು. ಕಾವ್ಯದಲ್ಲಿ ಅನುಭವಗಳ ಶೋಧನ, ಸಾಂಸ್ಕೃತೀಕರಣಗಳ ನಡೆದಿರುತ್ತವೆ. ಬರಿಯ ಸಂಕಲನದಲ್ಲಿ ಇಂಥ ಮಂಥನಕ್ಕೆ ಕಡಗೋಲು ತಾತ್ವಿಕತೆಯಾಗಿದೆ. ಅದರಂತೆ ಸಮಕಾಲೀನ ಕಾವ್ಯವು ಹೊಂದಿರುವ ತಾತ್ವಿಕತೆಯನ್ನು ಈ ಸಂಶೋಧನೆಯಲ್ಲಿ ಅರಿಯುವುದಾಗಿದೆ. ಕಾವ್ಯ ಒಳಗೊಂಡಿರುವ ಸಾಮಾಜಿಕ ಚಿಂತನೆ, ಆಶಯ, ಮನೋಭಾವ ಧೋರಣೆಗಳು ಯಾವ ನೆಲೆಗಟ್ಟಿನಲ್ಲಿ ಅಭಿವ್ಯಕ್ತಿಯಾಗುತ್ತವೆ ಅವುಗಳು ಹೊಂದಿರುವ ತಾತ್ವಿಕತೆ ಎಂಥಹದ್ದು ಎಂಬುದನ್ನು ಅಧ್ಯಯನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಅಶೋಕ ಟಿ.ಪಿ., **ಕಾವ್ಯ ಪ್ರೀತಿ,** ಪುಟ ೨೦೯

೨. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೭.

೩. ರಮೇಶ ಅರೋಲಿ, **ಜುಲುಮೆ,** ಪುಟ ೫.

೪. ರಹಮತ್ ತರೀಕೆರೆ, **ಹೊಸ ತಲೆಮಾರಿನ ತಲ್ಲಣ,** ಪುಟ ೧೫೪.

೫. ರತಿ ಎಮ್, **ತಂಪು,** ಪುಟ ೮೩.

೬. ಅದೇ, ಪುಟ ೯೦.

೭. ಅದೇ, ಪುಟ ೬೮.

೮. ಅದೇ, ಪುಟ ೧೬೭

೯. ವಿಭಾ, **ಜೀವಮಿಡಿತದ ಸದ್ದು,** ಪುಟ ೫೪.

೧೦. ವೀರಣ್ಣ ಮಡಿವಾಳರ, **ನೆಲದ ಕರುಣೆಯ ದನಿ,** ಪುಟ ೭



ಅಧ್ಯಾಯ : ಮೂರು

# ಇತ್ತೀಚಿನ ಕನ್ನಡ ಕಾವ್ಯ : ಸಾಮಾಜಿಕ ಸಂಘರ್ಷದ ನೆಲೆ

೩.೧. ಸಾಂಸ್ಕೃತಿಕ ರಾಜಕಾರಣ
೩.೨. ಜಾತಿ ಸಂಘರ್ಷ
೩.೩. ಕೋಮು ಸಂಘರ್ಷದ ನೆಲೆ
೩.೪. ಆಹಾರ ರಾಜಕಾರಣ

ಅಧ್ಯಾಯ : ಮೂರು

# ಇತ್ತೀಚಿನ ಕನ್ನಡ ಕಾವ್ಯ : ಸಾಮಾಜಿಕ ಸಂಘರ್ಷದ ನೆಲೆ

ಕನ್ನಡ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯವು ಒಂದು. ಕವಿ ತನ್ನ ಭಾವನೆಗಳನ್ನು ಆಪ್ತವಾಗಿ ಹೊರಚೆಲ್ಲುವ ಆಕರ್ಷಕ ಮಾಧ್ಯಮ. ಶಿಲಾಯುಗದ ಜನರಿಂದ ಹಿಡಿದು ಇಂದಿನ ನಾಗರಿಕ ಮನುಷ್ಯನವರೆಗೂ ಎಲ್ಲಾ ಕಾಲಗಳಲ್ಲೂ ಕಾವ್ಯ ಸೃಷ್ಟಿ ನಿರಂತರವಾಗಿ ನಡೆದಿದೆ. ಸಾಮಾನ್ಯವಾಗಿ ದಿನನಿತ್ಯ ಆಡುವ ಭಾಷೆಗಿಂತ ಹೆಚ್ಚು ವಿಷಯವನ್ನು ಹೇಳುವ, ಹೇಳಿದ್ದನ್ನು ತೀವ್ರವಾಗಿ ಧ್ವನಿಸುವ ಕಾವ್ಯಭಾಷೆ ತೀರ ವಿಶಿಷ್ಟವಾದದ್ದು. ಸಮಾಜದಲ್ಲಿ ಜನರ ಬದುಕಿನ ಚಿತ್ರಣವನ್ನು ವಾಸ್ತವತೆಯ ನೆಲೆಯಲ್ಲಿ ಹೊರಚೆಲ್ಲುವ ಶಕ್ತಿಯುತವಾದ ಪ್ರಕಾರ. ಕಾವ್ಯ ಕಾಲಮಾನದಿಂದ ಕಾಲಮಾನಕ್ಕೆ ರೂಪಕ, ಆಶಯ, ಸಂವೇದನೆ, ಅಭಿವ್ಯಕ್ತಿ ನೆಲೆಯಲ್ಲಿ ಭಿನ್ನತೆಯನ್ನು ಪಡೆಯುತ್ತ ಸಾಗುತ್ತಾ ಬಂದಿದೆ. ಕಾವ್ಯ ಸೃಷ್ಟಿಯಾಗುವುದು ಮಾಹಿತಿ ಸಂವಹನಕ್ಕಾಗಿ ಮಾತ್ರವಲ್ಲ ಅದು ನಮ್ಮ ಜೀವನದ ಬಗ್ಗೆ ಸೂಕ್ಷ್ಮವಾದ ಅರಿವನ್ನು ಮೂಡಿಸಲು ಅಸ್ತಿತ್ವದೊಡನೆ ನಮ್ಮ ಸಂಬಂಧ ಅರಿತುಗೊಳ್ಳಲು ವಿಸ್ತೃತಗೊಳ್ಳಲು ಸೃಷ್ಟಿಯಾಗುತ್ತದೆ. ಭಾಷಿಕವಾಗಿ, ಸ್ವರೂಪವಾಗಿ, ತಂತ್ರವಾಗಿ ಹೊಸತನವನ್ನು ಪಡೆಯುತ್ತಿರುತ್ತದೆ. ಇತ್ತೀಚಿನ ಕನ್ನಡ ಕಾವ್ಯವು ಜಾಗತೀಕರಣದ ಭಾಗವಾಗಿ ಕಮರಿದ ಮಾನವ ಬದುಕನ್ನು ಚಿತ್ರಿಸುತ್ತಿದೆ. ಇತ್ತೀಚಿನ ಕನ್ನಡ ಕಾವ್ಯ ಗೊತ್ತಿರುವುದನ್ನು ಪುನಃ ಉಚ್ಚರಿಸದೆ ಹೊಸದನ್ನು ತೋರಬಲ್ಲ ಕಾವ್ಯವಾಗಿದೆ. ಕಾವ್ಯ ಸಂವೇದನೆಗಳು ಆಯಾ ವಾತಾವರಣದಿಂದ ಚಿಗಿತದ್ದು ಮತ್ತು ರೂಪಕ, ಸಂಕೇತಗಳಾಗಿ ಅನುಭವಗಳನ್ನು ಕಟ್ಟಿದ್ದ ವಿಶೇಷವಾಗಿದೆ. ಸಂಘರ್ಷದ ಕಾಲಘಟ್ಟದಲ್ಲಿ ಜೀವಿಸುತ್ತಿರುವ ಮನುಷ್ಯನ ಬದುಕನ್ನು, ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸುತ್ತಿರುವುದು ಕಾಣುತ್ತದೆ. ಸಾಮಾಜಿಕ ಸಂಘರ್ಷದ ಚಿತ್ರಣವು ಇಲ್ಲಿ ಭಿನ್ನವಾಗಿ ಮೂಡಿಬಂದಿದೆ.

### ೩.೧. ಸಾಂಸ್ಕೃತಿಕ ರಾಜಕಾರಣ

ಕಾವ್ಯ ತನ್ನ ಕಾಲಘಟ್ಟದ ಸಾಮಾಜಿಕ ಚಿತ್ರಣವನ್ನು ಪ್ರತಿಬಿಂಬಿಸುವ ಬಗೆ. ಆ ಕಾಲಘಟ್ಟದ ಕಾವ್ಯದ ಉಡಿಯಲ್ಲಿ ತವಕ ತಲ್ಲಣಗಳು, ಸಂಕಟಗಳು, ಆಶಯಗಳು, ಕನಸುಗಳನ್ನು ಹೊಂದಿರುತ್ತದೆ.

ಹೀಗಾಗಿ ಕಾವ್ಯ ಅರಿತರೆ ಆ ಕಾಲಘಟ್ಟದ ಸಾಮಾಜಿಕ ಚಿತ್ರಣ ಅರಿತಂತೆ ಎಂಬ ಅಭಿಪ್ರಾಯವು ಇದೆ. ಇದು ಒಂದು ರೀತಿಯಲ್ಲಿ ಸರಿ. ಇಂದು ನಾವು ಪುರಾತನದ ಸಾಹಿತ್ಯದ ಆಧಾರದ ಮೇಲೆ ಅಂದಿನ ಸಾಮಾಜಿಕ ಬದುಕಿನ ಚಿತ್ರಣವನ್ನು ಅರಿಯಲು ಸಾಧ್ಯವಾಗುತ್ತಿದೆ. ಕೆಲವೊಂದು ಸಾರಿ ಪ್ರೇರಣೆಯ ಫಲವಾಗಿ ನಿಲ್ಲುತ್ತವೆ. ಯುವ ಬರಹಗಾರರು ಆಧುನಿಕ ಕನ್ನಡ ಕಾವ್ಯ ವಿಸ್ತರಣಕ್ಕೆ ಕೈ ಹಾಕುತ್ತಿರುವುದು ಪುರಾವೆಗಳು ಅವರ ಕೃತಿಗಳಿಂದ ಸಿಗುತ್ತಿರುವ ಸಮಯವಿದು. ಬದುಕಿನಲ್ಲಿ ತಾವು ಕಂಡುಕೊಂಡ ಹಾದಿಯ ಫಲುಕುಗಳನ್ನು ಹೌದೆನ್ನಿಸುವಂತೆ ದಾಖಲಿಸುತ್ತಿರುವ ಈ ಹೊತ್ತಿನ ಕವಿಗಳ ಕಾವ್ಯದ ನಡಿಗೆ ಕನ್ನಡ ಕಾವ್ಯಕ್ಕೆ ಹೊಸ ಅನುಸಂಧಾನ, ಸಾಧ್ಯತೆಗಳನ್ನು ಮೂಡಿಸುತ್ತಿದೆ. "ಖಾಸಗಿಯಾದ ಒಳಗಿನ ತಲ್ಲಣಗಳನ್ನೇ ದೊಡ್ಡದೆಂದು ಪರಿಭಾವಿಸಿ ತನ್ನ ಅಸ್ತಿತ್ವವನ್ನು ಹುಡುಕುವ ವೈಯಕ್ತಿಕತೆಯಿಂದ; ಹಾಗೆಯೇ ಕಷ್ಟಗಳಲ್ಲಿ ಹುದುಗಿದ ಎಲ್ಲರ ದುಗುಡಗಳನ್ನು ತನ್ನವೇ ಎಂದು ಪರಿಭಾವಿಸಿ ವಿಡಿಯುವ ಸಾರ್ವತ್ರಿಕತೆಯೂ ಇದೆ".[೧] ಬರವಣಿಗೆಯನ್ನು ಒಂದು ಆಧ್ಯಾತ್ಮದ ನೆಲೆಯಾಗಿಸಿಕೊಂಡು ಅಭಿವ್ಯಕ್ತಗೊಳ್ಳುತ್ತಿರುವ ಇತ್ತೀಚಿನ ಕನ್ನಡ ಕಾವ್ಯದಲ್ಲಿ ಒಂದು ಕ್ರಮವಿದೆ. ಜೀವಹಿಂಡುವ ಸಂಬಂಧಗಳನ್ನು ಎದುರಿಸಲು ಬೇಕಾದ ಮಾನಸಿಕ ಸಿದ್ಧತೆ ಯಾವುದು? ಅಂತ ಇಂದಿನ ಕವಿತೆಗಳು ಆಳದಲ್ಲಿ ಕೇಳಿಕೊಳ್ಳುತ್ತವೆ. ಇದಕ್ಕೆ ಉತ್ತರವಾಗಿ ಈ ಹುಡುಕಾಟದ ಕೊನೆಗೆ ಏನಾದರೂ ದಕ್ಕಿತು ಎಂಬ ಸಣ್ಣ ಆಸೆ ಇರುವುದು ಕಾಣುತ್ತೇವೆ. ಹೊಸ ತಲೆಮಾರಿನ ಕವಿಗಳು ಜಗತ್ತಿನ ಎಲ್ಲೆ ನಡೆದ ನೋವಿನ ಆಕ್ರಂದನವನ್ನು ತನ್ನದೆಂಬಂತೆ. ತನ್ನ ಸಂಕಟವನ್ನು ಜಗತ್ತಿನ ಸಂಕಟವೆಂಬಂತೆ. ಸಮೀಕರಿಸಿ ಅಭಿವ್ಯಕ್ತಿಸುವುದು ಕಂಡುಬರುತ್ತಿದೆ. ಜಗತ್ತಿನ ನೋವಿನ ಕೂಗಿಗೆ ತಾನೂ ಧ್ವನಿಗೂಡಿಸುವ ಮಹಾದಾಸೆ ಹೊಂದಿ, ಈ ಪ್ರಪಂಚದ ಯಾವುದೇ ಮೂಲೆಯಲ್ಲಿ 'ಹಸಿವಿನಿಂದ' ನೊಂದು ಜೀವಬಿಟ್ಟ ಜೀವಗಳಿಗೆ ತಾನೂ ಕಣ್ಣೀರಾಕಿ ಹೆಗಲ ಮೇಲೆತ್ತಿಕೊಳ್ಳುವ ಕಾವ್ಯವಾಗಿ ಕಂಡಿದೆ. ಇಲ್ಲಿನ ಕಾವ್ಯದ ಕಸುವೆಂದರೆ, 'ರೂಪಕ'ಗಳ ನುಡಿಗಟ್ಟು, ಭಾವನಾತ್ಮಕ ತೀವ್ರತೆ, ದಾರ್ಶನಿಕತೆ ಹಾಗೂ ಮೇರೆಯಿಲ್ಲದ ಜೀವ ಪ್ರೀತಿ. ಇವು ಇತ್ತೀಚಿನ ಕನ್ನಡ ಕಾವ್ಯದ ವಿಶಿಷ್ಟತೆಗಳಾಗಿವೆ.

ಆಯಾ ಕಾಲಘಟ್ಟಕ್ಕೆ ಆಯಾ ಕಾಲಘಟ್ಟದ ಕಾವ್ಯ ಪ್ರತಿಸ್ಪಂದಿಸುತ್ತಿರುತ್ತದೆ. ಅದರಂತೆ ಇಂದಿನ ಸಮಕಾಲೀನ ಕಾವ್ಯವೂ ಸಹ. ಇಂದಿನ ಸಾಮಾಜಿಕ ಸಂಘರ್ಷದಲ್ಲಿ ನಡೆಯುತ್ತಿರುವ ಸಾಂಸ್ಕೃತಿಕ ರಾಜಕಾರಣದ ಕುರಿತಂತೆ ಪ್ರತಿರೋಧವಾಗಿ ಪ್ರತಿಸ್ಪಂದಿಸುತ್ತಿದೆ. ಏಕಮುಖವಾದ 'ಸಾಂಸ್ಕೃತಿಕ' ಪರಂಪರೆಯನ್ನು ನಿರ್ಮಿಸಲು ಹೊರಡಿರುವ ವ್ಯವಸ್ಥೆಗೆ ತಿಕುಗೇಟು ನೀಡುವಂತೆ, ಜೊತೆಗೆ ಆ ವ್ಯವಸ್ಥೆ ನಡೆಸುತ್ತಿರುವ ಹುನ್ನಾರುಗಳ ಕುರಿತಂತೆ ಕಾವ್ಯ ಅಭಿವ್ಯಕ್ತಗೊಳ್ಳುತ್ತಿರುವುದು ಕಂಡುಬಂದಿದೆ. ಕನ್ನಡ ನಾಡಿನಲ್ಲಿ ಈ ಹೊತ್ತು ಪ್ರಕಟವಾಗುತ್ತಿರುವ ಕವನಸಂಕಲನಗಳು ಹಾಗೂ ಬಿಡಿ ಪದ್ಯಗಳು ಪ್ರಸ್ತುತತೆ ಸಮಾಜದ ಕಳಕಳಿಯ ಆಶಯವನ್ನು ಹೊತ್ತಿನಿಂತಿದೆ. ಕವಿ ತನ್ನ ಖಾಸಗಿ ದೃಷ್ಟಿಯಿಂದ ಲೋಕದೃಷ್ಟಿಯನ್ನು ಕಾಣುವ ಪರಿ ಭಿನ್ನವಾಗಿದೆ. ಸಂಸ್ಕೃತಿಯ ವ್ಯಾಖ್ಯಾನ ವಿಸ್ತರಿಸುತ್ತಿರುವುದರಿಂದ ಸಂಸ್ಕೃತಿಯ ವ್ಯಾಪ್ತಿ ದೊಡ್ಡದಾಗಿದೆ. ಅದರಂತೆ ಹಲವು

ಸಂಸ್ಕೃತಿಯನ್ನು ಮನ್ನಣೆಯಾಗಿಸದೆ 'ಏಕ ಸಂಸ್ಕೃತಿ'ಯಾಗಿಸುವ ವ್ಯವಸ್ಥೆಗೆ ಧಿಕ್ಕಾರ ರೂಪವಾಗಿ ಪ್ರತಿಯೊಂದು ಸಮುದಾಯದ 'ಸಂಸ್ಕೃತಿಯ' ಜೀವಸೆಲೆಯನ್ನಾಗಿ ಕಾಣಬಯಸುವ ಆಶಯವನ್ನು ಸಮಕಾಲೀನ ಕಾವ್ಯ ಹೊಂದಿದೆ. ಸಂಘರ್ಷದ ಕುರುಹನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ ಕವಿ ವೀರಣ್ಣ ಮಡಿವಾಳರ ಕವಿತೆಯ ಸಾಲುಗಳಾದ;

ರೇಷಿಮೆ ಪಂಜೆ ಜರತಾರಿ ಸೀರೆ
ಗಂಜಿ ಹಾಕಿ ಇಸ್ತ್ರೀ ಮಾಡಿಕೊಡಬೇಕು
ಕಿಡಿ ಬೀಳದ ಹಾಗೆ ಎಚ್ಚರವಿರಬೇಕು ಮೈಯೆಲ್ಲಾ ಕಣ್ಣಾಗಿ
ನೀವು ನಮ್ಮ ಅಂಗಡಿಗೆ ಬೆಂಕಿ ಹಚ್ಚಿದಾಗಿನ ಕುರುಹು
ಇನ್ನು ನನ್ನ ಎಡತೊಡೆಯ ಮೇಲೆ ಹಾಗೆಯೇ ಇದೆ.[೨]

ಕವಿ ವೀರಣ್ಣ ಮಡಿವಾಳರ 'ಹಡದಿಹಾಸುವ ಅಗಸರ ಹಾಡು' ಎನ್ನುವ ಕವಿತೆಯ ಸಾಲುಗಳಲ್ಲಿ ತನ್ನ ಸಮುದಾಯದ 'ಕಸುಬು'ನ್ನು ಕಾವ್ಯವಾಗಿಸಿದ್ದಾರೆ. ತನ್ನ ಕಾವ್ಯದಲ್ಲಿ ಕಾಲದ ದರ್ಶನದ ಜೊತೆಗೆ ಸಮುದಾಯದ 'ಸಾಂಸ್ಕೃತಿಕ' ಚಿತ್ರಣವಿದೆ. ಇಲ್ಲಿ ಹಸಿವು ಬಡತನ ಕಾವ್ಯದ ಸ್ಥಾಯಿ ಭಾಗವಾಗಿರುವುದರ ಜೊತೆಗೆ ಸಾಂಸ್ಕೃತಿಕ ಸಂಘರ್ಷವು ಇದೆ. ರೇಷ್ಮೆಯ ಕಚ್ಚೆ, ಜರತಾರಿ ಸೀರೆ. ಇವು ಸಮಾಜದ ಉನ್ನತ ವರ್ಗದ ಸೂಚಕವಾಗಿದೆ. ಇವುಗಳ ಸೇವೆಯ ಅಡಿಯಲ್ಲಿ ತಳಸಮುದಾಯವಿರುವುದನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾರೆ. ಇಲ್ಲಿ ಎರಡು ಸಂಸ್ಕೃತಿಯ ಸಂಘರ್ಷದ ಚಿತ್ರಣವಿದೆ. ಶ್ರಮಸಂಸ್ಕೃತಿಯು ಒಂದು, ಅದನ್ನು ಅನುಭವಿಸುವುದು ಇನ್ನೊಂದು. ಸಮಾಜದಲ್ಲಿ ನಡೆಯುವ ಬದಲಿತ ಸಮುದಾಯಗಳು, ತಳಸಮುದಾಯವನ್ನು ಯಾವ ರೀತಿಯಾಗಿ ಶೋಷಣೆಗೆ ಒಳಪಡಿಸುತ್ತಿವೆ. ಶ್ರಮ ಸಂಸ್ಕೃತಿಯನ್ನು ಸೂಚಿಸುವ 'ಅಂಗಡಿಯನ್ನು' ಸುಟ್ಟು ಹಾಕುವುದು ಒಂದು ಸಂಸ್ಕೃತಿ. ಇನ್ನೊಂದು ಸಂಸ್ಕೃತಿಯ ನಡುವಿನ ಸಂಘರ್ಷದ ಪ್ರತೀಕವಾಗಿ ಚಿತ್ರಿಸಿದ್ದಾರೆ. ಇದು ಬರೀ ಅಂಗಡಿಯ ನಾಶವಾಗದ ಆ ಸಮುದಾಯದ ಕಸುಬು ಮತ್ತು ಬದುಕು ಹಾಗೂ ಸಂಸ್ಕೃತಿಯ ನಾಶ. ಇದೇ ಕವಿತೆಯು ಮುಂದುವರೆದ ಸಾಲುಗಳಲ್ಲಿ ನಾವೇ ಹಾಸಿದ ನೀರಬಟ್ಟೆಯ ಮೇಲೆ ಉದ್ರೋಕ ಮಲುಗುವ ನಿಮಗೆ ನಾವು ಉಸುರುವ ಗಾಳಿಯೂ ತಾಕಬಾರದು ಎಂದು ಹತಾಶೆಯಿಂದ ನುಡಿದಿದ್ದಾರೆ. ಇಲ್ಲಿ ಸಣ್ಣನೆಯ ಪ್ರತಿರೋಧ ಇದೆ. ಶೋಷಣೆಯ ಆತ್ಯಂತಿಕ ಸ್ಥಿತಿಯನ್ನು ಕಂಡ ಶೋಷಿತ ಸಮುದಾಯಗಳು ನಡುವಿನಿಂದಲೇ ಇಂದಿನ ಅನೇಕ ಕವಿಗಳ ಕಾವ್ಯ ರಚನೆಯಲ್ಲಿ ತೊಡಗಿ ಇವರ ಬಹುಪಾಲು ಕಾವ್ಯಾಭಿವ್ಯಕ್ತಿ ಒಂದರ್ಥದಲ್ಲಿ ಪ್ರತಿರೋಧವಾಗಿದೆ ಈ ನೆಲೆ. ಈ ದೇಶ ಬಹುಸಂಸ್ಕೃತಿಯ ತಾಣ. ಒಂದೊಂದು ಸಂಸ್ಕೃತಿಯ ತನ್ನದೇ ಆದ ಅನನ್ಯತೆ ಇದೆ. ಜೊತೆಗೆ ಸಾಂಸ್ಕೃತಿಕ ಪರಂಪರೆಯ ವಿಶಿಷ್ಟತೆ ಇದೆ. ಇಂತಹ ಹಲವು ಸಂಸ್ಕೃತಿಯನ್ನು ಮಾನ್ಯ ಮಾಡದೆ ಏಕಸಂಸ್ಕೃತಿಯನ್ನು ಏರಲು ಹೊರಟಿರುವ ವ್ಯವಸ್ಥೆಗೆ ಪ್ರತಿರೋಧವಾಗಿ ಸಂಘರ್ಷಾತ್ಮಕ ನೆಲೆಯಲ್ಲಿ ಕಾರ್ಯ ಅಭಿವ್ಯಕ್ತಗೊಳ್ಳುತ್ತಿದೆ. ಸಮಕಾಲೀನ ಕಾವ್ಯದ ಆಶಯ ಬಹುಸಂಸ್ಕೃತಿಯನ್ನು

ಪ್ರೇರೇಪಿಸುವುದಾಗಿದೆ. ಶತಶತಮಾನದುದ್ದಕ್ಕೂ ಕಾವ್ಯ ಜೀವಪರವಾದದ್ದು. ಅದರಂತೆ ಸಮಕಾಲೀನ ಕಾವ್ಯವು ಸಹ ಒಂದು ಸಂಸ್ಕೃತಿಯಲ್ಲಿ ಆ ಸಂಸ್ಕೃತಿಗೆ ಒಳಪಡುವ ಸಮುದಾಯದ ಜನರ ಬದುಕು, ಕಸುಬು, ಕಲೆ, ನಂಬಿಕೆ, ಆಚರಣೆ, ಸಾಹಿತ್ಯ ಭಾಷೆ, ಕ್ರೀಡೆ, ಹಬ್ಬ, ಉಡುಪು, ವ್ಯವಹಾರಿಕ ಮತ್ತು ವೈವಾಹಿಕ ಆಚರಣೆಗಳು ಇವುಗಳೆಲ್ಲವನ್ನು ಒಳಗೊಂಡಿರುತ್ತದೆ. ಒಂದೊಂದು ಕುಲ-ಕಸುಬು, ಒಂದೊಂದು ಆಚರಣೆ ತನ್ನದೇ ಅನನ್ಯತೆಯನ್ನು ಹೊಂದಿರುತ್ತದೆ. ಇಂತಹ ಅನನ್ಯತೆಯ ಬದುಕು ಮೇಲೆ, ಬೀಳುವ ನಾಶದ ಪೆಟ್ಟಿನ ವಿರುದ್ಧ ಕಾವ್ಯ ಧ್ವನಿ ಎತ್ತಿರುವುದು ಕಂಡುಬಂದಿದೆ. ಏಕಸಂಸ್ಕೃತಿಯ ನೆಪದಲ್ಲಿ ಅನೇಕ ಸಮುದಾಯದ ಸಾಂಸ್ಕೃತಿಕ ಬದುಕನ್ನು ನಾಶಗೊಳಿಸುವುದರ ವಿರುದ್ಧ ಸಂಘರ್ಷದ ಕೂಗು ಕೂಗಿದಂತಿದೆ. ಹೀಗೆ ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯ ಮೇಲೆ ಅಧಿಪತ್ಯವನ್ನು ಸಾಧಿಸಿ ಅದನ್ನು ಅಮಾನ್ಯಗೊಳಿಸುತ್ತಿದೆ ಎಂಬುದನ್ನು ಸಮಕಾಲೀನ ಕಾವ್ಯ ತುಂಬಾ ಸಮರ್ಥವಾಗಿ ಕಟ್ಟಿಕೊಟ್ಟಿದೆ.

ಇತ್ತೀಚಿನ ಕನ್ನಡ ಕಾವ್ಯವು ಸಾಮಾಜಿಕ ಬದಲಾವಣೆಯ ಆಶಯವನ್ನು ಒಳಗೊಂಡು ಜವಾಬ್ದಾರಿಯ ಹೊಣೆ ಹೊತ್ತಂತಿದೆ. ಕೋಮುವಾದ ಮತ್ತು ಧಾರ್ಮಿಕ ಮೂಲಭೂತವಾದದ ವಿರುದ್ಧ ಗಟ್ಟಿ ಧ್ವನಿ ಎತ್ತಿದೆ. ಕಾವ್ಯ ಮತ್ತು ಸಮಾಜ ಮುಖಾಮುಖಿಯಾಗಿಸಿದಾಗ ಸಮಾಜದಲ್ಲಿ ನಡೆಯುತ್ತಿರುವ ದುರಂತಗಳ ಬಗ್ಗೆ ಕಾವ್ಯ ಮಿಡಿಯುವುದನ್ನು ಕಾಣಬಹುದು. ಅದರಂತೆ ಒಂದು ಪ್ರಬಲ ಸಂಸ್ಕೃತಿ ಇನ್ನೊಂದು ಸಂಸ್ಕೃತಿಯ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯನ್ನು ಕವಿ ಆರೀಫ್‌ರಾಜರು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ಅವರ ಕಾವ್ಯದ ಸಾಲುಗಳನ್ನು ಗಮನಿಸಿದಾಗ,

ನಮಗೆ ಮನೆ ಕೊಡುವುದಿಲ್ಲವಂತೆ
ನಗರದಲ್ಲಿ ನಮಗೆ ಬಾಡಿಗೆ ಮನೆ ಸಿಗುವುದಿಲ್ಲವಂತೆ
ಏಕೆಂದರೆ ನಾವು
ಗಡ್ಡ ಬಿಟ್ಟಿರುತ್ತೇವೆ, ದನದ ಮಾಂಸ ತಿನ್ನುತ್ತಿರುತ್ತೇವೆ
ಕರ್ಫ್ಯೂ ಹೇರಿದಂತಿರುವ ತುರ್ತು ಪರಿಸ್ಥಿತಿಯ ನಡಾವಳಿಗಳು
ನಮ್ಮನ್ನು ಅನುಮಾನದಿಂದ ಕಾಣುತ್ತವೆ.
ಕ್ರೀಡೆಗಳಲ್ಲಿ ಸೇವೆಗಳಲ್ಲಿ ಸೌಹಾರ್ದ ಸಂಬಂಧಗಳಲ್ಲಿ[೩]

ಬಹು ಸಂಸ್ಕೃತಿಯ ತಾಣವಾದ ಈ ನೆಲದಲ್ಲಿ ಹಲವು ಧರ್ಮದ ಜನರು ವಾಸಿಸುತ್ತಿದ್ದಾರೆ. ಒಂದು ಅಲ್ಪಸಂಖ್ಯಾತ ಸಮುದಾಯವನ್ನು ಅನುಮಾನದಿಂದ ನೋಡುವ ಕರಾಳ ಚಿತ್ರಣ ಈ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವುದು ಕಂಡುಬಂದಿದೆ. ಕವಿ ಇಲ್ಲಿ ತುಂಬಾ ನೋವಿನಿಂದ ನುಡಿದಿರುವುದನ್ನು ಕಾಣುತ್ತೇವೆ. ನಾವು ಈ ನೆಲದ ವಾಸಿಗಳೇ ಎಂದು ದೃಢೀಕರಿಸಬೇಕಾದ ದುರಂತ ಬಂದಿದೆ. ಒಂದು ಅಲ್ಪಸಂಖ್ಯಾತ ಸಮುದಾಯವನ್ನು ಯಾಕೆ? ಅನುಮಾನದಿಂದ ನೋಡಲಾಗುತ್ತದೆ ಎಂಬ ದುಗುಡ ವ್ಯಕ್ತಪಡಿಸಿದ್ದಾರೆ. ಹಾಗೇ ಈ ಸಮುದಾಯದ ಸಾಂಸ್ಕೃತಿಕ

ಆಚರಣೆಯ ಭಾಗವಾದ ಗಡ್ಡ ಬಿಡುವುದು, ಆಹಾರ ಸಂಸ್ಕೃತಿಯ ಭಾಗವಾದ ದನದ ಮಾಂಸ ತಿನ್ನುವುದು ಅವರ ಸಾಂಸ್ಕೃತಿಕ ಹಕ್ಕು. ಆದರೆ ಈ ಹಕ್ಕು ಹತ್ತಿಕ್ಕುವ ಹಾಗೂ ಅನುಮಾನಾಸ್ಪದವಾಗಿ ನೋಡುವ ಮನಸ್ಸುಗಳಿಗೆ ಸೌಹಾರ್ದತೆಯ ಕನಸು ಹೊತ್ತು ನಿಂತಿದ್ದಾರೆ. ಜೊತೆಗೆ ತನ್ನ ಸಮುದಾಯದ ಅನನ್ಯತೆಯನ್ನು ಕಾಪಾಡಿಕೊಂಡು. ಈ ದೇಶದ ವಾಸಿಗಳಾಗಿದ್ದರೂ ಸಾಂಸ್ಕೃತಿಕ ಆಚರಣೆಯ ಭಿನ್ನತೆಯಿಂದಾಗಿ ಮನುಷ್ಯ ಮೂಲಭೂತ ಸೌಕರ್ಯದಲ್ಲಿ ಒಂದಾದ 'ವಾಸ' ಈ ವಾಸಕ್ಕೆ ಮನೆಯನ್ನು ಬಾಡಿಗೆ ನೀಡಲಾರದ ಸ್ಥಿತಿಯನ್ನು ಕಂಡು ಕವಿ ಈ ಕವಿತೆಯು ಮುಂದಿನ ಸಾಲುಗಳಲ್ಲಿ ನಾವು ಭಯೋತ್ಪಾದಕರಲ್ಲಿ ಗುಲಾಮಿ ಸಂತತಿಯ ಕಪ್ಪು ಅಕ್ಷರಗಳು ನಾವು ಗೋಡೆಗಳ ಮೇಲೆ ಸೌಹಾರ್ದತೆಯ ಬರಹವನ್ನು ಬರೆಯುವೆವು. ಶತಮಾನದಿಂದ ಹೊರಗಿದ್ದ ಹಣೆ ಬರಹ ಬದಲಾಯಿಸುತ್ತೇವೆ. ಈ ವ್ಯವಸ್ಥೆಯ ಹುಣ್ಣುಗಳನ್ನುವರೆಸಿ ಹಾಕುತ್ತವೆ ಎಂದಿರುವುದು ಸಾಂಸ್ಕೃತಿಕ ಸಂಘರ್ಷದ ನೆಲೆ ಕಾಣಬಹುದು.

ಸಮಕಾಲೀನ ಕಾವ್ಯ ಸಮಕಾಲೀನ ದುರಂತಗಳಿಗೆ, ರೋಗಗಳಿಗೆ ಮುಲಾಮು ಅರಿಯಲು ಒಂದು ರೀತಿಯ ಪ್ರಾಮಾಣಿಕ ಪ್ರಯತ್ನ ಮಾಡುತ್ತಿದೆ. ಕೆಲವೊಂದು ದೊಡ್ಡ ದೊಡ್ಡ ಕಾಯಿಲೆ ಎದುರಾಗಿ ನಿಲ್ಲುವ ಹಠಮಾರಿತನವು ಇದೆ. ಕೆಲವೊಂದು ರೋಗಗಳಿಗೆ ಪ್ರೀತಿ ವಾತ್ಸಲ್ಯದ ಮೂಲಕ ಮುಲಾಮ ಹಿಡಿದು ಮುಖಾಮುಖಿಯಗಿಯೂ ಕಾವ್ಯ ನಿಂತಿದೆ. ಎನ್ಕೆ. ಹನುಮಂತಯ್ಯರ ಕವನದ ಸಾಲುಗಳನ್ನು ಗಮನಿಸಿದಾಗ ಅಲ್ಲಿ ವ್ಯಕ್ತಗೊಂಡಿರುವ ಸಾಂಸ್ಕೃತಿಕ ಸಂಘರ್ಷದ ನೆಲೆ ತುಂಬಾ ವಿಶಿಷ್ಟವಾದದ್ದು. ಇವರ ಕಾವ್ಯದ ರೂಪಕಗಳು ಸಮಕಾಲೀನ ಚಿತ್ರಣವನ್ನು ಸಮರ್ಥವಾಗಿ ಚಿತ್ರಿಸುತ್ತವೆ.

ಅಂದು ರಾತ್ರಿ ನಿದ್ರೆ ಬಾರದೆ
ಹೊರಗೆ ಬಂದೆ
ಅಂಗಳದ ತುಂಬ
ಮಿಂಚು ಹುಳದ ಸಂತೆ
ಬೆವರಿ ಬೇರಿದೆ.[೪]

ಜೀವಿಸುವ ಕಾಲಗರ್ಭವು ಕಾವ್ಯವನ್ನು ಪ್ರೇರೇಪಿಸುತ್ತದೆ ಮತ್ತು ರೂಪಿಸುತ್ತದೆ. ಕವಿ ಮೇಲಿನ ಕವಿತೆಯ ಸಾಲಿನಲ್ಲಿ ರಾತ್ರಿಯ ವೇಳೆ ನಿದ್ರಾವಸ್ಥೆಯಲ್ಲೂ ಎದುರಾಗುವ ಸಂಕಟ, ವೇದನೆಯನ್ನು ಹೊರ ಹಾಕುವಂತೆ ಮಾಡಿದ ಈ ಕಾಲ ಧರ್ಮವನ್ನು ಈ ಮೇಲಿನ ಆಶಯದಂತೆ ನೋಡಬಹುದು. ಅಂಗಳದ ತುಂಬ ಮಿಂಚು ಹುಳುಗಳ ಸಂತೆ ಎಂಬ ರೂಪಕವು ತನ್ನ ಅಸ್ತಿತ್ವದ, ಸಾಂಸ್ಕೃತಿಕ ಬದುಕನ್ನು ಕಸಿಯುತ್ತಿರುವ ಗೋರ ವ್ಯವಸ್ಥೆಗೆ ಹೋಲಿಸಿದ್ದಾರೆ. ತನ್ನ ಮನೆ ಅಂಗಳದಲ್ಲಿ ತನ್ನಿಚ್ಚೆಯಂತೆ ತನ್ನ ಸಾಂಸ್ಕೃತಿಕ ಪರಂಪರೆಯಂತೆ ಬದುಕಲು ಅವಕಾಶವಿಲ್ಲದ ಸ್ಥಿತಿಯನ್ನು ನೆನೆದು ಬೆವರಿ ಬರೆದಂತಿದೆ. ಇದು ಬರೀ ಖಾಸಗಿತನದ ವೇದನೆಯ ಸಂಕಟದಲ್ಲಿ ಅದು ತನ್ನ ಸಮುದಾಯವು ಅನುಭವಿಸುತ್ತಿರುವ ಸಂಕಟವೂ

ಆಗಿದೆ. ಇಡೀ ಸಮುದಾಯದ ಪ್ರತಿನಿಧಿಯಂತೆ ಆ ಸಂಕಟವನ್ನು ಅಭಿವ್ಯಕ್ತಪಡಿಸಿದ್ದಾರೆ. ದರ್ಪ ಮತ್ತು ದೌರ್ಜನ್ಯವನ್ನು ಉಸಿರಾಗಿಸಿ ಬೇರೊಂದನ್ನು ತನ್ನಂತೆ ಜೀವ ಅಂತ ತಿಳಿಯದೇ 'ಕ್ರೌರ್ಯವನ್ನು' ಅಸ್ತ್ರವಾಗಿಸಿಕೊಂಡು ದಮನಿಸುವ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಿರುವುದು ಕಂಡು ಬಂದಿದೆ. ಇಲ್ಲಿನ ಸಾಂಸ್ಕೃತಿಕ ಮತ್ತು ಸಮುದಾಯಿಕ ಪ್ರಜ್ಞೆ ತುಂಬಾ ಜಾಗ್ರತೆಗೊಂಡಂತಿದೆ. ಕಾವ್ಯ ಪರಂಪರೆಯಲ್ಲಿ ಕಂಡು ಬಂದಿದ್ದ ರೂಪಕಗಳ ಮೇರೆಯನ್ನು ಧಾಟಿ ಈ 'ನೆಲದ' ದೇಸಿ ರೂಪಕಗಳೆನ್ನುವಂತೆ ರೂಪಕಗಳ ಸೃಷ್ಟಿ ಈ ಕವಿಗೆ ದಕ್ಕಿದ್ದು ವಿಶೇಷ ಸಂಗತಿ. ಜೊತೆಗೆ ಕಾವ್ಯದ ಭಾಷೆ ಮೇಲ್ನೋಟಕ್ಕೆ ಸರಳವಾಗಿ ಕಂಡರು. ರೂಪಕಗಳ ನಿರ್ಮಾಣದಲ್ಲಿ ಅವು ಸಂಕೀರ್ಣಗೊಂಡಿವೆ. ರಾಜಕಾರಣ ಎನ್ನುವ ಪದವು ನಮ್ಮ ಕಣ್ಣ ಮುಂದಿರುವ ಚುನಾವಣೆಯ ರಾಜಕಾರಣವಲ್ಲ. ಸಾಹಿತ್ಯಿಕವಾಗಿದ ಇದರ ಅರ್ಥ ಮತ್ತು ಸ್ವರೂಪ ಬೇರೆ ಇದೆ. ಇತ್ತೀಚೆಗೆ ನಾವು ಪ್ರತಿಯೊಂದಕ್ಕೂ ರಾಜಕಾರಣ ಹಚ್ಚಿ ಮಾತಾಡುತ್ತೇವೆ. ಆ ಹಿನ್ನೆಲೆಯಲ್ಲಿ ನೋಡಿದಾಗ ರಾಜಕಾರಣವೆನ್ನುವುದು ಒಂದು ಸಿದ್ಧಾಂತವನ್ನು ಸಮರ್ಥಿಸುವುದು. ಇನ್ನೊಂದರ ಮೇಲೆ ಏರಲಾದ ಸ್ಥಿತಿ ಹಾಗೂ ಆಂತರ್ಯದಲ್ಲಿ ಅಡಗಿರುವ ಮನಸ್ಥಿತಿಯನ್ನು ರಾಜಕಾರಣ ಎಂದು ಹೇಳಬಹುದು. ಇತ್ತೀಚಿನ ಕನ್ನಡ ಕಾವ್ಯವು ಹೊಸದೊಂದು ಬಗೆಯ ಲೋಕದರ್ಶನವನ್ನು ಮೂಡಿಸುತ್ತಿದೆ. ವಾಸ್ತವಲೋಕಕ್ಕೆ ಎದುರಾಗುವ ಸಂಕಷ್ಟಗಳನ್ನು ನವಿರಾಗಿ ಸೂಕ್ಷ್ಮವಾಗಿ ಬಿಡಿಸಿಡಲಿ ಯತ್ನಿಸಿದ ಬಗೆ ಆ ಕಾವ್ಯದಲ್ಲಿ ವ್ಯಕ್ತಗೊಂಡಿರುವುದು. ಒದು ಬಗೆಯ ಸಾಧನೆಯಾಗಿದೆ. ಯಾತನೆ, ಬದಲಾವಣೆಗಳನ್ನು ಹೊಸ ನೆಲೆಯಲ್ಲಿ ನೋಡುವ ಮನುಷ್ಯನ ಚಲನೆಯನ್ನು ಹೊಸ ವ್ಯಾಖ್ಯಾನಕ್ಕೆ ಒಗ್ಗಿಸಲು ಇತ್ತೀಚಿನ ಕಾವ್ಯದ ವಿಶೇಷತೆಯಾಗಿದೆ.

ಇತ್ತೀಚಿನ ಕನ್ನಡ ಕಾವ್ಯವು ಬಹುಕೇಂದ್ರಿಯ ನೆಲೆಯಲ್ಲಿ ಕಾವ್ಯ ಅಭಿವ್ಯಕ್ತಿಗೊಳ್ಳುತ್ತಿರುವುದು ಒಂದು ರೀತಿಯ ಮಿತಿಯೂ ಹೌದು, ಶಕ್ತಿಯೂ ಹೌದು. ಕಾವ್ಯದ ಆಯ್ಕೆಯ ವ್ಯಾಪ್ತಿ ದೊಡ್ಡದಿದೆ. ಜಾಗತೀಕರಣದ ಆಶಯದಂತೆ ಈ ಜಗತ್ತನ್ನು ಒಂದು ಹಳ್ಳಿಯಾಗಿಸಿದ ಪರಿಯಲ್ಲಿ ಇದರ ಪ್ರಭಾವಕ್ಕೆ ಒಳಗಾದ ಬದುಕಿನ ಅಸ್ಥಿರತೆ, ಸಂಬಂಧ, ಮೌಲ್ಯಗಳ ಅಧಪತನ ಇವುಗಳು ಜೊತೆಗೆ ಸಾಂಸ್ಕೃತಿಕ ಸಂಘರ್ಷವು ಒಂದಾಗಿದೆ. ಜಾಗತೀಕರಣದ ಮೊದಲು ಪೆಟ್ಟಾಗಿರುವುದು ಸಾಂಸ್ಕೃತಿಕ ಕ್ಷೇತ್ರಕ್ಕೆ ಕಲೆ, ಆಚರಣೆ, ಸಂಪ್ರದಾಯ, ಕುಲಕಸುಬುಗಳು ಇವುಗಳ ಮೇಲೆ ತನ್ನ ಕರಾಳತೆಯನ್ನು ಬೀರಿದ ಬಗೆಯನ್ನು ಇತ್ತೀಚಿನ ಕಾವ್ಯ ಸೊಗಸಾಗಿ ಚಿತ್ರಿಸುತ್ತಿದೆ. ಅದರ ಪರಿಣಾಮವನ್ನು ಸೂಕ್ತವಾಗಿ ವಿಶೇಷವಾದ ರೂಪಕ ಬಳಸಿಕೊಂಡು ಅಭಿವ್ಯಕ್ತಿಸುತ್ತಿದೆ. ಬಹುಸಂಸ್ಕೃತಿಯನ್ನು ಒಳಗೊಂಡು ಸೌಹಾರ್ದತೆಯಿಂದ ಉಸಿರಾಡುವ ನೆಲದಲ್ಲಿ ಒಂದೇ ಸಂಸ್ಕೃತಿಯನ್ನು ತರುವ ಧೋರಣೆಗೆ ಧಿಕ್ಕಾರ ರೂಪವಾಗಿ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ಒಂದೊಂದು ಸಮುದಾಯದ ಸಾಂಸ್ಕೃತಿಕ ಅನನ್ಯತೆ ಇರುತ್ತದೆ. ಅದರದೇಯಾದ ಉಡುಪು, ಬದುಕಿನ ರೀತಿ ಇರುತ್ತದೆ. ಆದರೆ ಇನ್ನೊಬ್ಬರ ಸಾಂಸ್ಕೃತಿಕ ಉಡುಪನ್ನು ನಿರ್ಧರಿಸುವ, ತೀರ್ಮಾನಿಸುವ ಧೋರಣೆಗೆ ವಿರುದ್ಧವಾಗಿ ಕಾವ್ಯ ಅಭಿವ್ಯಕ್ತಿಸುತ್ತಿದೆ. ಪ್ರಸ್ತುತ ದಿನಮಾನದಲ್ಲಿ ಮುಸ್ಲಿಂ ಸಮುದಾಯದ

ಬುರ್ಖಾ ಪದ್ಧತಿಯನ್ನು ಪ್ರಶ್ನಿಸಿದ್ದು ಮತ್ತು ಗಲಾಟೆ ಮಾಡಿದ್ದ ಗೋರ ಅಮಾನವೀಯ ಘಟನೆ ಸಂವಿಧಾನಾತ್ಮಕ ಬದ್ಧವಾದ ಸಾಂಸ್ಕೃತಿಕ ಜೀವನ ನಡೆಸುವ ಹಕ್ಕು ಎಲ್ಲರಿಗೂ ಇದೆ. ಆದರೂ ಇದನ್ನು ತಮ್ಮ ಸ್ವ-ಇಚ್ಛಾಶಕ್ತಿಯಂತೆ ವರ್ತಿಸುವುದು ಮುಖ್ಯವಾದ ಸಂಗತಿ.

ಇಂಥ ಸಂಗತಿಯ ವಿರುದ್ಧವಾಗಿ ಧ್ವನಿ ಇತ್ತೀಚಿನ ಕಾವ್ಯ ಎತ್ತಿರುವುದು ವೈಚಾರಿಕ ಆಶಯವನ್ನು ಸಾರಿದಂತಿದೆ. ಸಂವಿಧಾನಾತ್ಮಕ ಆಶಯಗಳಿಗೆ ಅನುಸಾರವಾಗಿ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳಲು ಸರ್ವರಿಗೂ ಸ್ವಾತಂತ್ರ್ಯವಿದೆ. ಇದು ಜೀವಪರವಾದ ನಿಲುವು. ಸಮಾಜದಲ್ಲಿ ಶೋಷಣೆಯನ್ನು ಒಂದೇ ಮುಖದಲ್ಲಿ ನಡೆಯುವುದಿಲ್ಲ. ಅದು ಹಲವು ನೆಲೆಯಲ್ಲಿ ನಡೆಯುತ್ತಿರುತ್ತದೆ. ಒಂದು ಇನ್ನೊಂದಕ್ಕೆ ಪೂರಕವಾಗಿ ನಿಂತ ತನ್ನ ಇಚ್ಛಾಶಕ್ತಿಯನ್ನು ಮರೆಯುತ್ತಿರುತ್ತದೆ. ಇದನ್ನು ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸುತ್ತದೆ. ಎನ್.ಕೆ. ಹನುಮಂತಯ್ಯರವರ ಕವಿತೆಯನ್ನು ಗಮನಿಸುವುದಾದರೆ ಅವರ ಕಾವ್ಯದಲ್ಲಿ ವ್ಯಕ್ತವಾಗುವ ಗೋವು, ಏಕಕಾಲಕ್ಕೆ ಆರ್ಥಿಕತೆಯೂ ಹೌದು. ಸಾಂಸ್ಕೃತಿಕತೆಯೂ ಹೌದು. ಪರಂಪರೆಯುದ್ದಕ್ಕೂ ಪ್ರಭುತ್ವದೊಟ್ಟಿಗೆ ಹಿತರಕ್ಷಕ ಸಂಬಂಧವಿಟ್ಟುಕೊಂಡು ವೈದಿಕಶಾಹಿ ಗೋವನ್ನು ಯಾವತ್ತೂ ಚಲಾವಣೆಗಾಗಿ ಲಾಭ ತಂದು ಕೊಡಬಹುದಾದ ವಿಷಯವನ್ನಾಗಿಟ್ಟುಕೊಂಡು ಯಶಸ್ವಿಯಾಗಿದೆ. ಗೋಕೇಂದ್ರಿತ ರಾಜ ತಾಂತ್ರಿಕ ನಡೆಯುದ್ದಕ್ಕೂ ವೈದಿಕಶಾಹಿ ತನ್ನ ಆಕ್ರಮವನ್ನು ಸಾಂಸ್ಕೃತಿಕವಾಗಿಯೂ ಸಹ ನೋಡಬಹುದು. ಎನ್.ಕೆ. ಹನುಮಂತಯ್ಯರ ಕಾವ್ಯದಲ್ಲಿ ಸಾಂಸ್ಕೃತಿಕ ಸಂಘರ್ಷದ ಅಂಶಗಳಾಗಿ ಗೋವು ನೋಡಬಹುದು. 'ಗೋವು' ತಿನ್ನುವುದು ಒಂದು ಸಮುದಾಯದ ಸಾಂಸ್ಕೃತಿಕ ಹಕ್ಕು ಅದನ್ನು ನಿಷೇಧಿಸುವುದು ಶೋಷಣೆಯ ಪರಿಯಾಗಿದೆ. ಹಕ್ಕನ್ನು ದಮನ ಮಾಡುವ ಕೆಲಸವಾಗಿದೆ. ಒಂದು ಸಂಸ್ಕೃತಿಯನ್ನು ಮರೆಮಾಚುವರು ಹುನ್ನಾರು ಎಂಬಂತೆ ಸಮಕಾಲೀನ ಕಾವ್ಯದಲ್ಲಿ ವ್ಯಕ್ತಗೊಂಡಿದೆ.

ಸಮಕಾಲೀನ ಕಾವ್ಯದಲ್ಲಿ ಕಾಲದ ಚಲನೆಯ ತಿಳುವಳಿಕೆಗೆ ಕಾಲದ ಪರಿಕಲ್ಪನೆಗೆ ಸಂಬಂಧಿಸಿದ ಅಂಶಗಳನ್ನು ಅಭಿವ್ಯಕ್ತಿಸುವುದು ಕಂಡುಬಂದಿದೆ. ಈ ಸಮಕಾಲೀನ ಕಾವ್ಯ ದಿಢೀರನೆ ಹುಟ್ಟಿದಲ್ಲಿ ಇದಕ್ಕೂ ಪರಂಪರೆಯ ಪ್ರಭಾವ ಇದೆ. ಈ ಪರಂಪರೆಯ ಜ್ಞಾನವನ್ನು ತಕ್ಕಮಟ್ಟಿಗೆ ತನ್ನದಾಗಿಸಿಕೊಂಡು ಹೊಸ ನೆಲೆಯಲ್ಲಿ ಅಭಿವ್ಯಕ್ತಿಸುತ್ತಿರುವುದು ವಿಶಿಷ್ಟವಾಗಿದೆ. ಭಾಷಿಕ, ರೂಪಕ, ತಂತ್ರ ಆಶಯದ ಹಿನ್ನೆಲೆಯಲ್ಲಿ ಹೊಸತನ ಕಂಡುಕೊಂಡಿದೆ. ಈ ರೀತಿಯಾಗಿ ಸಮಾಜದಲ್ಲಿನ ಸಾಂಸ್ಕೃತಿಕ ತಾರತಮ್ಯತೆಯನ್ನು ಅಸಮಾನತೆ ಮತ್ತು ದಬ್ಬಾಳಿಕೆಯನ್ನು ಮೇಲ್ಕಾಣಿಸಿದ ಧಾಟಿಯಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿದೆ.

### ೩.೨. ಜಾತಿ ಮತ್ತು ವರ್ಗ ಸಂಘರ್ಷ

ಆಧುನಿಕ ಕನ್ನಡ ಕಾವ್ಯದ ಮುಂದುವರಿಕೆಯ ಭಾಗವಾದ ಸಮಕಾಲೀನ ಕನ್ನಡ ಕಾವ್ಯ ಹೊಸ ಆಶೋತ್ತರಗಳೊಂದಿಗೆ ಅಭಿವ್ಯಕ್ತಿಗೊಳ್ಳುತ್ತಿದೆ. ಹೀಗೆಂದ ಕೂಡಲೇ ದಿಢೀರನೆ ಹೊಸ

ಹೆಜ್ಜೆ ತುಳಿಯುತ್ತಿದೆ ಎಂದು ಅರ್ಥವಲ್ಲ. ಇದು ತನ್ನ ಪರಂಪರೆಯ ಪ್ರಭಾವ ಮತ್ತು ಪ್ರೇರಣೆಯೊಂದಿಗೆ ಅನುಸಂಧಾನ ಮಾಡಿಕೊಂಡು ಅದರಲ್ಲೇ ಬೇಕಾದದ್ದನ್ನು ಒಪ್ಪಿಕೊಂಡು ಬೇಡವಾದದನ್ನು ತಳ್ಳಿಹಾಕಿ ಹೊಸ ಸೃಷ್ಟಿಗೆ ಮುಂದಾಗಿರುವುದು ಕಾಣುತ್ತೇವೆ. ಅಭಿವ್ಯಕ್ತಿಕ್ರಮದಲ್ಲಿ, ರೂಪಕದಲ್ಲಿ, ಆಶಯದಲ್ಲಿ, ತಾತ್ವಿಕತೆಯಲ್ಲಿ ಹೊಸತನವೊಂದನ್ನು ಸೃಷ್ಟಿಸುವ ಹಂಬಲ ಸಮಕಾಲೀನ ಕನ್ನಡ ಕಾವ್ಯದಲ್ಲಿದೆ. ಪ್ರಸ್ತುತ ಜಾಗತೀಕರಣದ ಬದುಕಿಗೆ ಜಾತಿ ಮತ್ತು ವರ್ಗ ಇವರೆಡರ ಸಂಘರ್ಷ ಸಮಾಜದಲ್ಲಿ ಯಾವ ರೀತಿಯಾಗಿದೆ ಎಂಬುದನ್ನು ತನ್ನದೇ ಆದ ನೆಲೆಯಲ್ಲಿ ವ್ಯಕ್ತಪಡಿಸಿ ಅದರ ಕರಾಳ ಚಿತ್ರಣವನ್ನು ಮೂರ್ತಗೊಳಿಸುತ್ತಿರುವುದು ಕಾಣಬಹುದು.

ಇಂದಿನ ಸಮಕಾಲೀನ ಕನ್ನಡ ಕಾವ್ಯದಲ್ಲಿ ಬರೆಯುತ್ತಿರುವ ಅನೇಕ ಕವಿಗಳು ತಳಸಮುದಾಯದಿಂದ ಬಂದವರು ಸಮಾಜದ ಮುಖ್ಯವಾಹಿನಿಗೆ ಬದಂತಹ ಜಾತಿಗಳಿಂದ ಕಾವ್ಯ ಅಭಿವ್ಯಕ್ತಿಗೊಳ್ಳುತ್ತಿರುವುದು ಕಾಣುತ್ತೇವೆ. ಇಂತಹ ಸಂವೇದನೆಗಳ ಸಂವಿಧಾನದ ಆಶಯಗಳನ್ನು ಮುಂದಿಟ್ಟುಕೊಂಡು ತಮಗಾಗುವ ಅನ್ಯಾಯದ ವಿರುದ್ಧ ಧ್ವನಿ ಎತ್ತಿರುವುದು ಕಾಣುತ್ತೇವೆ. ಸಾಮಾಜಿಕ, ಶೈಕ್ಷಣಿಕ, ರಾಜಕೀಯವಾಗಿ, ಜಾತಿಯಿಂದ ಎದುರಾಗುವ ಶೋಷಣೆಯನ್ನು ಅಕ್ಷರ ರೂಪವಾಗಿಸುತ್ತಿರುವುದು ಕಂಡುಬಂದಿದೆ. ಈ ಜಾತಿಯ ಶೋಷಣೆಯನ್ನು ಎದುರಿಸುವ, ಅದನ್ನು ಹೊರಹಾಕುವ 'ಅಕ್ಷರ ಮಾಧ್ಯಮ' ಸಾಹಿತ್ಯ ಮಾಧ್ಯಮವನ್ನು ಅಸ್ಪೃಶ್ಯವಾಗಿಸಿಕೊಂಡು ತಮ್ಮ ನೋವನ್ನು ಹೊರಚೆಲ್ಲುವ ಹಾಗೂ ಅದರಿಂದ ಜಾಗೃತರನ್ನಾಗಿಸುವ, ಸಂವಿಧಾನದ ಆಶಯಗಳನ್ನು ಜೀವಂತವಾಗಿಸುವಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಜಾತಿಯಾಧಾರಿತ ಶೋಷಣೆ ಅಂಬೇಡ್ಕರ್, ಗಾಂಧಿ ಬಸವಣ್ಣರ ಚಿಂತನೆಯ ಪ್ರೇರಣೆಯಂತೆ ಇವರ ಚಿಂತನೆಯ ಫಲವಾಗಿ ಜಾಗೃತಕೊಂಡು ಇವರ ಸಿದ್ಧಾಂತಗಳನ್ನು ಮುಂದಿಟ್ಟುಕೊಂಡು ಕಾವ್ಯ ರಚಿಸುವುದು ಹಾಗೂ ಕಾವ್ಯದಲ್ಲಿ ಅವರ ಚಿಂತನೆಯನ್ನು ಅಭಿವ್ಯಕ್ತಿಗೊಳಿಸುತ್ತಿರುವುದು. ಒಂದು ಭಾಗವಾದರೆ, ಇನ್ನೊಂದು ಮಾರ್ಕ್ಸ್‌ವಾದ, ಲೋಹಿಯವಾದ, ಪೆರಿಯಾರ್ ಇನ್ನೂ ಮುಂತಾದ ಸಾಮಾಜಿಕ ಸುಧಾರಕರಾದ ಚಿಂತನೆಯನ್ನು ಉಸಿರಾಗಿಸಿಕೊಂಡು ಸಮಕಾಲೀನ ಸಂದರ್ಭದ ದುರಂತವನ್ನು ವ್ಯಕ್ತಪಡಿಸುತ್ತಿದ್ದಾರೆ ಹಾಗೂ ಇವರ ಚಿಂತನೆಯ ಮರುಚಿಂತನೆಗೆ ಹೊಸ ಸೃಷ್ಟಿಯನ್ನು ಸಮಕಾಲೀನ ಕನ್ನಡ ಕಾವ್ಯ ಮಾಡುತ್ತಿದೆ. ಈ ಸಂಘರ್ಷಕ್ಕೆ ಒಂದು ಬಗೆಯ ಚಳುವಳಿಯ ಪ್ರೇರಣೆ ಇದೆ. ಚಳುವಳಿ ಎಂದ ಕೂಡಲೆ ಬೀದಿಗಿಳಿದು ಧಿಕ್ಕಾರ ಕೂಗಿ ಹೋರಾಟ ಸಂಘಟನೆ ಕಟ್ಟಿಕೊಂಡು ಮಾಡುವ ಚಳಿಯಾಗಲ್ಲದಿದ್ದರೂ, ಸಂಕಟದ ಚಳುವಳಿ, ಓದಿನ ಚಳುವಳಿಯು ಪ್ರೇರಣೆಯಾಗಿರುವುದು ಕಂಡುಬಂದಿದೆ. ಪಂಪನಿಗಿದ್ದ ಪ್ರತಿಭಟನೆ ಶಕ್ತಿ. ಕುಮಾರವ್ಯಾಸನಿಗಿದ್ದ ಪ್ರತಿಭಟನಾ ಗುಣ. ರನ್ನನಿಗಿದ್ದ ಪ್ರತಿಭಟನಾ ಶಕ್ತಿ, ಅಲ್ಲಮನಿದ್ದ ಪ್ರತಿಭಟನಾಶಕ್ತಿ, ಪ್ರಭುತ್ವದ ವಿರುದ್ಧ ರಾಜಕೀಯಾ ಆಗದೆ ಸೈದ್ಧಾಂತಿಕವಾಗಿ ದೂರ ಇದ್ದ ಖಂಡಿಸುವುದನ್ನು ಮರೆತಿರಲಿಲ್ಲ. ಸಂಘರ್ಷದ ಗುಣ ಯಾವ ಚಳಿವಳಿಗೂ ಮಿಗಿಲಾದದ್ದು ಎಂದರೆ ತಪ್ಪಾಗದು. ಹೊಸ ಸಂದಿಗ್ಧ ಕಾಲವನ್ನು ಈ ಬದುಕಿನ ಚಿಂತನೆ, ನಡಾವಳಿ ಮತ್ತು ಜೀವನಕ್ರಿಯೆಯಲ್ಲಿ ಸಮಕಾಲೀನ

ಕಾವ್ಯ ರೂಪಿಸುತ್ತಿದೆ ಎನ್ನುವುದು ಮುಖ್ಯವಾದ ಅಂಶ. ಲೋಕ ಗ್ರಹಿಕೆಯನ್ನು ದೊಡ್ಡ ಸಂಕ್ರಮಣದ ಕಾಲವಾದ ಈ ಸಂದರ್ಭದಲ್ಲಿ ಅನೇಕ ಅಂಶಗಳನ್ನು ಮುಖಾಮುಖಿಯಾಗಿ ನಿಲ್ಲಿಸುತ್ತಿದೆ. ಇತ್ತೀಚಿನ ಕನ್ನಡ ಕಾವ್ಯ ಆಧುನಿಕತೆಯು ಲೋಕಜ್ಞಾನದ ಬಗೆಗಿನ ಕುತೂಹಲವನ್ನು ಹೊಸ ರೀತಿಯಲ್ಲಿ ನಿರ್ಮಾಣ ಮಾಡಲು ಪ್ರೇರೇಪಿಸಿತು. ಸಮಾಜದಲ್ಲಿ ನಡೆಯುತ್ತಿರುವ ಜಾತಿ ಅಸಮಾನತೆಯನ್ನು ಎಲ್.ಕೆ. ಹನುಮಂತಯ್ಯನವರು ಕಾವ್ಯದಲ್ಲಿ ವ್ಯಕ್ತಗೊಂಡ ಬಗೆ ಈ ರೀತಿಯಾಗಿದೆ.

ಭೂಗರ್ಭದಲಿ ಅವಿತು
ಕನಸ ಕಾಣಲೆ ಗೆಳೆಯ
ಬೋರು ಕೊರೆದು ಚೂರು ಮಾಡುವರು
ನೆಲದ ತಲೆಯ ಮೇಲೆ ಮಲಗಿ
ಮಳೆ ಬಿಸಿಲಿನಳೆಯಲೆ ಗೆಳೆಯ
ಸಿಡಿಮದ್ದನಿಟ್ಟು ಪುಡಿ ಮಾಡುವರು
ಪುಡಿಯಾದರೂ
ಬೆಳಕ ಕುಡಿಯೆಲೆ ಗೆಳೆಯ
ಮಹಲು ದೇಗುಲದ ತಳಪಾಯಕ್ಕೆ ಹೂತು
ನಕ್ಕ ಬಿಡುವರು[೫]

ಕವಿ ಇಲ್ಲಿ ಜಾತಿ ವ್ಯವಸ್ಥೆಯನ್ನು ತುಂಬಾ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಒಂದು ದಮನಿತ ಸಮುದಾಯದ ಜನರ ಸಂಕಟವನ್ನು ಹೃದಯ ಕಲಕುವಂತೆ ಅಭಿವ್ಯಕ್ತಿಸಿದ್ದಾರೆ. ಶತಶತಮಾನದಿಂದ ನೋವುಂಡ ಜನ ಸಮುದಾಯ ಕಲ್ಲಾಗಬಯಸುತ್ತಿದೆ. ಈ ಶೋಷಣೆಯವರಿಗೆ ಈ ಸಂಕಟದ ನೋವು ತಾಳಲಾರದೆ ಭೂಗರ್ಭದಲ್ಲಿ ಅವಿತುಕೊಳ್ಳಲು ಕನಸು ಕಾಣುತ್ತಾರೆ ಮತ್ತು ಕವಿಗೆ ಅವರು ಭೂಮಿಯನ್ನು ಸುಳಿ ತಮ್ಮನ್ನು ಚೂರು ಚೂರು ಮಾಡುತ್ತಾರೆ ಎಂಬ ಆತಂಕ ವ್ಯಕ್ತಪಡಿಸಿದ್ದಾರೆ. ಜೊತೆಗೆ ಭೂಮಿಯ ಮೇಲೆ ದೊಡ್ಡ ದೊಡ್ಡ ಕಲ್ಲಾಗಿ ಕೊಳತು ಬಿಡಲೆ ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಅಲ್ಲಿ ಸಮರ್ಥವಾಗಿ ಬಿಡದ ಈ ವ್ಯವಸ್ಥೆ ಸಿಡಿಮದ್ದು ಗುಂಡುಗಳನ್ನು ಇಟ್ಟ ಪುಡಿ ಪುಡಿ ಮಾಡಿ ಕೊಲ್ಲ ಬಯಸುತ್ತಾರೆ ಎಂದು ಆತಂಕದ ನುಡಿಯನ್ನು ನುಡಿಯುತ್ತಾರೆ. ಕೊನೆಗೆ ದೇವಾಲಯದ ಕೆಳಗೆ ತಳಪಾಯಕ್ಕೆ ಹೂತು ನಕ್ಕು ಬಿಡುತ್ತಾರೆ ಎನ್ನುವುದು ಇನ್ನೂ ಜಾತಿ ವ್ಯವಸ್ಥೆಯ ಭೀಕರ ಚಿತ್ರಣ ಇದಾಗಿದೆ. ಸಂವಿಧಾನ ಜಾರಿಯಾಗಿ ಸುಮಾರು ವರ್ಷಗಳಾದರೂ ಸಮಾನತೆ ಕಾಣದೆ ಇನ್ನು ದೇವಾಲಯಗಳಿಗೆ ಪ್ರವೇಶವಿರದವರ ಸಂಕೇತವಾಗಿ ಈ ಸಾಲುಗಳು ನಿಲ್ಲುತ್ತವೆ. ಸಾಮಾಜಿಕ ಶೋಷಣೆಗೆ ಹಲವು ಮುಖ ಎಂಬಂತೆ ಒಂದೊಂದು ವಿಲಕ್ಷಣ ಹುಡುಕಿ ಒಡೆದು ಬಿಡುತ್ತಾರೆ. ನೆತ್ತರೂ ಹೊರಚೆಲ್ಲುತ್ತಾರೆ ಎಂದು ಭಯದಿಂದ

ನುಡಿಯುತ್ತಾರೆ. ಇದು ಜಾತಿ ಸಂಘರ್ಷದ ಕರಾಳತೆಯನ್ನು ಚಿತ್ರಿಸುವ ಸಾಲುಗಳಾಗಿವೆ. ಶೈಕ್ಷಣಿಕ ಪ್ರಗತಿಯ ಒಂದು ಮಟ್ಟಗಾದರೂ ಸಾಧನೆಯ ಫಲಶೃತಿಯನ್ನು ಪಡೆದರೂ ಇನ್ನೂ ಸಾಮಾಜಿಕ ಶೋಷಣೆಯನ್ನು ತಳಸಮುದಾಯದ ಜಾತಿಗಳು ಅನುಭವಿಸುತ್ತಿರುವುದು ಕಂಡುಬಂದಿದೆ. ಈ ಜಾತೀಯತೆಯ ಕರಾಳತೆಯನ್ನು ಸಮಕಾಲೀನ ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸಿದೆ. ಇದಕ್ಕೆ ಪ್ರೇರಣಾ ರೂಪ ಪಡೆದಿದ್ದು, ೧೨ನೇ ಶತಮಾನದ ವಚನ ಚಳವಳಿ ಎಂದರ ತಪ್ಪಾಲಾರದು. ಅಲ್ಲಿನ ಸಾಮಾಜಿಕ ಕ್ರಾಂತಿಯ ಬೆಳಕನ್ನು ಇಂದಿನ ಸಮಕಾಲೀನ ಕಾವ್ಯದಲ್ಲಿ ಅಭಿವ್ಯಕ್ತಿಗೊಳ್ಳುತ್ತಿದೆ. ವಚನ ಚಳವಳಿಯ ಆಶಯಗಳು ಪ್ರತಿಫಲಿಸುತ್ತಿವೆ. ೧೨ನೇ ಶತಮಾನದಲ್ಲೇ ಸಮಾನತೆಯ ಧ್ವನಿ ವಾಹನ ಚಳುವಳಿ ಎತ್ತಿದರೂ ಇನ್ನೂ ಜೀವಂತವಾಗಿರುವ ಈ ಶೂದ್ರ ವ್ಯವಸ್ಥೆಯ ವಿರುದ್ಧ ಸಾಮರಸ್ಯದ ಧ್ವನಿ ಎತ್ತಿರುವುದು ಕಾಣಬಹುದು.

ಸಮಕಾಲೀನ ಸಾಹಿತ್ಯ ವರ್ತಮಾನ ಸಂದರ್ಭದಲ್ಲಿ ಸೃಷ್ಟಿಯಾಗುತ್ತಿರುವ ಕಾವ್ಯವನ್ನು ಗಮನಿಸಿದಾಗ ಅಭಿವ್ಯಕ್ತಿಯ ಹಲವು ಬಗೆಗಳನ್ನು ಹಾಗೂ ಖಚಿತ ಧೋರಣೆಗಳನ್ನು ಗುರುತಿಸಲು ಸಾಧ್ಯವಿದೆ. ಇದು ಕವಿತೆಯ ಆಶಯಗಳನ್ನು ಮುಂದಿಟ್ಟುಕೊಂಡು ನೋಡಬಹುದು. ಸಾಮಾಜಿಕ ಕಳಕಳಿ, ದಮನಿತ ಸಮುದಾಯದ ಧ್ವನಿಯಾಗಿ, ಮಹಿಳಾ ಅಸ್ಮಿತತೆ, ದೇಶಿ ರೂಪಕಗಳು ವಿಷಾದ ಹಾಗೂ ಪ್ರತಿರೋಧದ ಧೋರಣೆಯನ್ನು ಕಾಣಬಹುದಾಗಿದೆ. ಹಾಗೇ ಏಕಕೇಂದ್ರಿತವಲ್ಲದ ಕಾವ್ಯ ಇದಾಗಿದೆ. ಈ ಕಾವ್ಯಕ್ಕೆ ಬಹುಕೇಂದ್ರಿಯ ನೆಲೆ ಇರುವುದು ಕಂಡುಬಂದಿದೆ.

ಜಾತೀಯತೆಯ ಕರಾಳತೆಯನ್ನು ಚಿತ್ರಿಸುವ ಮತ್ತೊಂದು ಕವಿತೆಯಲಾರದ ಇನ್ನೂ ದಾಹವಾಗಿರುವುದಲ್ಲಿ ಈ ಕವಿತೆ ಲಕ್ಕೂರ ಆನಂದರ 'ಉರಿವ ಏಕಾಂದ ದೀಪ' ಎಂಬ ಸಂಕಲನದ ಕವಿತೆ.

ನೀನು ಮುಟ್ಟಿದರೆ ಸಾಕು
ಇಲ್ಲಿ ದಿನವೂ ಹರಿವ ನದಿಗಳು ಒಣಗಿ ಬಿಡುತ್ತವೆಯಂತೆ.
ನೀನು ತಾಕಿದ ಮಾತ್ರಕ್ಕೆ
ಹುಲುಸಾಗಿ ಬೆಳದು ನಿಂತ ಕಾಡುಗಳೂ
ಮರುಭೂಮಿಗಲಾಗಿಡುತ್ತವೆಯಂತೆ.[೬]

ಸಮಾಜದಲ್ಲಿ ಅಸ್ಪೃಶ್ಯತೆಯ ಚಿತ್ರಣವು ಹೇಳುವ ಕವಿತೆ ಇದಾಗಿದೆ. ಪ್ರಜಾಪ್ರಭುತ್ವದ ನಾಡಿನಲ್ಲಿ ಸರ್ವರೂ ಸಮಬಾಳನ್ನು ಹೊಂದಬೇಕಾದ ಹಕ್ಕಿನಲ್ಲಿಯೂ ಇಂತಹ ದಾರುಣ ಸ್ಥಿತಿಯು ಇರುವುದನ್ನು ಕವಿ ಹೇಳಿದ್ದಾರೆ. ದಲಿತ ಸಮುದಾಯದ ಜನರು ಸವರ್ಣೀಯರ ದೃಷ್ಟಿಯಲ್ಲಿ ಯಾವ ರೀತಿಯಾದ ಅಮಾನ್ಯತೆಯ ನೆಲೆಯಲ್ಲಿ ಇದ್ದಾರೆ. ಇವರನ್ನು ಮನುಷ್ಯರೆಂದು ಭಾವಿಸಿದ ಪಶುಗಳಂತೆ ಕಾಣುವ ಹಾಗೂ ಹಾಗೇ ನೋಡಿಕೊಳ್ಳುವ ಪರಿಯನ್ನು ಇಲ್ಲ ಅಭಿವ್ಯಕ್ತಗೊಂಡಿರುವುದು ಕಂಡುಬಂದಿದೆ. ದಲಿತರನ್ನು ಸ್ಪರ್ಶಿಸಿದರೆ ಇಲ್ಲಿ ದಿನವೂ ಹರಿವ

ನದಿಗಳು ಒಣಗಿ ಬಿಡುತ್ತವೆ ಎಂದು ಅವರನ್ನು ತಾಕಿದರೆ ಹುಲಸಾಗಿ ಬೆಳೆದು ನಿಂತ ಕಾಡುಗಳು ಮರುಭೂಮಿಯಾಗಿ ಬಿಡುತ್ತವೆಯಂತೆ ಎಂದು ವ್ಯಂಗ್ಯವಾಗಿ ಹೇಳುತ್ತಾರೆ. ಹಾಗೇ ಇಂಥ ಮನಸ್ಥಿತಿಯನ್ನು ಪ್ರಬಲ ಸಮುದಾಯದ ಜನರು ಹೊಂದಿರುತ್ತಾರೆ ಎಂಬುದು ಕವಿಯ ಆಶಯ. ಕುಡಿಯಲು ನೀರು ಕೇಳಿದರೆ ಅಪರಾಧವೆಂಬಂತೆ, ವಾಸಕ್ಕೆ ಮನೆ ಕೇಳಿದರೂ ಭಯೋತ್ಪಾದಕರಂತೆ. ಅಕ್ಷರ ಕಲಿತರೆ ಪಾಪವೆಂಬಂತೆ ಎನ್ನುವ ಸ್ವಭಾವವನ್ನು ಪ್ರಬಲ ಸಮುದಾಯ ದಲಿತರ ಮೇಲೆ ಹೊಂದಿದ್ದಾರೆ ಎಂದು ಹತಾಶೆಯದಿಂದ ಅಭಿವ್ಯಕ್ತಿಸಿದ್ದಾರೆ. ಈ ಅಮಾನುಷ ಜಾತಿ ವ್ಯವಸ್ಥೆಯು ಹೊಂದಿರುವ ಅಸಮಾನತೆ, ಶೋಷಣೆಯ ಯಾವ ರೀತಿಯಾಗಿ ಮಾನವೀಯತೆಗೆ ವಿರುದ್ಧವಾಗಿದೆ ಎಂಬುದನ್ನು ಸಮಕಾಲೀನ ಕನ್ನಡ ಕಾವ್ಯದಲ್ಲಿ ಕಾಣಬಹುದು. ಈ ಕರಾಳತೆಯ ಸಂಕಟವನ್ನು ಕೆಲವು ಕವಿಗಳು ಸ್ವತಃ ಅನುಭವದ ಅಭಿವ್ಯಕ್ತಿಯಾಗಿದೆ. ಜೊತೆಗೆ ಅಂಬೇಡ್ಕರ, ಗಾಂಧಿ, ಬುದ್ಧ, ಬಸವಣ್ಣ ಚಿಂತನೆಯ ಫಲಶೃತಿಯಿಂದ ಈ ಅಸಮಾನತೆಯನ್ನು ಖಂಡಿಸುವ ಅಪಮಾನವನ್ನು ಎದುರಿಸುವ ಧ್ವನಿ ಕಾವ್ಯದಲ್ಲಿದೆ.

ಸಮಕಾಲೀನ ಕನ್ನಡ ಕಾವ್ಯ ಭಾಷೆ ಬಳಕೆಯಲ್ಲಿ ವಿಶಿಷ್ಟ ಪ್ರಯೋಗವನ್ನು ಇಂದಿನ ಸಂದರ್ಭದಲ್ಲಿ ಮಾಡುತ್ತಿದೆ. ಕನ್ನಡ ಪದ ಬಳಕೆ ಹಾಗೂ ದೇಸಿತನದ ಹೊಸ ಹೊಸ ರೂಪಕಗಳನ್ನು ಸೃಷ್ಟಿ ಮಾಡುತ್ತಿದೆ ಹಾಗೂ ಸಹೃದಯ ಕಲ್ಪನೆಯ ಹಿನ್ನೆಲೆಯಲ್ಲಿ ಗುರುತಿಸುವ ಅಂಶಗಳನ್ನು ಕಾಣಬಹುದು. ಈ ಸಮಕಾಲೀನ ಕನ್ನಡ ಭಾಷೆ ಮತ್ತು ಅನುಭವ ಲೋಕವೊಂದು ಹೊಸದಾಗಿ ಸೃಷ್ಟಿಯಾಗಿ ಪ್ರತ್ಯೇಕವಾದ ನೀರಿನ ಕೊಳದಂತೆ ಎದ್ದು ಕಾಣುತ್ತದೆ. ಹೊಸ ಸಂವೇದನೆ, ರೂಪಕಗಳ ಮೂಲಕ ಜಾತಿ ಅಸಮಾನತೆಯನ್ನು ಹೊಸ ನೆಲೆಯಲ್ಲಿ ಅಭಿವ್ಯಕ್ತಪಡಿಸುತ್ತಿದೆ. ಇತ್ತೀಚಿನ ಕನ್ನಡ ಕಾವ್ಯ ಹಾಡುಗಳು ಮಾಯವಾಗುತ್ತಿವೆ ಎನ್ನುವ ಅಭಿಪ್ರಾಯದಲ್ಲಿ ಇದಕ್ಕೆ ವಿರುದ್ಧವಾಗಿ ಹಾಡುಗಳು ಮಾಯವಾಗುತ್ತಿಲ್ಲ. ಅವು ಇನ್ನೂ ಜೀವಂತವಾಗಿ ಎಂದು ಸಮಕಾಲೀನ ಕವಿ ರಮೇಶ ಆರೋಲಿಯವರು ಕಾವ್ಯ ರಚನೆ ಸಾಕ್ಷಿಯಾಗಿದೆ. ಇದು ಕಾವ್ಯ ಹಾಡುವ ಕಾವ್ಯವಾಗಿದೆ. ಓದುವ ಕಾವ್ಯವಾಗದೆ ಪದ ಕಟ್ಟಿಹಾಡುವ ಕಾವ್ಯ. ಜನಪದದ ಲಯಗಾರಿಕೆಗೆ ಒಗ್ಗಿಸಿಕೊಂಡು ಕಾವ್ಯ ರಚಿಸುವುದು ವಿಶೇಷವಾಗಿದೆ. ಈ ಹಾಡಿನಲ್ಲಿ ವ್ಯಕ್ತವಾಗುವ ಸಮಾಜ ಕಳಕಳಿ, ಸಮಾಜದ ಅಸಮಾನತೆ, ಶೋಷಣೆ, ಹಸಿವು, ಬಡತನ ಇನ್ನು ಮುಂತಾದ ಅಂಶಗಳನ್ನು ವ್ಯಕ್ತಪಡಿಸುವುದು ಕಂಡುಬಂದಿದೆ.

ಆ ಮಾರಿ ಈ ಮಾರಿ ಉಗಿ ಮಾರಿ
ಉಗಿದುಗಿದು ಅತ್ತು ಕೇಳ್ಯಾರೋ | ಕೈಮುಗಿದು
ಉಳಿಸಿಕೊಡು ಜೀವ ಎಂದಾರೋ |[2]

ದಿನನಿತ್ಯದ ಅನುಭವಗಳನ್ನು, ಸಂಕಟಗಳನ್ನು ಕಾವ್ಯಭಾಷೆಯಾಗಿ ಪರಿವರ್ತಿಸುವ ಇವರ ಕಾವ್ಯ ಕಾಯಕದ ವೈಶಿಷ್ಟ್ಯ ಹತ್ತು ಹಲವು ರೀತಿಯದ್ದು. ಮನುಷ್ಯನ ಆರೋಗ್ಯಕರ ಬದುಕಿಗೆ

ಬೇಕಾದದ್ದು ಏನೆಂದು ಬೇಕಾಗಿದೆ ಎಂದು ಕಂಡುಕೊಂಡು ಅದನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸುತ್ತಿರುವುದು ಸಮಕಾಲೀನ ಕನ್ನಡ ಕಾವ್ಯದ ವಿಶಿಷ್ಟತೆಯಾಗಿದೆ. ಸಮಕಾಲೀನ ಕವಿಗಳ ಲೋಕಾನುಭವವು ಒಂದು ಹೊಸ ಬಗೆಯದ್ದಾಗಿದೆ. ಇವರಿಗೆ ಎದುರಾಗಿರುವುದು ಆಧುನಿಕ ಬದುಕಿನ ಚಿತ್ರಣ, ತಂತ್ರಜ್ಞಾನದ ಜೀವನ, ಇಡೀ ಜಗತ್ತನ್ನು ಒಂದು ಮಾರುಕಟ್ಟೆಯಾಗಿ ಮಾಡುತ್ತಿರುವ ಜಾಗತೀಕರಣದ ಕಪಿಮುಷ್ಠಿಯ ಉಸಿರಾಟ. ಇವೆಲ್ಲವುಗಳ ಅನುಭವದಿಂದ ಹೊಸ ಬಗೆಯಲ್ಲಿ ಕಾವ್ಯ ಹೊರಹೊಮ್ಮುತ್ತಿದೆ. ರಮೇಶ ಅರೋಲಿಯವರ ಕವಿತೆಯ ಸಾಲಿನಲ್ಲಿ ಕೈಮುಗಿದು ಉಳಿಸಿಕೊಂಡು 'ಜೀವ' ಎಂಬ ಸಾಲು ಇಂದಿನ ಬದುಕಿನ ಸಂಕಟ ಜಾತೀಯತೆಯ ಅಸಮಾನತೆ ತಾಳಲಾರದೆ ಇದರಿಂದ ಬಿಡುಗಡೆ ಬಯಸಲು ಹತಾಶರಾಗಿ ಕೈಮುಗಿದು ಕೇಳುವುದನ್ನು ಅಭಿವ್ಯಕ್ತಿಸಿದ್ದಾರೆ. ಹೊಸ ಹೊಸ ಅನುಭವಗಳನ್ನು ಯಾತನೆಯ ಪುಟಗಳನ್ನು ತಮ್ಮ ಹೆಗಲ ಮೇಲೆ ಹೊತ್ತು ಕನ್ನಡ ಸಾಹಿತ್ಯ ಲೋಕವನ್ನು ಸಮೃದ್ಧವೂ ವೈವಿಧ್ಯಮಯವೂ ಮಾಡಬಲ್ಲ ಕಾವ್ಯವಾಗಿದೆ. ನೊಂದವರ ನೋವಿಗೆ ಹೊಸ ಪರಿಭಾಷೆಯನ್ನು ಬರೆಯಬಲ್ಲ ಹಾಗೂ ಬದುಕಿನ ಹೊಸ ಕನಸನ್ನು ಕಾಣಿಸಬಲ್ಲ. ಹೊಸ ಸಾಧ್ಯತೆಯನ್ನು ಹೇಳಬಲ್ಲ ಕಾವ್ಯವಾಗಿದೆ. ಜಾತೀಯತೆಯ ಸಂಕಟವನ್ನು ಯಥಾವತ್ತಾಗಿ ಅನುಭವಿಸದೆ ಅದರ ವಿರುದ್ಧ ಧ್ವನಿ ಎತ್ತಲು ಸ್ಫೂರ್ತಿಸುವ ಕಾವ್ಯ ಇದಾಗಿದೆ. ಸಂವಿಧಾನದ ಆಶಯಗಳ ನೆಲೆಯಲ್ಲಿ ಬದುಕನ್ನು ಕಾಣುವ ಬಯಕೆಯನ್ನು ಹೊಂದಿದೆ. "ಹೀಗೆ ಕನ್ನಡದ ಇತ್ತೀಚಿನ ಕಾವ್ಯ ಆಳದಲ್ಲಿ ರಾಜಕೀಯ ಸಿದ್ಧಾಂತಗಳ ಪ್ರೇರಣೆಯನ್ನು ಫಿಲಾಸಫಿಕಲ್ ಆದ ದರ್ಶನ ಪ್ರಜ್ಞೆಯನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ. ಕಾವ್ಯದ ಒಳಗಿನಿಂದ ಹೊರಗನ್ನು ಕಾಣುವ ಹಾಗೂ ಹೊರಗಣ ವಾಸ್ತವ್ಯದಿಂದ ಕಾವ್ಯವನ್ನು ಅರ್ಥೈಸಿಕೊಳ್ಳುವ ನೆಲೆಯಲ್ಲಿ ಈ ಕವಿತೆಗಳನ್ನು ಚರ್ಚಿಸಬಹುದು. ಇತ್ತೀಚಿನ ಕವಿಗಳು ಪರಂಪರೆಯೊಂದಿಗೆ, ವರ್ತಮಾನದೊಂದಿಗೆ ತಮ್ಮ ಕವಿತೆಗಳ ಮೂಲಕ ಮುಖಾಮುಖಿಯಾಗುತ್ತಾರೆ ತಣ್ಣನೆಯ ಬಂಡಕೋರರಾಗುತ್ತಾರೆ. ಮಾನವತಾವಾದಿ ನಿಲುವನ್ನು ತಾಳುತ್ತಾರೆ. ಒಟ್ಟಾರೆಯಾಗಿ ಮತೀಯ ಪ್ರಭುತ್ವಗಳನ್ನು ಪ್ರಶ್ನಿಸುತ್ತಾರೆ ಹಾಗೂ ಎದುರಿಸುತ್ತಿದ್ದಾರೆ".[೮]

ಪೀರಾಭಾಷಾ ಈ ಮಾತಿನ ಮೂಲಕ ಸಮಕಾಲೀನ ಕಾವ್ಯದ ಮಹತ್ವ ಹೇಳಿದಂತಿದೆ ಹಾಗೂ ಅದರ ಆಶಯದ ಧ್ವನಿ ಯಾವುದು ಎಂಬುದು ಈ ಮಾತಿನ ಮೂಲಕ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪೂರ್ವಕಾಲದಿಂದಲೂ ಬಂದಿರುವ ಸಾಂಪ್ರದಾಯಿಕ ಆಚರಣೆಯ ನೆಪದಲ್ಲಿ ಜಾತಿ ಪದ್ಧತಿಯನ್ನು ಯಾವ ರೀತಿಯಾಗಿ ಬದುಕನ್ನು ಹಿಂಡುತ್ತದೆ. ಮನುಷ್ಯತ್ವಕ್ಕೆ ವಿರುದ್ಧವಾಗಿದೆ ಎಂಬುದನ್ನು ಜೊತೆಗೆ ಅದರಿಂದ ಬಿಡುಗಡೆ ಹೊಂದುವ ಬಗೆಯನ್ನು ಕಾಣುತ್ತಿದೆ. ಕುವೆಂಪು, ಬೇಂದ್ರೆ ಮುಂತಾದ ಬರಹಗಳ ಚಿಂತನೆಯ ಫಲವಾಗಿ ಸಮುದಾಯ ಅನುಭವಿಸಿದ ಸಂಕಟದ ಫಲವಾಗಿ ಅದರಿಂದ ವಿಮುಖರಾಗುವ ಪ್ರಯತ್ನವಾಗಿದೆ. ಕರ್ಮಸಿದ್ಧಾಂತವನ್ನು ಮುಂದಿಟ್ಟುಕೊಂಡು ಅದರ ಮೂಲಕ ಮಾಡುತ್ತಿರುವ ಶೋಷಣೆಯನ್ನು ಕಾವ್ಯ ವಿರೋಧಿಸುತ್ತಿದೆ. ಅದರ

ಒಳಮುಖಗಳನ್ನು ಪರಿಚಯಿಸಿಕೊಡುವಲ್ಲಿ ಸಮಕಾಲೀನ ಕಾವ್ಯ ವಿಶಿಷ್ಟತೆಯನ್ನು ಹೊಂದಿದೆ. ಜೊತೆಗೆ ಜಾತಿ ಅಸ್ಮಿತತೆಯನ್ನು ಹೆಚ್ಚಿಸುತ್ತದೆ. ಶಿಕ್ಷಣದ ಪ್ರಭಾವದಿಂದಾಗಿ ಅಖಂಡತೆಯ ನೆಲೆಯಲ್ಲಿ ತನ್ನತನದ ಅಸ್ಮಿತತೆಯ ಜೀವಂತಿಕೆಯನ್ನು ಉಳಿಸಿಕೊಳ್ಳುವ ಬಗೆಯನ್ನು ಸಾರಿದೆ. ತನ್ನತನದ ಅಸ್ಮಿತೆಯ ಅಪಾಯಕಾರಿಯಾಗದಂತೆ ಎಚ್ಚರಿಕೆಯ ದಾರಿಗಳನ್ನು ಸಹ ಹೇಳಿದೆ. ಇದರೊಂದಿಗೆ ಸಂಕುಚಿತತೆಯ ಅಪಾಯವನ್ನು ಮೀರಿ ಅಖಂಡತೆಯ ಭಾವನೆ ಹೊಂದಬೇಕಾದ ಬಗೆಯನ್ನು ತಿಳಿಸುತ್ತಿದೆ. ಹಾಗೇ ವರ್ಣವ್ಯವಸ್ಥೆಯ ಅಪಾಯಕಾರಿ ನೆಲೆಯನ್ನು ಸಹ ಚಿತ್ರಿಸಿದೆ. ಇಂತಹ ಭಾವನೆಯಿಂದ ವಿಶ್ವಮಾನವತೆಯ ಸಂದೇಶಕ್ಕೆ ಪೆಟ್ಟು ಬೀಳುತ್ತದೆ ಎಂಬ ಆತಂಕದ ನುಡಿಯನ್ನು ಈ ಸಮಕಾಲೀನ ಕಾವ್ಯ ನುಡಿಯುತ್ತಿದೆ. ಈ ಜಾತಿ ವ್ಯವಸ್ಥೆ ವರ್ಣವ್ಯವಸ್ಥೆಯು ಮನುಷ್ಯತ್ವಕ್ಕೆ ವಿರುದ್ಧವಾದದರೂ ಇವುಗಳಿಂದಲೇ ಸಮಾಜದಲ್ಲಿ ಅಶಾಂತಿ, ಸಂಘರ್ಷ, ಗಲಭೆ, ಕೊಲೆ, ಅಪಾಯಕಾರಿ ಘಟನೆಗಳು ನಡೆಯುತ್ತಿವೆ. ಇದರಿಂದ ಮುಕ್ತರಾಗಿ ವಿಶ್ವಮಾನವತೆಯ ಬದುಕಿನ ಆಶಯವನ್ನು ವ್ಯಕ್ತಪಡಿಸುತ್ತಿದೆ. ಹಾಗೇ ಕೋಮುವಾದ, ಮೂಲಭೂತವಾದ, ಧರ್ಮೀಯವಾದಗಳಿಂದ ದೂರವಾಗಿ ಸೌಹಾರ್ದತೆಯ ಬದುಕನ್ನು ಕಾಣಬಯಸುವ ಆಶಯದಂತೆ ಕವಿ ಆರೀಫ್‌ರಾಜರ ಕವಿತೆಯ ಸಾಲಾದ ಜಂಗಮ ಫಕೀರನ ಜೋಳಿಗೆ ಎಂಬುದು ಈ ಕಾಲದ ದೊಡ್ಡ ರೂಪಕವಾಗಿ ಮನುಷ್ಯ ಬದುಕಬೇಕಾದ ಬಗೆಯನ್ನು ಒಂದು ವಾಕ್ಯದಲ್ಲಿ ಹೇಳಿರುವುದು ಈ ಸಮಕಾಲೀನ ಕಾವ್ಯ ವೈಶಿಷ್ಟವಾಗಿದೆ. ಜಂಗಮ ಮತ್ತು ಫಕೀರ ಹಾಗೂ ಮುಸ್ಲಿಂ ಸಮುದಾಯದ ಜನರ ಸಂಕರ ಬದುಕಿನ ಬಗೆಯನ್ನು ಹೇಳುತ್ತಿದೆ. ಇದು ಸೌಹಾರ್ದತೆಯನ್ನು ಎತ್ತಿಹಿಡಿಯುವ ಬಯಕೆ ಈ ಕಾವ್ಯದ್ದಾಗಿದೆ.

"ಕಾಯಕದ ಅನುಭವದ ಮೂಲಕ ಸಾಹಿತ್ಯಿಕ ನುಡಿಗಟ್ಟುಗಳನ್ನು ರೂಪಿಸಿದ ವಚನಕಾರರ ಪ್ರಯೋಗ ಆಧುನಿಕ ಕಾವ್ಯಗಳಲ್ಲಿ ಕಾಣಿಸಿಕೊಂಡಿದ್ದ ಅಪರೂಪವಾಗಿರುವಲ್ಲಿ ಕಾರ್ಪೆಂಟರ್‌ನ ಕವಿತೆಯಲ್ಲಿ ವೃತ್ತಿಪರಿಕರಗಳೆ ಪ್ರತಿಮೆಗಳಾಗಿರುವುದು ಗಮನಾರ್ಹವೆನಿಸುತ್ತದೆ. ಗ್ರಹಿಕೆಯ ಮೂಲಕ ಬಂದ ವೃತ್ತಿ ಪದಕೋಶ ಕನ್ನಡ ಕಾವ್ಯದಲ್ಲಿ ಸಾಕಷ್ಟು ಇರಬಹುದು. ಆದರೆ ಅನುಭವದ ಮೂಲಕ ಬಂದ ಪರಿಭಾಷೆ ಅಪರೂಪದ್ದೆಂದು ತೋರುತ್ತದೆ".[೯]

ವೃತ್ತಿಯಾಧಾರಿತ ಅನುಭವದ ಮೂಲಕ ಹೊಂದಿದ ಸಂವೇದನೆಯನ್ನು ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಶಕ್ತಿಯುತವಾಗಿ ಮೂಡಿಬಂದಿದೆ. ಅದರಂತೆ ಜಾತಿಯ ಅಪಮಾನಗಳನ್ನು ಅನುಭವಿಸಿ ಬಂದ ರೂಪಕಗಳು ಸಹ ಅಗ್ರಹಿಕೆಯ ಹೊಸ ನೆಲೆಯನ್ನು ನೀಡುತ್ತಿವೆ. ವೃತ್ತಿಯಾಧಾರಿತವಾಗಿ ಕಾರ್ಪೇಂಟರ್ ಪದ್ಯದಲ್ಲಿ ಬರುವ ರೂಪಕಗಳು ಕಾರ್ಪೇಂಟರ್ ವೃತ್ತಿಯಲ್ಲಿ ಬಳಸುವ ಸಾಧನಗಳಾಗಿವೆ. ಅವುಗಳನ್ನು ರೂಪಕವಾಗಿಸಿಕೊಂಡು ಕಾವ್ಯ ರಚಿಸುತ್ತಿರುವುದು ಕಂಡುಬಂದಿದೆ. ಉದಾಹರಣೆಗೆ ಉಳಿ, ಬಾಚಿ, ಕಟ್ಟಿಗೆ, ಮೊಳೆ, ಮರ, ಕೊರಡು ಇನ್ನೂ ಅನೇಕ ಪದಗಳನ್ನು ರೂಪಕವಾಗಿಸಿ ಕಾವ್ಯ ರಚನೆ ಮಾಡುತ್ತಿದ್ದಾರೆ. ಅದರಂತೆ ಜಾತಿಯ

ಅಪಮಾನಗಳನ್ನು ಅನುಭವಿಸಿದ ಮಡಿವಾಳ ಪದ್ಯದ ಸಾಲುಗಳು ದಿಗ್ಭ್ರಮೆಗೊಳಿಸುವ ಸಾಲುಗಳಾಗಿವೆ. ಅವರ ಮಡಿವಾಳ ಕಾಯಕತ್ತ ಪರಂಪರಗಾತವಾಗಿ ಅನುಭವಿಸಿದ ಯಾತನ, ಅಪಮಾನವನ್ನು ಹಿಡಿಯುವ ಅವರ 'ನೆಲದ ಕರುಣೆಯ ದನಿ' ಎಂಬ ಸಂಕಲನದಲ್ಲಿ ವ್ಯಕ್ತಗೊಂಡಿರುವುದು ಕಾಣುತ್ತೇವೆ. 'ಹಡದಿ ಹಾಸುವ ಅಗಸರ ಹಾಡು' ಎನ್ನುವುದು ಆ ಸಮುದಾಯದ ಸಂಕಟವನ್ನು ಸಮರ್ಥವಾಗಿ ಚಿತ್ರಿಸಿದಂತಿದೆ. ಇದು ಈ ಕಾಲದ ದೊಡ್ಡ ರೂಪಕವಾಗಿ ನಿಂತಿದೆ. ಇವರು ವೈಯಕ್ತಿಕ ನೆಲೆಯಲ್ಲಿ ಒಳಸಂಕಟಗಳನ್ನು ತನ್ನ ಸುತ್ತಲಿನ, ಶೋಷಣೆ, ಅವಮಾನ, ಸಮಾನತೆ ಅನ್ಯಾಯ ಇಂಥ ಸಾಮಾಜಿಕ ಕ್ರೌರ್ಯಗಳನ್ನು ವಸ್ತುವಾಗಿಸಿಕೊಂಡು ಪ್ರತಿರೋಧವನ್ನು ವ್ಯಕ್ತಪಡಿಸಿದ ಬಗೆ ವಿಶೇಷವಾಗಿದೆ. ಕವಿ ಇಲ್ಲಿ ತನ್ನ ಸಮುದಾಯದ ಸಾಂಸ್ಕೃತಿಕ  ವ್ಯಕ್ತಿಯನ್ನು ಕೊರಳಪಟ್ಟಿ ಹಿಡಿದು ಕೇಳುವ ಪ್ರಳಯ ಕಾಲವಿದು ಎಂದಿದ್ದಾರೆ. ಈ ಲೋಕದ ಮೈಲಿಗೆಯನ್ನು ತೊಳಕು ಹಸನು ಮಾಡುವ ಕಾಯಕವನ್ನು ಯಾಕೆ ಅಪಮಾನವಾಗಿ ಕಾಣುತ್ತಿದ್ದಾರೆ. ಅಷ್ಟೇ ಅಲ್ಲದೇ ತಾವು ಹಾಸಿದ ಹಾಸಿಯ ಮೇಲೆ ಮಲಗುವ ಈ ಜನ ನಮ್ಮನ್ಯಾಕೆ ದೂರ ಇಟ್ಟಿದ್ದಾರೆ. ತಾವೂ ಮನುಷ್ಯರೆಂದು ಭಾವಿಸದೆ ಉಸಿರ ಕೂಡ ತಾಕಲಾರದೆಂದು ನಂಬಿರುವ ಸಮುದಾಯಕ್ಕೂ ನಾವು ಸಿದ್ಧರಾಗಿದ್ದೇವೆ. ಯುದ್ಧ ಹೂಡಲು ನಿಮಗಾಗಿ ಹಡಿದ ಪಂಜು. ನಮಗಾಗಿ ಹಿಡಿಯುತ್ತಿದ್ದೇವೆ. ನಾವೇ ತೊಳೆದು ಬಿಳಿಬಟ್ಟೆಯನ್ನು ಬಿಳಿ ಬಾವುಟ ಮಾಡಿ ಸಮಾನತೆಗೆ ಹೋರಾಡುತ್ತೇವೆ. ಜಾತಿ ಅಸಮಾನತೆ ತೊಡೆದು ಹಾಕಲು ಒಡಲುರಿ ಬಾಲೆಯಾಗುವತನಕ ಈ ಹೋರಾಟ ನಿಲ್ಲುವುದಿಲ್ಲ ಎಂದು ಕೂಡಾ ಹೇಳುವುದು ಇವರ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಈ ರೀತಿಯಾಗಿ ಜಾತಿ ಸಂಘರ್ಷದ ಸ್ವರೂಪವನ್ನು ಇತ್ತೀಚಿನ ಕನ್ನಡ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿರುವುದು ವಿಶೇಷವಾಗಿದೆ ಹಾಗೂ  ವಸ್ತುನಿಷ್ಟವಾಗಿದೆ.

### ೩.೩. ಕೋಮು ಸಂಘರ್ಷದ ನೆಲೆ

ಸಮಕಾಲೀನ ಸಂದರ್ಭ ಜಾಗತೀಕರಣದ ಕರಾಳತೆಯಲ್ಲಿ ಬದುಕು ನರಳುತ್ತಿರುವ ಸಮಯ ಒಂದು ಬಗೆಯದ್ದಾರೆ. ಇನ್ನೊಂದು ಮತೀಯವಾದ ಅಮಲಿನಿಂದ 'ಕೋಮುವಾದದ ಕ್ರೂರತೆಗೆ ನರಳುತ್ತಿರುವ ಬದುಕನ್ನು ಸಹ ಇತ್ತೀಚಿನ ಕಾವ್ಯ ಹೇಳುತ್ತಿದೆ. ಅದರಿಂದಾಗುವ ಪರಿಣಾಮಗಳನ್ನು ಭಯಾನಕತೆಯನ್ನು ಧ್ವನಿಸುವುದರೊಂದಿಗೆ ಅದನ್ನು ವಿರೋಧಿಸಿ ಕೋಮು ಸಾಮರಸ್ಯದಿಂದ ಬದುಕಲು ಕರೆ ನೀಡುತ್ತಿದೆ. ಮೂಲಭೂತವಾದಿಗಳ ಮೌಢ್ಯದ ಮಿತಿಯನ್ನು ಹೇಳಿ ಅದರ ಅಪಾಯಕಾರಿ ಧೋರಣೆಯನ್ನು ಕಾವ್ಯಾಭಿವ್ಯಕ್ತಿಯಲ್ಲಿ ಅಭಿವ್ಯಕ್ತಿಸಿ ಸೌಹಾರ್ದತೆಯ ಕಾಲಕ್ಕೆ ಕಾಲವಾಗದೆ ಎಂದು ಧ್ವನಿಸುತ್ತಿದೆ. "ಕವಿತೆ ಎನ್ನುವುದು ಒಂಟಿ ಹಣತೆಯ ಹಾಗೆ ಬಿಡುಗಣ್ಣಲ್ಲಿ ಲೋಕ ಕಾಯುತ್ತಿದೆ"[೧೦] ಎನ್ನುವ ಭರವಸೆಯಲ್ಲಿ ಸಮಕಾಲೀನ ಕವಿಗಳು ಬರವಣಿಗೆಯಲ್ಲಿ ತೊಡಗಿರುವುದು ಕಂಡುಬಂದಿದೆ. ಈ ನೆಲದ ಸಂವೇದನೆಗೆ ಧ್ವನಿಯಾಗಿ ಅಸಂಖ್ಯಾ ಪ್ರತಿಭೆಗಳು ಮರುಚಿಂತನೆಗೆ ಒಡ್ಡುತ್ತಿರುವ ಕಾಲವಿದು. "ಸಮಕಾಲೀನ ಪ್ರಜ್ಞೆ ಈ ಕವಿತೆಗಳಲ್ಲಿ ಹಬೆಯಾಡುತ್ತಿದೆ.

ಅದು ಸಮುದಾಯದ ಚರಿತ್ರೆಯಾಗಿ, ಸ್ಮೃತಿಯಾಗಿ ಸಾಗುತ್ತಿದೆ. ತನ್ನ ಸುತ್ತಲ ಸಮುದಾಯದ ತಲ್ಲಣಗಳನ್ನು ದಾಖಲಿಸುವ ಜರೂರಿ ಕವಿಯಾದಾದಾಗ ಆತ ಕಾಲದ ಸಾಕ್ಷಿಯಾಗಬೇಕಾಗುತ್ತದೆ. ಇದೊಂದು ದುಗುಡ ಸ್ಥಿತಿ. ಕವಿತೆಗೆ ದುಗುಡ ನಿರಂತರ. ನೆಲದ ಕೂಡು ಬದುಕನ್ನು ಕೈಯಾರೆ ಕೆಡಿಸುತ್ತಿರುವುದರ ಬಗೆ ವ್ಯಥೆ ಇಲ್ಲಿನ ಕವಿತೆಗಳ ಕೇಂದ್ರ ಪ್ರಜ್ಞೆಯಾಗಿದೆ".[೧೧]

ಸಮಕಾಲೀನ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳನ್ನು ನೀರುಪಾಲು ಮಾಡಿ ಮೃಗತ್ವದ ಜೀವನ ನಡೆಸುತ್ತಿರುವ ಕಾಲಘಟ್ಟಕ್ಕೆ ಸಮಕಾಲೀನ ಕಾವ್ಯ ಸೌಹಾರ್ದತೆಯ ಆಶಯ ಮುಂದಿಟ್ಟಿದೆ. ಧರ್ಮ ಧರ್ಮದ ನಡುವೆ ನಡೆಯುತ್ತಿರುವ, ಸಮುದಾಯ ಸಮುದಾಯದ ಮಧ್ಯ ನಡೆಯುತ್ತಿರುವ ಜಗಳಗಳಿಗೆ ಧಾರ್ಮಿಕ ಅಂಧಕಾರತೆಗೆ ಧಿಕ್ಕಾರ ರೂಪವಾಗಿ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ಮನುಷ್ಯ ಬದುಕಬೇಕಾದ ಬಗೆ ಇದಲ್ಲ. ರಕ್ತಪಾತದ ಜೀವನ ಅಲ್ಲ. ಐಕ್ಯತೆಯ ಸಾಮರಸ್ಯ ಬದುಕನ್ನು ಹೊಂದುವುದು ಮನುಷ್ಯ ಧರ್ಮ ಎಂದು ಮನುಜಮತದ ವಿಶ್ವಪಥ ಎಂಬ ನೆಲೆಯಲ್ಲಿ ಜೀವಿಸಲು ಬಯಕೆ ಹೊಂದಿದೆ. ಇದಕ್ಕೆ ಸಾಕ್ಷಿ ಎಂಬಂತೆ ಕವಿ ಆರೀಫರಾಜರ ಕವಿತೆಯ ಸಾಲಾದ ಪ್ರೇಮ ಕಾಮದ ನನ್ನೆರಡು ಕಣ್ಣುಗಳು ಕಾಲವಾಗಿವೆ. ಜಂಗಮ ಫಕೀರನ ಜೋಳಿಗೆಗಾಗಿ ಸದ್ಯ ಕಾಲ ಸಂಕರ ಸಂಸ್ಕೃತಿಯ ಕಾಲವಾಗಬೇಕು ಎಂಬ ಆಯಾಮ ವ್ಯಕ್ತಪಡಿಸಿದ್ದಾರೆ.

ನಮಗೆ ನಮ್ಮದೇ ವಿಶಿಷ್ಟ ರಾಷ್ಟ್ರೀಯತೆಯ ಒಂದು ಪರಿಕಲ್ಪನೆಯನ್ನು ತನ್ಮೂಲಕ, ನಮಗೊಂದು ಅಸ್ಮಿತೆಯನ್ನು ಕಟ್ಟಿಕೊಡುವ ಯತ್ನ ಮಾಡಿದರು ಎಂದು ಶ್ರೀ ಫಣಿಕ್ಕರ್ ವ್ಯಾಖ್ಯಾನಿಸುತ್ತಾರೆ. ೧೯೪೭ರ ಹಿಂದಿನ ಸುಮಾರು ಒಂದು ಶತಮಾನದ ಕಾಲಮಾನದಲ್ಲಿ ಹಂತ ಹಂತವಾಗಿ ಇಂತಹ ಒಂದು ರಾಷ್ಟ್ರೀಯತೆಯ ಸ್ವರೂಪ ಗ್ರಹಿಕೆ ವಿಕಾಸವಾಗುತ್ತಾ ಬೆಳೆದು ಬಂದು ಅದು ಸ್ವಾತಂತ್ರ್ಯ ಹೋರಾಟಕ್ಕೆ ಸಮರ್ಥನೆ ನೀಡಿ, ಅದನ್ನು ಅರ್ಥವತ್ತಾಗಿಸುವ ಪರಿಕಲ್ಪನೆಯಾಗಿ ಸ್ತುತಗೊಳ್ಳುವ ಪರಿ ಈ ಪುಸ್ತಕದ ಚರ್ಚೆಯ ಕೇಂದ್ರ ವಿಷಯ.[೧೨]

ಕಾವ್ಯ ಕೇವಲ ಕಾವ್ಯವಾಗಿ ನಿಲ್ಲದೆ ಅದು ಬದುಕಿನ ಸೂಚಕವಾಗಿ ಉಳಿದು ಬೆಳೆಯುತ್ತಿರುವುದಾಗಿದೆ. ಅದರಂತೆ ಸಮಕಾಲೀನ ಕಾವ್ಯವೂ ಒಂದಾಗಿದೆ. ಹೊಸ ಹೊಸ ಪ್ರಯೋಗಗಳ ಮೂಲಕ, ಹೊಸ ಹೊಸ ಸಂವೇದನೆಯ ಮೂಲಕ ಜೀವಪರ ಕಾಳಜಿಯನ್ನು ಅಭಿವ್ಯಕ್ತಿಸುತ್ತಿದೆ. ಈ ಹಿಂದೆ ಇದ್ದ ಕೆಲವು ಸಿದ್ಧಾಂತಗಳನ್ನು, ತಾತ್ವಿಕ ಚಿಂತನೆಗಳನ್ನು ರಾಷ್ಟ್ರೀಯತೆಯ ಕಲ್ಪನೆಯನ್ನು ಯಥಾಪ್ರಕಾರ ಒಪ್ಪಿಕೊಳ್ಳದೇ ಹಾಗೆ ಸಂಪೂರ್ಣ ನಿರಾಕರಿಸದೆ ವಿಮರ್ಶಾ ನೆಲೆಯಲ್ಲಿ ತಮಗೆ ಬೇಕಾದ ರೀತಿಯಲ್ಲಿ ಪಡೆಯುತ್ತಿರುವುದು ಕಂಡುಬಂದಿದೆ. ಅದಂತೆ ಕೋಮು ಸಾಮರಸ್ಯವನ್ನು ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸುತ್ತಿದೆ. ಧರ್ಮ ಧರ್ಮದ ಮಧ್ಯ, ಜಾತಿ ಜಾತಿಯ ಮಧ್ಯೆ ಸಾಮರಸ್ಯದಿಂದ ಬದುಕಲು ಸಂದೇಶ ರೂಪವಾಗಿದೆ. ಕಾವ್ಯದ ಆಶಯದಲ್ಲಿ, ರೂಪಕದಲ್ಲಿ, ಶೀರ್ಷಿಕೆಯಲ್ಲಿ ಸಾಮರಸ್ಯ ಒಲವು ತುಂಬಿದೆ. ಪ್ರಸ್ತುತ ಸಂದರ್ಭದಲ್ಲಿ

ಜಾತಿ ಜಾತಿಗಳ, ಧರ್ಮ ಧರ್ಮಗಳ ಸಾಮುದಾಯಿಕ ನೆಲೆಯ ಸಮಾವೇಶ ಮಾಡುತ್ತ ಒಂದು ನಿರ್ಬಂಧಿತ ಚೌಕಟ್ಟನ್ನು ಹಾಕಿಕೊಳ್ಳುತ್ತಿವೆ. ಇದಕ್ಕೆ ಧಿಕ್ಕಾರ ರೂಪದಲ್ಲಿ ಸಮುದಾಯ ಒಗ್ಗೂಡುವಿಕೆಯಲ್ಲಿ ಸಾಂಸ್ಥಿಕವಾದ ಒಗ್ಗಟ್ಟನ್ನು ಸಾಮರಸ್ಯವನ್ನು ಹೊಂದಬೇಕೆಂಬ ಆಶಯ ಇತ್ತೀಚಿನ ಕಾವ್ಯದ ಆಶಯವಾಗಿದೆ. ಸಂವಿಧಾನದ ನೆಲೆಯಲ್ಲಿ ಸಣ್ಣ ಸಣ್ಣ ಸಮುದಾಯಗಳು ಸಂಘಟನಾತ್ಮಕ ಒಗ್ಗಟ್ಟಿನೊಂದಿಗೆ ಸಾಂಸ್ಥಿಕ ಕೂಡುವಿಕೆಯನ್ನು ಹೊಂದಬೇಕು ಎಂಬ ಸಂವೇದನೆಯನ್ನು ಹೊಂದಿರುವ ಕಾವ್ಯ ಇತ್ತೀಚಿನ ಕಾವ್ಯ ಒಂದು ಗಟ್ಟಿಯಾದ ರೂಪಕ ತನ್ನ ಸಮಕಾಲೀನ ಸಂದರ್ಭವನ್ನು ಅಭಿವ್ಯಕ್ತಿಸುತ್ತದೆ. ಜೊತೆಗೆ ತನ್ನ ಕಾಲದ ತುಡಿತವನ್ನು, ಆಶಯವನ್ನು ಹೊಂದಿರುತ್ತದೆ ಎನ್ನುವುದಕ್ಕೆ ಆರೀಫರಾಜರ ಕವಿತೆಯ ಒಂದು ಶೀರ್ಷಿಕೆಯಾದ 'ಜಂಗಮ ಫಕೀರನ ಜೋಳಿಗೆ' ಇಲ್ಲಿ ಎರಡು ಧರ್ಮಗಳ ಸಾಮರಸ್ಯದ ಸೂಚಕವಾಗಿದೆ. ಎರಡು ಧರ್ಮದ ಜನರನ್ನು ಸೌಹಾರ್ದ ನೆಲೆಯಲ್ಲಿ ಬೆಸೆಯುವ ಪರಿ ಕಾಣಬಹುದು. ಕವಿತೆ ಆಶಯದಲ್ಲಿ ಕೋಮು ಸಾಮರಸ್ಯದ ಸೌಹಾರ್ದತೆಯ ನೆರಳನ್ನು ಕಾಣಬಹುದು.

"ಮೇಲ್ನೋಟಕ್ಕೆ ಬೇರೆಯಾಗಿ ತೋರುವ ಸಾಂಸ್ಕೃತಿಕ ಲೋಕದ ಆಳದ, ಸಂಕರಶೀಲ ತತ್ವವನ್ನು ಪರಸ್ಪರ ಎದರುಬದುರಾಗಿಸುವ ಮೂಲಕ ಚಲನಶೀಲತೆಯನ್ನು ಪ್ರಕಟಿಸುತ್ತವೆ".[೧೩]

ಧರ್ಮ ಧರ್ಮದ ಮಧ್ಯೆ ಸಾಮರಸ್ಯ ಜೀವನ ಅಗತ್ಯ. ಸಂಕರಶೀಲ ತತ್ವ ಆಚರಿಸಲು ಹಾಗೇ ಅದನ್ನೇ ಬದುಕಿನ ಜೀವತತ್ವವಾಗಿಸಲು ಕಾವ್ಯ ನಿಂತಿದೆ.

> ಸಾಬರ ಹುಡುಗನ ಹಸಿರುಗಜಲಿಗೆ ಕೇಸರಿಹೂವು ಅರಳದೇ
> ಮತ ಧರ್ಮದ ಪಣತಿ ಅಡಿಯ ಸಮೂಹ ಸಣ್ಣ ದೈವಗಳೆದ್ದಿವೆ ನನ್ನ ನಿನ್ನ ನಡುವೆ
> ಹರಕು ಹಾಸಿಗೆಯ ಕೆಟ್ಟದಾಹಕೆ ಕೊಳಲು ಊದುವ ಹಾಗೆ ನಿನ್ನ ನೆನಪು
> ಅಮಾಸಿ ಚಂದ್ರನ ಹೆಣಕೆ ಲಾಲಿಹಾಡೋ ಭೂಮಿತಾಯಿಯಂತೆ
> ಲಕ್ಷ ನಕ್ಷತ್ರಗಳ ಹೊತ್ತ ನಾಕು ಕಾಲಿನ ಮಂಚವಾಗಿ ಚಿಮ್ಮನಳಿಗೆಯಲ್ಲಿ
> ಒತ್ತರಿಸಿಕೊಂಡು ಬರುತ್ತದೆ.[೧೪]

ಮನುಷ್ಯನ ಮೂಲಭೂತ ಬಯಕೆಗಳಾದ ಆಹಾರ, ವಸತಿ, ಬದುಕಿಗೆ ಯಾವುದೇ ಜಾತಿ, ಧರ್ಮ, ಸಮುದಾಯ ಅಡ್ಡಿಯಾಗದು. ಅದರಂತೆ ಸ್ನೇಹ, ಪ್ರೀತಿ, ಮಮತೆ, ವಾತ್ಸಲ್ಯ. ಇವು ಮನುಷ್ಯರ ಒಡನಾಡಿಗಳಾಗಿರುತ್ತವೆ. ಆದರೂ ಮನುಷ್ಯತ್ವ ಜಾತಿ, ಧರ್ಮದ ತಾರತಮ್ಯ ಬಯಸುವುದಿಲ್ಲ. ಅದನ್ನು ಮೀರಿ ಒಂದಾಗಲು ಬೆಸೆಯಲು ಬಯಸುತ್ತೇವೆ ಮತ್ತು ಅಲ್ಲಿ ತಮ್ಮ ಸಾರ್ಥಕತೆಯೂ ತಾತ್ವಿಕಸಾರ ಹೊಂದುತ್ತವೆ. ಮೇಲೆ ಹೇಳಿದ ಕವಿತೆಯ ಸಾಲಾದ 'ಸಾಬರ ಹುಡುಗನ ಹಸಿರು ಗಜಲ್‌ಗೆ ಕೇಸರಿಯ ಹೂ ಅರಳದೇ' ಎಂದು ಕವಿತೆ ಪ್ರಶ್ನಿಸುತ್ತದೆ. ಹೂ ಅರಳುವುದಕ್ಕೆ ಪ್ರೇಮ ಹುಟ್ಟುವುದಕ್ಕೆ ಯಾವ ಜಾತಿಯಾದರೇನು? ಅದು ಸಹಜವಾಗಿ ಮನುಷ್ಯ ಧರ್ಮದ ನೆಲೆಯಲ್ಲಿ ಅರಳಿ ಅರಳುತ್ತದೆ. ಆದರೆ ಅದನ್ನು ಕೆಲವು ಪುಟ್ಟ ಮನಸ್ಸುಗಳು ಮೂಲಭೂತವಾದಿಗಳು, ಕೋಮುವಾದಿಗಳು, ಸಾಮರಸ್ಯ ಬಯಸದೇ,

ಅರಳುವಿಕೆ ನಿರ್ಬಂಧವೇರಿ ಹೊಸದು ಹಾಕುತ್ತಾರೆ. ಮತಧರ್ಮದ ಮಧ್ಯೆ ಪ್ರೀತಿಯ ದೀಪ ಹಚ್ಚಿ ಅದರ ಬೆಳಕಲ್ಲೇ ಅಂತ್ಯವಾಗುತ್ತಾರೆ ಎಂಬ ಆಂತಕವನ್ನು ಕವಿತೆ ವ್ಯಕ್ತಪಡಿಸುತ್ತಿದೆ.

ಇತ್ತೀಚಿನ ಕನ್ನಡ ಕಾವ್ಯ ಕೇವಲ ಒಂದು ಕಾವ್ಯವಾಗಿ ಉಳಿಯದೆ ತನ್ನ ತನ್ನದೇ ಹುಡುಕಾಟ ಮತ್ತು ಆಶಯದ ಗಟ್ಟಿತನದ ಉಳಿವಿಗಾಗಿ ಹಂಬಲಿಸುತ್ತಿರುವುದು ಕಂಡುಬರುತ್ತಿದೆ. ಗಾಂಧೀಜಿ, ಅಂಬೇಡ್ಕರ್, ಬುದ್ಧ, ಬಸವರ ಅನೇಕ ಸಮಾಜ ಸುಧಾರಕರ ನಿಲುವುಗಳನ್ನು ತಾತ್ವಿಕವಾಗಿ ಒಪ್ಪಿಕೊಂಡು ತಾವು ನಂಬಿದ ಸಿದ್ಧಾಂತಗಳಿಗೆ ಮೇಳೈಸಿಕೊಂಡು ಹೊಸ ನೆಲೆಯಲ್ಲಿ ಅಭಿವ್ಯಕ್ತಿಸುತ್ತಿರುವುದು ಕಂಡುಬಂದಿದೆ. ಸಮಾನತೆಯಿಂದ ರಾಷ್ಟ್ರೀಯತೆಗೆ ನಿಜವಾದ ಅರ್ಥ ಪ್ರಾಪ್ತವಾಗುವಂತೆ ಹಂಬಲಿಸುತ್ತಿದೆ. ಜಾತಿ ವಿನಾಶವಾಗಬೇಕೆಂಬ ಆಶಯವುಳ್ಳ ಕವಿತೆಗಳು ಬಂದಿವೆ. ಅದರೊಂದಿಗೆ ಸಮುದಾಯದ ಸಾಂಸ್ಥಿಕ ಒಗ್ಗಟ್ಟನ್ನು ಬಯಸುವ ಕವಿತೆಗಳು ಸಹ ಬಂದಿವೆ. ಜಾತಿ, ವರ್ಣಭೇದ ನೀತಿಯನ್ನು ಖಂಡಿಸುವ ಹಾಗೆಯೇ ಬಡವರ ಬಗ್ಗೆ ಅಸಹಾಯಕರ ಬಗ್ಗೆ ತುಳಿತಕ್ಕೊಳಗಾದ ಸಮುದಾಯದ ಬಗ್ಗೆ ಸಹಾನುಭೂತಿಯಿದೆ. ಹಾಗೇ ಜಾಗತೀಕರಣದ ಪ್ರಕರತೆಗೆ ಬಲಿಯಾದ ಸಾಮಾಜಿಕ ಸಂಬಂಧಗಳ ನಾಶದ ಬಗ್ಗೆ ಸಿಟ್ಟು ಇದೆ. ಪ್ರೀತಿ, ಪ್ರೇಮ, ಸ್ನೇಹದ ಹಂಬಲತೆ ಇದೆ. ಮಹಿಳೆಯರ ಮೇಲಿನ ದೌರ್ಜನ್ಯ ವಿರುದ್ಧ ಹೋರಾಟದ ಧ್ವನಿ ಇದೆ. ಇಷ್ಟೆಲ್ಲ ಒಳಗೊಂಡು ಸಮಕಾಲೀನ ಕನ್ನಡ ಕಾವ್ಯ ಕೋಮು ಸಾಮರಸ್ಯಕ್ಕಾಗಿ ಹಂಬಲಿಸುವುದು ಕಂಡುಬಂದಿದೆ. ಇತ್ತೀಚಿನ ಕವಿತೆಗಳಲ್ಲಿ ಪ್ರೇಮದಷ್ಟೇ ಗಾಢವಾಗಿ ದಿಕ್ಕೆಟ್ಟ ವಿಶ್ವವನ್ನು ತೊರೆಯಲು ಬೇಕಾಗಿರುವ ಮಮತೆಯ ಮೂಲ ಸೆಲೆಯನ್ನು ಆರಾಧಿಸುವ ಬಗೆಯನ್ನು ಕಾಣಬಹುದು. ಗುರುತಿಸಬಹುದಾದ ಅನೇಕ ಅತ್ಯುತ್ತಮ ಕವಿತೆಗಳಲ್ಲಿ ಸಾಮರಸ್ಯಕ್ಕಾಗಿ ಹಂಬಲಿಸುವುದು ಕಂಡುಬರುತ್ತಿದೆ. ಧರ್ಮವನ್ನು ಮೀರಿದ ಜೀವಂತಿಕೆಯನ್ನು ಕವಿತೆ ಕೊಂಡು ಕೊಂಡಿರುವುದರಿಂದಲೇ ಜಂಗಮ ಫಕೀರರ ಜೋಳಿಗೆ, ಬಾಳೆಯಲ್ಲಿ ಬಿರಿಯಾನಿ. ಗೋಪುರ, ಮೀನಾರುಗಳ ರೂಪಕ ಹುಟ್ಟಿಕೊಂಡಿರುವುದು. ಇದಕ್ಕೆ ಧರ್ಮ ಗ್ರಂಥಗಳು ಯಾವತ್ತಿಗೂ ಜಗಳವಾಡಲಾರವು. ಅದರ ತಿಳಿವನ್ನು ಸರಿಯಾಗಿ ಅರಿಯದೆ ಮನುಷ್ಯ ಕೃತಕವಾಗಿ ವರ್ತಿಸಿ ಕೋಮುಗಲಭೆಗಳಿಗೆ ನಿಂತಿದ್ದಾನೆ. ಇದಕ್ಕೆ ಧಿಕ್ಕಾರ ರೂಪದಲ್ಲಿ ಇತ್ತೀಚಿನ ಕಾವ್ಯ ಅಭಿವ್ಯಕ್ತಗೊಳ್ಳುತ್ತದೆ. ಪ್ರೇಮವನ್ನು ಆರಾಧಿಸುವಷ್ಟೇ ತೀವ್ರವಾಗಿ ಧರ್ಮದ ಕಂದಾಚಾರಗಳನ್ನು ತಿರಸ್ಕರಿಸುವ ಹಲವು ಕವಿತೆಗಳನ್ನು ಕಾಣಬಹುದು. ಜೊತೆಗೆ ಧಾರ್ಮಿಕ ಸಾಮರಸ್ಯ, ಕೋಮುಸೌಹಾರ್ದತೆಗಾಗಿ ಹಂಬಲಿಸುವ ಕವಿತೆಗಳನ್ನು ಸಹ ಕಾಣಬಹುದು.

ಇತ್ತೀಚಿನ ಕನ್ನಡ ಕಾವ್ಯದ ವಿಶೇಷತೆಯೆಂದರೆ ಅನುಕರಣವಲ್ಲ, ಅನುಸರಣವಲ್ಲ. ಏನೋ ಒಂದು ಧೈರ್ಯದಿಂದ ಕೂಡಿದ ವಿಚಾರ. ಹೊಸ ನಿರ್ಮಾಣ, ಮರು ಹುಟ್ಟು ಆಳವಾದ ಸಮನ್ವಯತೆ. ಹಿರಿಯರು ಹೇಳಿದ ಮಾತು ಇರಲಿ. ನಾವೂ ವಿಚಾರ ಮಾಡೋಣ ತಿಳಿದುಕೊಳ್ಳೋಣ, ತಿಳಿದು ನಡೆಯೋಣ ಅನ್ನುವುದೇ ಇತ್ತೀಚಿನ ಕಾವ್ಯದ ಸ್ವರೂಪವಾಗಿದೆ. ಕಾವ್ಯವು ವಾಸ್ತವದ ಕ್ರೌರ್ಯ, ಹಿಂಸೆಗಳ ವಿರುದ್ಧ ಪ್ರೀತಿಯ ಆಧ್ಯಾತ್ಮವನ್ನು ಆವಾಹಿಸಿಕೊಳ್ಳುತ್ತಿದೆ.

ಕಾವ್ಯವು ತೀವ್ರ ಎಚ್ಚರ ಮತ್ತು ಜೀವಂತಿಕೆಯಿಂದ ರಚಿತಗೊಳ್ಳುತ್ತಿದೆ. ಸೋತ ಮನಸ್ಸುಗಳಿಗೆ ಜೀವ ತುಂಬುವ ಕೆಲಸ ಹಾಗೂ ಸತ್ತ ಮಾನವೀಯತೆಗೆ ಮತ್ತೆ ಚೈತನ್ಯದ ಹೊಸ ಬೆಳಕನ್ನು ತುಂಬುವ ಕೆಲಸ ಕಾವ್ಯದ ಮೂಲಕ ನಡೆಯುತ್ತಿದೆ. ಜೊತೆಗೆ ವೈಚಾರಿಕತೆಯ ಶೋಧವನ್ನು ಸಹ ಕಾಣಬಹುದು. ಇತ್ತೀಚಿನ ಕಾವ್ಯ ಅನೇಕ ಬಿಕ್ಕಟ್ಟು ಸಮಸ್ಯೆ ಸವಾಲುಗಳನ್ನು ಎದುರಿಸುತ್ತಲೇ ಸಾಂಪ್ರದಾಯಿಕ ಸಿದ್ಧ ಮಾದರಿಗಳನ್ನು ಮುರಿದು, ರೂಪಕ ಪ್ರತಿಮೆಗಳಲ್ಲಿ ಹೊಸ ಅಭಿವ್ಯಕ್ತಿಯ ಹಾದಿ ಕಂಡುಕೊಂಡಿದೆ. ಹತ್ತು ಹಲವು ಆಸಕ್ತಿಗಳನ್ನು ಹೊಂದಿರುವ ಹೊಸ ಅಭಿವ್ಯಕ್ತಿ ಸ್ವರೂಪಗಳನ್ನು ಕುತೂಹಲದಿಂದ ಹುಡುಕುವ ಇತ್ತೀಚಿನ ಕವಿಗಳ ಕವಿತೆಯ ಸಂವೇದನೆ ತೀವ್ರತರದ್ದು. ಜೊತೆಗೆ ಸಮಕಾಲೀನ ಬದುಕಿನ ಬಗ್ಗೆ ಒಂದು ತಲ್ಲಣ ಅವರಲ್ಲಿದೆ. ನವ ಬಂಡವಾಳಶಾಹಿ ಸಮಾಜದಲ್ಲಿ ಬದಲಾಗುತ್ತಿರುವ ಮೌಲ್ಯಗಳನ್ನು ಎಚ್ಚರಿಕೆಯಿಂದ ಪರಿಶೀಲಿಸುವ ಆದರೆ ಅದನ್ನು ಪೂರ್ಣಪ್ರಮಾಣದಲ್ಲಿ ತಿರಸ್ಕರಿಸುವ ಮನಸ್ಥಿತಿಯೂ ಅವರಲ್ಲಿದೆ. ಇತ್ತೀಚಿನ ಕಾವ್ಯದಲ್ಲಿ ವಾಚ್ಯತೆ ಒಂದು ಸಮಸ್ಯೆ ಆದರೂ ವರ್ತಮಾನದ ಬದುಕಿನ ಬಗ್ಗೆ ತಳಮಳಗಳಿರುವುದನ್ನು ಕಂಡುಕೊಳ್ಳುವ, ಅದಕ್ಕಾಗಿ ಪ್ರಾಮಾಣಿಕವಾಗಿ ಸ್ಪಂದಿಸುವ ಗುಣ ಇತ್ತೀಚಿನ ಕಾವ್ಯದಲ್ಲಿ ವ್ಯಕ್ತಗೊಂಡಿರುವುದು ಕಂಡುಬಂದಿದೆ. ದೇವರು ಮತ್ತು ಧರ್ಮಗಳ ಹೆಸರಲ್ಲಿ, ನಡೆಯುತ್ತಿರುವ ಕೋಮು ಗಲಭೆಗಳ ಇದಕ್ಕೆ ಪ್ರೇರೇಪಿಸುವಂತಹ ವ್ಯವಸ್ಥೆಗೆ ಧಿಕ್ಕಾರ ರೂಪದಲ್ಲಿ ಕಾವ್ಯ ತನ್ನ ಸಂವೇದನೆಯನ್ನು ಹೊರಚೆಲ್ಲುತ್ತಿದೆ. ಹಬ್ಬ-ಹರಿದಿನಗಳಲ್ಲಿ ನಡೆಯುವ ಸಣ್ಣ ಪುಟ್ಟ ಕಾರಣಗಳಿಗೆ ಇಡೀ ಸಮುದಾಯ ಧರ್ಮ ಧರ್ಮದ ಮಧ್ಯೆ ಕಲಹ ನಡೆದು ಸಾವಿಗೀಡಾಗುವ ಅಮಾಯಕ ಜೀವಗಳಿಗೆ ಕಣ್ಣೀರಿಡುತ್ತಿದೆ. ಇತ್ತೀಚಿನ ಕಾವ್ಯ ಅದಕ್ಕೆ ಪ್ರತಿಭಟನಾ ರೂಪದಲ್ಲಿ ಸಾಮರಸ್ಯದ ಕೂಗು ಕೂಗುತ್ತಿದೆ. ಐಕ್ಯತೆಯ ನುಡಿ ಆಕಾಶಕ್ಕೆ ಮುಟ್ಟುವ ರೀತಿಯಲ್ಲಿ ಇತ್ತೀಚಿನ ಕನ್ನಡ ಕಾವ್ಯ ಕೂಗುತ್ತಿದೆ.

> ನಾವು ಪ್ರೇಮಿಗಳಾಗೇ ಉಳಿದಿದ್ದೇವೆ
> ಒಂದು ಖುಷಿಯ ಸಂಗತಿಯೆಂದರೆ
> ಇವಳೀಗ ತಾಯಿಯಾಗಿದ್ದಾಳೆ.
> ಒಂದೇ ಒಂದು ಪ್ರಶ್ನೆ ಕೇಳಬೇಕೆನಿಸಿದೆ
> ಮಗನಾಗಿ ಹುಟ್ಟಿ ಬರಲೇ ಗೆಳತಿ
> ಅಥವಾ
> ನಿನ್ನ ಮಗಳ ಅಂಗೈಯಲಿ
> ನನ್ನವೆರಡು ಕಂಬನಿಗಳನು ಹಾರೆ ಬಿಡಲೇ?[೧೫]

ಈ ಮೇಲಿನ ಕವಿತೆಯು ವ್ಯಕ್ತಪಡಿಸುವ ಆಶಯ ಕೋಮ ಸೌಹಾರ್ದತೆಯ ದ್ಯೋತಕವಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಒಂದು ಅಲ್ಪಸಂಖ್ಯಾತ ಸಮುದಾಯವನ್ನು ಇನ್ನೊಂದು ಪ್ರಬಲ ಸಮುದಾಯ ಅವಮಾನದಿಂದ ಮೋಡದ ಗಳಿಗೆಯಲ್ಲಿ ಕವಿಯು ಪ್ರೀತಿಯ ಹಂಬಲದಿಂದ

ಮಮತೆಯ ಒಡಲಲ್ಲಿ. ಗೆಳತಿಯ ಒಡಲಲ್ಲಿ ಮತ್ತೆ ಮಗುವಾಗಿ ಹುಟ್ಟಿ ಬರುವ ಹಂಬಲ ವ್ಯಕ್ತಪಡಿಸಿರುವುದು ಹಾಗೂ ಭಾರತೀಯವಾಗಿ ಮತ್ತೆ ಹುಟ್ಟಬೇಕೆಂಬ ಬಯಕೆ ಹೊಂದಿರುವುದು ರಾಷ್ಟ್ರಪ್ರೇಮಕ್ಕೆ ಮನುಷ್ಯ ಪ್ರೇಮಕ್ಕಾಗಿ ಕೋಮು ಸೌಹಾರ್ದತೆಗೆ ಹಿಡಿದ ಕನ್ನಡಿಯಂತಿದೆ. ಧಾರ್ಮಿಕ ಮೂಲಭೂತವಾದ ಕಟ್ಟಪಾಡುಗಳ ವಿರುದ್ಧ ಕೋಮುವಾದದ ರಕ್ತಪಾತದ ವಿರುದ್ಧ ಸಾಮರಸ್ಯದ ಪ್ರೀತಿಗಳಾಗಿ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಪಂಪನ ಆಶಯದಂತೆ ಜೀವಪರ ಚಿಂತೆಗಾಗಿ ನಿರ್ಮಲ ಪ್ರೀತಿಗಾಗಿ ಸಾಮರಸ್ಯದ ಕನಸಿಗಾಗಿ ಹಂಬಲಿಸುತ್ತಿರುವುದು ವ್ಯಕ್ತಗೊಂಡಿದೆ. ಕವಿತೆ ಎನ್ನುವುದು ಒಂಟಿ ಹಣತೆಯ ಹಾಗಿ ಬಿಡುಗಣ್ಣನಲ್ಲಿ ಲೋಕ ಕಾಯುತ್ತದೆ ಎಂಬ ಭರವಸೆಯಲ್ಲಿ ಇಂದಿನ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ಏನೂ ಅರಿಯದ ಮುಗ್ಧ ಮನಸುಗಳ ಮೇಲೆ ಕೋಮುಭಾವನೆ ಬಿತ್ತಿ ಮನುಷ್ಯ ಮನುಷ್ಯರ ಮಧ್ಯೆ ಕಲಹಕ್ಕೆ ಹಚ್ಚಿ ಮೋಡುತ್ತಿರುವ ಮನಸ್ಸುಗಳ ವಿರುದ್ಧ ಆ ದಾರಿ ಮನುಷ್ಯ ಬದುಕಬೇಕಾದ ದಾರಿ ಅಲ್ಲ. ಮನುಷ್ಯ ಬದುಕಬೇಕಾದ ದಾರಿ ಬೇರೆ ಆಗಿದೆ. ಅದು ಐಕ್ಯತೆಯ ಸೌಹಾರ್ದತೆಯ, ಸಾಮರಸ್ಯದ ದಾರಿ ಎಂದು ಇಂದಿನ ಕಾವ್ಯ ಹೇಳುತ್ತಿದೆ. ಭಾರತದ ಮಾತೆಯ ಮಕ್ಕಳಾಗಿ ಹುಟ್ಟಿದ ಮಕ್ಕಳೆಲ್ಲವೂ ಒಂದೇ ತಾಯಿಯ ಮಕ್ಕಳಾಗಿ ಒಂದೇ ಎದೆ ಹಾಲ ಕುಡಿದ ಕುಡಿಗಳಾಗಿ ಬದುಕಲು ಬಾಳಲು ಕರೆ ನೀಡಿದಂತಿದೆ.

ಸಮಕಾಲೀನ ಪ್ರಜ್ಞೆಯು ಅದು ಸಮುದಾಯದ ಚರಿತ್ರೆಯಾಗಿ ಸ್ಮೃತಿಯಾಗಿ ಸಾಗುತ್ತದೆ. ತನ್ನ ಸುತ್ತಲಿನ ಸಮುದಾಯದ ತಲ್ಲಣಗಳನ್ನು ದಾಖಲಿಸುವ ಜವಾಬ್ದಾರಿಯನ್ನು ಸಮಕಾಲೀನ ಕಾವ್ಯ ಹೊತ್ತುಕೊಂಡಿದೆ. ನೆಲದ ಕೂಡ ಬದುಕನ್ನು ಕೈಯಾರೆ ಕೆಡಿಸುತ್ತಿರುವರ ಬಗ್ಗೆ ವ್ಯಥೆಯು ಕೆಲವು ಕವಿತೆಗಳ ಕೇಂದ್ರ ಪ್ರಜ್ಞೆಯಾಗಿದೆ. ಕೆಲವು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ, ಹಬ್ಬದ ಸಂದರ್ಭದಲ್ಲಿ ನಡೆಯುತ್ತಿರುವ ಗಲಭೆಗಳಿಗೆ ಕಾರಣವಾಗುವ ಕೆಲವು ಅಲ್ಪ ಮನಸ್ಸುಗಳು ತಂದೊಡ್ಡುವ ಅನೇಕ ಅಮಾಯಕ ಜೀವಗಳ ಹಾನಿಯಾಗುವ ಗಳಿಗೆಗೆ ಭಯಪಟ್ಟು ಅದರ ವಿರುದ್ಧ ಧ್ವನಿ ಎತ್ತಿ ಎಲ್ಲಾ ಜೀವಗಳು ಒಂದೇ ಎಂಬ ಆಯಾಮವನ್ನು ವ್ಯಕ್ತಪಡಿಸದೆ ಅಂತಹ ರಕ್ತಪಾತಕ್ಕೆ ಪ್ರತಿಭಟನೆ ಸ್ವರೂಪದಲ್ಲಿ ಸೌಹಾರ್ದತೆಯ ಮಂತ್ರ ಜಪಿಸುತ್ತಿದೆ. ಪಠ್ಯಪುಸ್ತಕದಲ್ಲಿ ಸರ್ವಧರ್ಮದ ಸಾರ ಒಂದೇ ಯಾವುದೇ ಅಂತರವಿಲ್ಲ. ಭಾರತ ದೇಶದಲ್ಲಿರುವ ಪ್ರತಿಯೊಬ್ಬ ಪ್ರಜ್ಞೆ ಸಮಾನತೆಯ ಹಕ್ಕು ಮತ್ತು ಕರ್ತವ್ಯಗಳಿಗೆ ಎಂಬ ಸಾಂವಿಧಾನಿಕ ಆಶಯದ ಮೇರಿಗೆ ಸಾಮರಸ್ಯದ ಕೂಗು ಕೂಗಿದೆ. ಇತ್ತೀಚಿನ ಕನ್ನಡ ಕಾವ್ಯ ಧಾರ್ಮಿಕ ಕಂದಕಗಳು ಮನಸ್ಸನ್ನು ಹಿಂಸಾತ್ಮಕ ಕೃತ್ಯಗಳಿಗೆ ಒಳಗಾಗುವ ಸರಿಯಾದ ಕೋಮುವಾದವನ್ನು ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸುತ್ತಿದೆ. ಕೋಮುವಾದದ ಕರಾಳ ಚಿತ್ರಣವನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ಚಿತ್ರಿಸುತ್ತಿದೆ. ಒಂದು ಅಲ್ಪಸಂಖ್ಯಾತ ಸಮುದಾಯಕ್ಕೆ ಮನೆ ಬಾಡಿಗೆ ಕೊಡದೆ ಇರುವಂತಹ ಅನುಮಾನದಿಂದ ನೋಡುವಂತಹ ಅವಮಾನಕಾರಿ ಸಂಗತಿಯನ್ನು ಕಾವ್ಯ ಅಭಿವ್ಯಕ್ತಿಸುತ್ತಿದೆ. ಕೋಮಗಲಭೆಯ ಘಟನೆ ಹಿಂಸಾತ್ಮಕ ಚಿತ್ರಣವನ್ನು ರಕ್ತಪಾತ ದಬ್ಬಾಳಿಕೆ, ಆಹಾರ ರಾಜಕಾರಣ, ಮುಕ್ತವಾಗಿ

ಮಾತಾಡದ ವ್ಯವಸ್ಥೆಯು ಬಂದೊದಗಿದ ಪರಿಯನ್ನು ಕಾವ್ಯ ಸೂಕ್ಷ್ಮ ನೆಲೆಯಲ್ಲಿ ಅಭಿವ್ಯಕ್ತಿಸಿದೆ. ಇದಕ್ಕೆ ಮಾತು ಅನ್ನುವ ರೀತಿಯಲ್ಲಿ ಧರ್ಮ ಧರ್ಮದ ಮಧ್ಯೆ ಜಾತಿ ಜಾತಿಯ ಅಲ್ಲ, ಮನಸುಗಳ ಮಧ್ಯೆ ಪ್ರೀತಿ ಪ್ರೇಮ, ನಂಬಿಕೆಯ ಸಾಮರಸ್ಯತೆಯ ಹಂಬಲವನ್ನು ಕಾಣಲು ಆ ತೆರೆಯುತ್ತದೆ. ಸಮಾಜದಲ್ಲಿ ಸೌಹಾರ್ದತೆಯು ನೆಲೆಯೂರಿಗಳು ಮನುಷ್ಯ ಜಾತಿ ಪ್ರಶ್ನೆ ಒಂದೇ ಎಂಬ ಮಾತು ಬಲಪಡಿಸುವಲ್ಲಿ ಕಾವ್ಯ ಸಾಗಿದೆ.

### ೩.೪. ಆಹಾರ ರಾಜಕಾರಣ

ನಮ್ಮ ಕನ್ನಡ ಕಾವ್ಯ ಪರಂಪರೆಯಲ್ಲಿ ಬಹಳ ದೊಡ್ಡ ಶಕ್ತಿಯನ್ನು ನಾವು ಅದರೊಳಗೆ ನೋಡಬಹುದು. ಅದು ಶಕ್ತಿ ಮತ್ತು ಸಮಾಜದೊಳಗಡೆ ಆಳವಾಗಿ ಬೇರುಗಳನ್ನು ಬಿತ್ತಿ ಸದಾ ಕೇಡನ್ನು ಪ್ರತಿಭಟಿಸುತ್ತಾ ಹೊಸ ಸಮಾಜದ ಅನ್ವೇಷಣೆಗಾಗಿ ತನ್ನದೇ ಆದ ಕಾವ್ಯ ಧರ್ಮವನ್ನು ಪ್ರಾಚೀನ ಕಾಲದಿಂದಲೂ ಕಂಡುಕೊಳ್ಳುತ್ತಾ ಹೊರಗಡೆ ಅದನ್ನು ಬಿತ್ತುತ್ತಾ ಸಾಗಿಕೊಂಡು ಬಂದ ದೊಡ್ಡ ಪರಂಪರೆ ಕನ್ನಡ ಕಾವ್ಯದ್ದು. ಕಾವ್ಯ ಮನಸ್ಸಿಗೆ ಹಿಡಿಯುವುದೇ ಆದರೆ ಅದು ಆನಂದದ ಮೂಲಕವೇ ಎಂಬುದು ನಿಜ. ಆದರೆ ಅದು ಸುಮ್ಮನೆ ಎಂಥದೋ ಒಂದು ಆನಂದವಲ್ಲ; ಬರಿ ಭಾವನೆಯ ಬೆರಗಿನಿಂದ, ಇಲ್ಲವೆ ಕಲ್ಪನೆಯ ಚಮತ್ಕಾರದಿಂದ ಉಂಟಾಗುವಂತಹದಲ್ಲ. ಸಂವೇದನಾ ಶಕ್ತಿಯಿಂದ ಶ್ರೀಮಂತವಾದ, ನೈಜವಾಗಿ ಅನುಭವಿಸುವಂಥ ಮನಸ್ಸಿಗೆ ಉಚಿತವಾದ ಆನಂದ. ಅದಕ್ಕೆ ಕವಿಯ ಅನುಭವ ತೀವ್ರತೆಯನ್ನು ಗಾಢತೆಯನ್ನು ಪಡೆದು ಕಲಾಭಿಜ್ಞತೆಯಲ್ಲಿ ಪುಟಗೊಂಡಿರುತ್ತದೆ. ಆನಂದದೊಂದಿಗೆ ಅರಿವನ್ನು ಬದುಕಿನ ದಾರಿಯನ್ನು ನೀಡುವಂತಹ ಕೆಲಸ ಕಾವ್ಯದ್ದಾಗಿದೆ. ಕವಿಗಳಿಗಿರುವ ಸಾಮಾಜಿಕ ದೃಷ್ಟಿಕೋನವು ಮೂಲಭೂತವಾಗಿ ಸಮುದಾಯದ ಕಾಲಕ್ರಮೇಣ ಬೆಳವಣಿಗೆಯ ಅಂಗವೇ ಹೊರತು ಕವಿಗಳು, ಸಾಹಿತಿಗಳ ವೈಯಕ್ತಿಕ ಆಯ್ಕೆಯದೇ ಸರ್ವಾಧಿಕಾರವಿರುವುದಿಲ್ಲ. ಒಂದು ಸಮುದಾಯದಲ್ಲಿ ಯಾರೂ ಸಾಹಿತಿಗಳಾಗಿರುತ್ತಾರೆ ಅಥವಾ ಇಲ್ಲ ಎನ್ನುವುದೂ ಸಾಮಾಜಿಕ ಅಂಶಗಳಿಂದಲೇ ತೀರ್ಮಾನವಾಗುತ್ತದೆ. ವೈಯಕ್ತಿಕ ಸಂವೇದನೆಗಳು ಇಡೀ ಸಮುದಾಯದ ಸಂವೇದನೆಗಾಗಿ ಅಭಿವ್ಯಕ್ತಿಗೊಳ್ಳುತ್ತವೆ. ಅದೇ ಕಾವ್ಯ ಶಕ್ತಿ 'ಸಾಮಾಜಿಕ ಸಂವೇದನೆಯು ಸಮುದಾಯದ ಕಾವ್ಯ, ಸಮುದಾಯದ ಧ್ವನಿಯಾಗಿ ರೂಪ ತಾಳುತ್ತದೆ'.

ಮನುಷ್ಯನ ಮೂಲಭೂತ ಅವಶ್ಯಕತೆಗಳಾದ ವಸತಿ, ಆಹಾರ, ನೀರು, ಗಾಳಿ ಇವುಗಳಲ್ಲಿ ಅವನ ಅಸ್ಮಿತೆಯ ಬದುಕು ಒಂದಾಗಿದೆ. ಇದರಲ್ಲಿ ಆಹಾರವು ಮುಖ್ಯವಾದ ಪಾತ್ರವಹಿಸುತ್ತದೆ. ಆಹಾರವನ್ನು ಮನುಷ್ಯ ಸಂಸ್ಕೃತಿಯನ್ನು ನಿರ್ಧರಿಸುವಂತಹ ದುಸ್ಥಿತಿಗೆ ಬಂದಿದ್ದೇವೆ. ಜಾತಿ, ಧರ್ಮ, ವರ್ಣಗಳ ಮೇಲೆ ಆಹಾರ ನಿರ್ಬಂಧಿತವಾಗಿದೆ. ಯಾವ ಒಬ್ಬ ವ್ಯಕ್ತಿ ತನಗೆ ಇಷ್ಟವಾದ ಆಹಾರ ತಿನ್ನಲು ಸ್ವತಂತ್ರವಿಲ್ಲ. ಇದು ಒಂದು ಪ್ರಬಲ ಸಂಸ್ಕೃತಿ ಆ ಸ್ವತಂತ್ರವನ್ನು ಕಸಿದುಕೊಂಡಿದೆ. ಜೊತೆಗೆ ಪ್ರಶ್ನಿಸುತ್ತಿದೆ. ಅಂತಹ ಸಮುದಾಯವನ್ನು ನೋಡುವ ಕ್ರಮ

ಬೇರೆಯಾಗಿದೆ. ಹಾಗೇ ಅನುಮಾನದಿಂದ ನೋಡುತ್ತಿದೆ. ನಮ್ಮ ನೆಲ ಬಹುಸಂಸ್ಕೃತಿಯ ನೆಲವಾಗಿದೆ. ಇಂತಹ ಬಹುಸಂಸ್ಕೃತಿಯ ನೆಲವನ್ನು ಏಕಸಂಸ್ಕೃತಿಯ ನೆಲವಾಗಿಸುವ ಹುನ್ನಾರವನ್ನೆ ಇತ್ತೀಚಿನ ಕಾವ್ಯ ಪ್ರಶ್ನಿಸುತ್ತಿದೆ. ಈ ಏಕಸಂಸ್ಕೃತಿ ನಾಡಾಗಿಸುವ ದುರಂತದಲ್ಲಿ ಅನೇಕ ಸಣ್ಣ ಸಣ್ಣ ಸಮುದಾಯದ ಸಂಸ್ಕೃತಿ, ಸ್ವತಂತ್ರ ಆಚರಣೆ, ಭಾಷೆ ಬದುಕು ಎಲ್ಲವೂ ನಾಶವಾಗುತ್ತವೆ. ಇದರ ಮೂಲಕ ಆ ಸಮುದಾಯವನ್ನು ಇಲ್ಲವಾಗಿಸುವ ವ್ಯವಸ್ಥೆಯು ಇಂದಿನ ಪ್ರಬಲ ಸಮುದಾಯದ ಕೆಲಸವಾಗಿದೆ. ಇಂತಹ ದುಸ್ಥಿತಿಗೆ ಪ್ರತಿಭಟನಾ ರೂಪದಲ್ಲಿ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ಸಮುದಾಯದ ಅನನ್ಯತೆ ಇದೆ. ಉಳಿವಿಗಾಗಿ ಕಾವ್ಯ ನಿಂತಿದೆ. ಇದಕ್ಕೆ ಸಂಬಂಧಿಸಿದ ಎನ್ಕೆ. ಹನುಮಂತಯ್ಯ ಅವರ ಕವಿತೆಯ ಸಾಲುಗಳನ್ನು ಗಮನಿಸುವುದಾದರೆ

ಅಸ್ಪೃಶ್ಯ
ಹೌದು; ನಾನು ಗೋವು ತಿನ್ನುತ್ತೇನೆ
ಗೋವು ತಿಂದು ಗೋವಿನಂತಾಗಿ
ರೋಮ ರೋಮಗಳಲ್ಲೂ ಕೆಚ್ಚಲನು ಹೊತ್ತು
ತಿರುಗುತ್ತೇನೆ
ಕಸದ ತೊಟ್ಟಿಯಲ್ಲಿ ಬಿದ್ದ ಕೂಸುಗಳಿಗೆ
ಹಾಲು ಕುಡಿಸುತ್ತೇವೆ.
ಅಸ್ಪೃಶ್ಯ
ಹೌದು; ನಾವು ಗೋವು ತಿಂದು
ಗೋವಿನಂತಾದವನು
ನೀವು ನೀಡುವ ಮೇವು ತಿಂದು
ನಿಮ್ಮಂಥ ಮನುಷ್ಯನಾಗೂರೊ
ಮನುಷ್ಯರನ್ನು ತಿನ್ನಲಾರೆ[೬]

ಒಂದು ಸಮುದಾಯಕ್ಕೆ ಇಂತಹದ್ದು ಉಡುಗೆಯನ್ನು ತೊಡಬೇಕು. ಇಂತಹದ್ದೇ ಆಹಾರ ತಿನ್ನಬೇಕು ಎಂದು ಹೇಳುವ ಈ ಆಹಾರ ರಾಜಕಾರಣಕ್ಕೆ ಮೇಲಿನ ಕವಿತೆಯ ಸಾಲು ತಕ್ಕದಾದ ಉತ್ತರ ನೀಡಿವೆ. ಗೋವು ತಿನ್ನುವುದು ಸಮುದಾಯದ ಸಾಂಸ್ಕೃತಿಕ ಆಹಾರ ಅದನ್ನು ನಿರ್ಬಂಧಿಸುವ ಸ್ವತಂತ್ರ ಬೇರೆಯವರಿಗೆ ಇಲ್ಲ. ಅಂತಹ ನಿರ್ಧಾರಕ್ಕೆ ಕವಿ ಧಿಕ್ಕಾರ ರೂಪವಾಗಿ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಗೋವು ತಿಂದು ನಾವು ಅಹಿಂಸಾವಾದದ ನೆಲೆಯಲ್ಲಿ ಗೋವಿನಂತಾಗುತ್ತೇವೆ. ಆದರೆ ಪ್ರಬಲ ಸಮುದಾಯದವರು ಹಿಂಸೆಯ ಮಾರ್ಗ ಹಿಡಿದು ಕ್ರೂರಿಗಾಗಿ ಅನೇಕ ಅಮಾಯಕರ ದಲಿತರ ಮೇಲೆ ತಳಸಮುದಾಯದ ಮೇಲೆ ದೌರ್ಜನ್ಯ ಮಾಡಿ ಮನುಷ್ಯ ಮನುಷ್ಯರನ್ನು ತಿನ್ನುವಂತಹ ಕೆಲಸ ಮಾಡಲಾರೆವು. ನಾವು ಕಸದ ತೊಟ್ಟಿಯಲ್ಲಿ ಬಿದ್ದ ಅನಾಥ ಕೂಸುಗಳಿಗೆ ಹಾಲು ಕುಡಿಸುತ್ತೇವೆ ಎನ್ನುವುದು ಅಂಥ

ಮಕ್ಕಳಿಗೆ ಬದುಕಿನ ಆಸರೆಯನ್ನು ನೀಡುತ್ತೇವೆ ಎನ್ನುವುದು ರೂಪಕ ಅರ್ಥಪೂರ್ಣವಾಗಿದೆ. ರೋಮ ರೋಮಗಳಲ್ಲಿ ಕೆಚ್ಚಲು ಹೆತ್ತ ತಿರುಗಿ ಮಮತೆಯ ಹಾಲು ಉಣಿಸುತ್ತೇವೆ ಎಂದು ಕಾವ್ಯ ಅಭಿವ್ಯಕ್ತಿಸುವುದು ಕಂಡುಬಂದಿದೆ. ಜಾಗತೀಕರಣ ಆರ್ಥಿಕ ಸಾಮ್ರಾಜ್ಯಶಾಹಿಗೆ ಭಾರತೀಯ ಕೋಮುವಾದ ವಾಹಕನೂ ಕಿರಿಯ ಪಾಲುದಾರರನ್ನು ಆಗಿ ಇವೆರಡು ಒಂದರ ಬಲದಿಂದ ಇನ್ನೊಂದು ಶಕ್ತಿ ಪಡೆದು ಜೋಡು ಆಕ್ರಮಣ ಮಾಡುತ್ತಿರುವ ಲೋಕದರ್ಶನ ಈ ಕಾಲದ ಕನ್ನಡ ಕಾವ್ಯದ ದರ್ಶನವನ್ನು ರೂಪಿಸುತ್ತದೆ. ಎನ್ಕೆ. ಹನುಮಂತಯ್ಯ ಅವರ ಕವಿತೆಯನ್ನು ಗಮನಿಸುವುದಾದರೆ ಗೋವು ಏಕಕಾಲಕ್ಕೆ ಆರ್ಥಿಕತೆಯೂ ಹೌದು. ಸಾಂಸ್ಕೃತಿಕತೆಯೂ ಹೌದು. ಪರಂಪರೆಯುದ್ದಕ್ಕೂ ಪ್ರಭುತ್ವದೊಟ್ಟಿಗೆ ಹಿತರಕ್ಷಣೆ ಸಂಬಂಧವಿಟ್ಟುಕೊಂಡ ವೈದಿಕಶಾಹಿ ಗೋವನ್ನು ಯಾವತ್ತು ಚಲಾವಣೆಯಾಗಿ ಲಾಭ ತಂದು ಕೊಡಬಹುದಾದ ವಿಷಯವನ್ನಾಗಿಟ್ಟುಕೊಂಡು ಯಶಸ್ವಿಯಾಗಿದೆ. ಶೂದ್ರ ಗೋವಿಗೆ ಮೇವು ತಿನ್ನುವ ಕರ್ತವ್ಯ ಬ್ರಾಹ್ಮಣ ಗೋವಿನ ಹಾಲು ಕುಡಿಯುವ ಹಕ್ಕನ್ನು ಪ್ರತಿಪಾದಿಸುವ ಸಿದ್ಧಾಂತ ಊಳಿಗಮಾನ್ಯ ವ್ಯವಸ್ಥೆಯಿಂದ ನವ ಬಂಡವಾಳಶಾಹಿ ಕಾಲಘಟ್ಟದವರೆಗೆ ರಾಜಕಾರಣ ಮತ್ತು ಪ್ರಭುತ್ವ ಹಿತಾಶಕ್ತಿ ಕಾಪಾಡಿದೆ. ವೈದಿಕಶಾಹಿ ಪ್ರಭುತ್ವ ಭಾರತದ ಚರಿತ್ರೆಯನ್ನು ಅರಿಯಲು ಗೋವು ಶಕ್ತಿಶಾಲಿ ರೂಪಕವಾಗುವುದೇ ಒಂದು ದರ್ಶನದ ಸ್ಥಿತಿ. ಹರಿಯಾಣದ ಜಜ್ಜಾರದಲ್ಲಿ ಆಕಳನ್ನು ಕೊಯ್ದು ತಿಂದರು ಎನ್ನುವ ಕಾರಣಕ್ಕೆ ಕಲ್ಲಿನಿಂದ ದಲಿತರನ್ನು ಹೊಡೆದರು. ಕರ್ನಾಟಕದ ಆದಿ ಉಡುಪಿಯಲ್ಲಿ ಇಬ್ಬರನ್ನು ಬೆತ್ತಲೆ ಮಾಡಿ ಬೀದಿಯಲ್ಲಿ ಥಳಿಸಿದ ದಲಿತರ ಜೀವಕ್ಕಿಂತ ಗೋವಿನ ಜೀವವೇ ಶ್ರೇಷ್ಠ ಎಂದು ಉಗ್ರ ಮನೋಧೋರಣೆಯ ಎಂದು ಅಮಾನವೀಯ ಕೃತ್ಯ. ಈ ಸಂದರ್ಭದಲ್ಲಿ ಪುಣ್ಯಕೋಟಿ ಎಂಬ ಗೋವಿನ ಕಾವ್ಯದ ಹಿಂದಿನ ಮೌಲ್ಯಗಳು ಮುಖಾಮುಖಿಯನ್ನು ನೆನಪಿಸಿಕೊಳ್ಳಬೇಕು. ಆಹಾರ ರಾಜಕಾರಣದ ಹುನ್ನಾರು ಅರಿಯಬೇಕು. ಇಂತಹ ತಿಳುವಳಿಕೆಯ ಇತ್ತೀಚಿನ ಕನ್ನಡ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವುದು ಕಂಡುಬಂದಿದೆ.

ಯಾವ ಕಾಲದಲ್ಲೇ ಆಗಲಿ ರಾಜಕೀಯ, ಸಾಂಸ್ಕೃತಿಕ ಯಾನ ಕ್ಷೇತ್ರವೇ ಆದರೂ ಪ್ರಭುತ್ವ ಬಯಸುವುದು ಏಕರೂಪವನ್ನು. ಇದು ಒಂದು ರೀತಿಯ ಸ್ಥಿರತೆಯನ್ನು ತಂದು ಕೊಡುವುದರಿಂದ ಅಧಿಕಾರ ಕೇಂದ್ರಿತ ಮನಸ್ಸುಗಳು ಬಹುಮುಖಿ ರೂಪಗಳನ್ನು ನಿರಾಕರಿಸುತ್ತವೆ. ಇದು ಬಹುಸಂಸ್ಕೃತಿಯ ನೆಲೆಗಳನ್ನು ನಾಶ ಮಾಡಿ ಏಕರೂಪದ ಅಧಿಪತ್ಯದ ಸಾರ್ವಭೌಮವನ್ನು ಸಾಧಿಸಲು ಪ್ರಯತ್ನಿಸುತ್ತವೆ. ಇದರಂತೆ ಆಹಾರ ಪದ್ಧತಿಯೂ ಒಂದಾಗಿ ಅವರವರ ಇಚ್ಛೆಯಂತೆ ಆಹಾರ ಸೇವನೆ ಅವರವರ ಹಕ್ಕಾಗಿದೆ. ಇದನ್ನು ಪ್ರಭುತ್ವ ಮನ್ನಣೆ ಮಾಡದೆ ಅವರ ಹಕ್ಕನ್ನು ಭಂಗಗೊಳಿಸಿ ಏಕರೂಪದ ಆಹಾರ ಪದ್ಧತಿಯನ್ನು ನಿರ್ಧರಿಸುತ್ತದೆ. ಈ ಮೂಲಕ ಬಹುಸಂಸ್ಕೃತಿಯನ್ನು, ಹತ್ತಿಕ್ಕುವ ಬಗೆಯಾಗಿದೆ. ಇದಕ್ಕೆ ಪ್ರತಿಭಟನ ರೂಪದಲ್ಲಿ ಪರ್ಯಾಯ ಸಂಸ್ಕೃತಿಯ ಮಹತ್ವವನ್ನು ಬಹುಸಂಸ್ಕೃತಿಯ ಮಹತ್ವ ಸ್ಥಾಪಿಸುವ ಪ್ರಯತ್ನ ಇತ್ತೀಚಿನ ಸಮಕಾಲೀನ

ಹೊಸ ತಲೆಮಾರಿನ ಕನ್ನಡ ಕಾವ್ಯದ್ದಾಗಿದೆ. ಸೃಜನಶೀಲ ಪ್ರತಿಭೆ ಎಂದಿಗೂ ಪರಂಪರೆ ಮತ್ತು ಸಂಪ್ರದಾಯ ವಿಧಿಸುವ ನಿಯಮ ನಿರ್ಬಂಧಗಳನ್ನು ಕಣ್ಣಮುಚ್ಚಿ ಸ್ವೀಕರಿಸುವುದಿಲ್ಲ. ಇಡೀ ಪರಂಪರೆ ಅರ್ಥಹೀನ ನೀರಸ, ಬರಡು ಎಂದೆನಿಸಿದಾಗ ತೀರಾ ಶಾಕ್ ಎನಿಸುವ ರೀತಿಯಲ್ಲಿ ಪ್ರತಿಭಟಿಸಿ ಅದನ್ನು ಸಂಪೂರ್ಣವಾಗಿ ಮುರಿದು ಒಂದು ಹೊಸ ಚಿಂತನೆಯ ತತ್ವದ ಹಿನ್ನೆಲೆಯಲ್ಲಿ ಮತ್ತೊಂದು ಆಯಾಮಕ್ಕೆ ಅವಕಾಶ ಕಲ್ಪಿಸುತ್ತದೆ. ಇದರಂತೆ ಕವಿ ಆರಿಫ್‌ರಾಜಾರ ಕವಿತೆಯ ಸಾಲುಗಳನ್ನು ಗಮನಿಸಿದಾಗ;

ನಮಗೆ ಮನೆ ಕೊಡುವುದಿಲ್ಲವಂತೆ
ನಗರದಲ್ಲಿ ನಮಗೆ ಬೀಡಾಗಿ ಮನೆ ಸಿಗುವುದಿಲ್ಲನಂತೆ
ಏಕೆಂದರೆ ನಾವು
ಗಡ್ಡ ಬಿಟ್ಟಿರುತ್ತೇವೆ. ದನದ ಮಾಂಸ ತಿನ್ನುತ್ತಿರುತ್ತೇವೆ.
ಕರ್ಪ್ಯೂಹೇರಿದಂತಿರುವ ತುರ್ತುಪರಿಸ್ಥಿತಿಯ ನಡಾವಳಿಗಳು
ನಮ್ಮನ್ನು ಅನುಮಾನದಿಂದ ಕಾಣುತ್ತವೆ.
ಕ್ರೀಡೆಗಳಲ್ಲಿ ಸೇನೆಗಳಲ್ಲಿ ಸೌಹಾರ್ದ ಸಂಬಂಧಗಳಲ್ಲಪಿ
ಭಯೋತ್ಪಾದಕರಲ್ಲೂ
ಗುಲಾಮಿ ಸಂತತಿಯ ಕಪ್ಪ ಅಕ್ಷಗಳು ನಾವು
ಗೋಡೆಗಳ ಮೇಲೆ ಬರಹಗಳನ್ನು ಬರೆಯುತಿವು[೨]

ಪ್ರತಿಯೊಂದು ಸಮುದಾಯವು ತನ್ನ ಸಾಂಸ್ಕೃತಿಕ ಘನತೆಯನ್ನು ಹೊಂದಿರುತ್ತದೆ. ಜೊತೆಗೆ ಆಹಾರ ಪದ್ಧತಿಯೂ ಕೂಡ. ಅದರಂತೆ ಉಡುಗೆ ತೊಡಿಗೆಯು ಆಗಿದೆ. ಆದರೆ ಪ್ರಭುತ್ವ ಈ ಆಹಾರ ಪದ್ಧತಿಯನ್ನೇ ನೆಪ ಮಾಡಿಕೊಂಡು ಒಂದು ಸಮುದಾಯವನ್ನು ಅನುಮಾನ ಸ್ಥಿತಿಯಲ್ಲಿ ನೋಡಿ ಅವರ ಆಹಾರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ವ್ಯವಸ್ಥೆಯನ್ನು ಪ್ರಶ್ನಿಸುವ ರೀತಿಯಲ್ಲಿ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ದನದ ಮಾಂಸ ತಿನ್ನುವುದು ಅಪವಾದ ಎಂಬ ಭಾವನೆಯನ್ನು ತಾಳಿ ಅಂತಹ ಸಮುದಾಯಗಳನ್ನು ಆ ಸಮುದಾಯದ ಜನರನ್ನು ಮನುಷ್ಯರೆಂದು ಭಾವಿಸದೆ ಶಿಕ್ಷಿಸುವುದು ಪ್ರಭುತ್ವದ ಕಾರ್ಯವಾಗಿದೆ. ನಗರದಲ್ಲಿ ಮನೆಗಳನ್ನು ಬಾಡಿಗೆ ಕೊಡುವುದಿಲ್ಲ. ಗಡ್ಡ ಬಿಡುವುದಕ್ಕಾಗಿ ದನದ ಮಾಂಸ ತಿನ್ನುವುದಕ್ಕಾಗಿ ಎಂದು ಕವಿ ತಮ್ಮ ಹತಾಶೆಯನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಇದು ಆಹಾರ ರಾಜಕಾರಣ ತಂದೊಡ್ಡಿದ ಅಪಾಯವಾಗಿದೆ. ಮನುಷ್ಯ ಮನುಷ್ಯರ ಮಧ್ಯೆ ಇಂತಹ ಬಿರುಕುಗಳು ವೈರುಧ್ಯಗಳು ಹುಟ್ಟಿಕೊಂಡರೆ ಸೌಹಾರ್ದತೆಯ ಆಶಯದಲ್ಲಿ ಬಹು ಸಂಸ್ಕೃತಿಯ ತಾತ್ವಿಕತೆ ಕಾಣಲು ಹೇಗೆ ಸಾಧ್ಯ. ಅದಕ್ಕಾಗಿ ಈ ಕವಿತೆಯ ಕೊನೆಯ ಸಾಲುಗಳಲ್ಲಿ ಕವಿ ತುಂಬಾ ಆಶಾದಾಯಕ ನುಡಿಯನ್ನು ನುಡಿದಿದ್ದಾರೆ. ಹಣೆ ಬರಹ ಬದಲಾಯಿಸುತ್ತೇವೆ. ಇಂತಹ ಕ್ರೂರ ವ್ಯವಸ್ಥೆ ನಾಶಗೊಳಿಸುತ್ತೇವೆ. ಅಕ್ಕರೆಯ ಹುಡುಗರು ವ್ಯವಸ್ಥೆಯ ಹುಣ್ಣುಗಳನ್ನು ವರೆಸಿ ಹಾಕುತ್ತೇವೆ. ಮನುಷ್ಯತ್ವದ ಹಾಡು ಹಾಡುತ್ತೇವೆ. ಪ್ರೀತಿ,

ಮಮಕಾರ, ಸ್ವಾತಂತ್ರ್ಯ ಸಹೋದರತ್ವದ ನೆಲೆಯಲ್ಲಿ ಬದುಕಲು ಕರೆ ಕೊಡುತ್ತೇವೆ. ಹಾಗೇ ಬದುಕುತ್ತೇವೆ ಎಂಬ ಆಶಾದಾಯಕ ನುಡಿಯನ್ನು ನುಡಿದಿದ್ದಾರೆ.

ಯಾವ ಒಬ್ಬ ವ್ಯಕ್ತಿಯ ಇಂತಹ ಧರ್ಮದಲ್ಲಿ ಹುಟ್ಟಬೇಕೆಂದು ಅರ್ಜಿ ಸಲ್ಲಿಸಿ ಹುಟ್ಟಿರುವುದಿಲ್ಲ. ಜನನ ಸಹಜವಾದದ್ದು, ಅದಕ್ಕೊಂದು ಧರ್ಮದ ಬಂದ ಏರ್ಪಡಿಸಿ ಅನೇಕ ಸಂಪ್ರದಾಯಗಳನ್ನು ಬಲವಂತವಾಗಿ ಸಮೀಕರಿಸಿ ಒಂದು ಸಹಜದ ಸ್ಥಿತಿಗೆ ತಂದುಬಿಡುತ್ತೇವೆ. ಮಾನವೀಯತೆಯಿಂದ ದೂರ ಮಾಡಿ ಒಂದು ನಿಶ್ಚಲ ಸ್ಥಿತಿಗೆ ತಂದು ಉಸಿರಾಡದಂತೆ ಮಾಡಿ ಬಿಡಲಾಗುತ್ತದೆ. ಹಿಂದುತ್ವದ ಹೆಸರಲ್ಲಿ ಧರ್ಮದ ಹೆಸರಲ್ಲಿ ಇನ್ನೊಂದು ಧರ್ಮದ ಸ್ವತಂತ್ರ್ಯವನ್ನು ಕಸಿದುಕೊಳ್ಳುವುದು ಹಿಂಸಾತ್ಮಕ ಕೃತ್ಯ. ಇದು ಅಮಾನವೀಯತೆ ಎಂದು ಇಂದಿನ ಕಾವ್ಯ ಸಾರುತ್ತದೆ.

ಈ ಕಾಲದ ಹಿಂಸೆಯ ವಿರುದ್ಧ ಪ್ರೀತಿಯ ಆಧ್ಯಾತ್ಮವನ್ನು ಶೋಧಿಸುವ ಮಹತ್ವದ ಕಾವ್ಯವಾಗಿದೆ. ಜೊತೆಗೆ ತೀವ್ರವಾದ ಸಾಮಾಜಿಕ ಎಚ್ಚರವಿದೆ. ಅಂತರಂಗ ಹಾಗೂ ಬಹಿರಂಗದ ಬದಲಾವಣೆಗೆ ಅಗತ್ಯವಾದ ದರ್ಶನಗಳಿವೆ. ವಿಶ್ವಾತ್ಮಕ ಹಾಗೂ ಸದಾ ಸಮಕಾಲೀನವಾಗುವ ಜೀವಂತಿಕೆಯಿದೆ. ಬದುಕಿನ ಬೆಳಕು ನೀಡುವಂತಹ ಬೆರಗುಗೊಳಿಸುವಂತಹ ಸತ್ಯ ಮತ್ತು ಸತ್ವ ಇತ್ತೀಚಿನ ಕಾವ್ಯದಲ್ಲಿ ತುಂಬಿದೆ. ಸತ್ತ ಮಾನವೀಯತೆಗೆ ಮತ್ತೆ ಜೀವ ತುಂಬುವ ಪ್ರಯತ್ನ ಇತ್ತೀಚಿನ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಒಂದು ಪ್ರಬಲ ಸಮುದಾಯದ ಆಚಾರ-ವಿಚಾರಗಳು ಆಚರಣೆಯಾಗಿ ಅಧಿಕಾರ ನಡೆಸುವಾಗ ಅನೇಕ ತಳಸಮುದಾಯಗಳ ಅನನ್ಯತೆಯು ಪ್ರಭುತ್ವದ ಪರಿಧಿಯೊಳಗೆ ಕಳೆದುಕೊಳ್ಳುತ್ತದೆ. ಅಂತಹ ಸ್ಥಿತಿ ಪ್ರಭುತ್ವ ನಿರ್ಮಿಸುತ್ತದೆ. ಇಂತಹ ರೋಗಗ್ರಸ್ಥ ವ್ಯವಸ್ಥೆಗೆ ಪ್ರೀತಿ, ಸೌಹಾರ್ದ ಸಹಬಾಳ್ವೆಯ ಮೂಲಾಮು ಹಚ್ಚಲು ಇತ್ತೀಚಿನ ಕಾವ್ಯ ನಿಂತಿದೆ. ಪ್ರತಿಯೊಂದು ಜೀವಿಗೂ ಜೀವಿಸುವ ತನ್ನದೇ ಆದ ಬದುಕಿನ ಕ್ರಮ ಇರುತ್ತದೆ. ಒಂದು ಸಾಂಸ್ಕೃತಿಕ ಅನನ್ಯತೆಯ ಬದುಕಿನ ಕ್ರಮವನ್ನು ಭಂಗಗೊಳಿಸಿ ಏಕರೂಪದ ಬಲವಂತದ ಮತ್ತೊಂದು ಪರಧರ್ಮದ ಬದುಕಿನ ಬಗೆಯನ್ನು ಬಲವಂತವಾಗಿ ಏರುತ್ತಿರುವ ಹುನ್ನಾರವನ್ನೆ ಸಮರ್ಥವಾಗಿ ಚಿತ್ರಿಸಿದೆ. ಆಹಾರ ಪದ್ಧತಿ ಕೇವಲ ಆಹಾರ ಪದ್ಧತಿಯಾಗಿರುವುದಿಲ್ಲ. ಅದು ಅವರ ಪರಂಪರೆ ಬದುಕು, ಸಂಸ್ಕೃತಿಯನ್ನು ಅಭಿವ್ಯಕ್ತಿಸುತ್ತಿರುತ್ತದೆ. ಅಂತಹ ಆಹಾರ ಪದ್ಧತಿಯನ್ನು ಮುರಿಯುವ ಹಾಗೂ ಬಲವಂತವಾಗಿ ಬೇರೊಂದನ್ನು ಏರುವುದು ಅದು ಮನುಷ್ಯತ್ವಕ್ಕೆ ವಿರುದ್ಧವಾದದ್ದು ಅಂತಹ ಪದ್ಧತಿಯನ್ನು ಪ್ರಶ್ನಿಸಿದವರ ರೀತಿಯಲ್ಲಿ ಇಂದಿನ ಕಾವ್ಯ ಅಭಿವ್ಯಕ್ತಗೊಳ್ಳುತ್ತಿರುವುದು ಕಂಡು ಬಂದಿದೆ.

ಇತ್ತೀಚಿನ ಕನ್ನಡ ಕಾವ್ಯ ಸಮಕಾಲೀನ ಸಂವೇದನೆಗಳನ್ನು ಹೊಸ ಬಗೆಯಲ್ಲಿ ವ್ಯಕ್ತಪಡಿಸಿರುವುದು ಕಾಣುತ್ತೇವೆ. ಸಾಮಾಜಿಕ ಜವಾಬ್ದಾರಿ ಮತ್ತು ಒಲವು ಇವೆರಡು ಕಾವ್ಯದಲ್ಲಿ ಕಂಡುಬಂದಿದೆ. ಸಮಾಜದಲ್ಲಿ ನಡೆಯುತ್ತಿರುವ ಕೋಮು ಸಂಘರ್ಷಗಳನ್ನು ಚಿತ್ರಿಸಿ ಅದರ ಹಿಂದಿರುವ ಮನಸ್ಥಿತಿ ಮತ್ತು ಅಪಾಯಕಾರಿ ಸಂಗತಿಗಳ ತಿಳಿಸಿ ಎಚ್ಚರಿಸುವುದರ ಜೊತೆಗೆ

ಜಾಗೃತಿಯನ್ನು ಮೂಡಿಸಿದೆ. ಸಾಮಾಜಿಕ ಸಂಘರ್ಷದ ನೆಲೆಗಳು ಎಂಬ ಅಧ್ಯಯದಲ್ಲಿ ಸಾಂಸ್ಕೃತಿಕ ರಾಜಕಾರಣ, ಜಾತಿ ಮತ್ತು ವರ್ಗ ಸಂಘರ್ಷ, ಕೋಮು ಸಂಘರ್ಷದ ನೆಲೆ ಮತ್ತು ಆಹಾರ ರಾಜಕಾರಣ ಎಂಬ ಉಪಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಮಾಡಲಾಗಿದೆ. ಇವತ್ತಿನ ಕಾವ್ಯದಲ್ಲಿ ವ್ಯಕ್ತವಾದ 'ಆಹಾರ ರಾಜಕಾರಣದ' ಬಗೆಗೆ ಜಾಗೃತಿ ಅತ್ಯಂತ ಮಹತ್ವದ್ದಾಗಿದೆ. ಸಂವಿಧಾನಬದ್ಧವಾದ ಆಶಯಗಳನ್ನು ಜೀವಂತವಾಗಿಸಿ, ಪ್ರತಿಯೊಬ್ಬರು ತಮ್ಮ ಊಟ ಮತ್ತು ಉಡುಪನ್ನು ಧರಿಸುವ ಹಕ್ಕು ಇದೆ. ಆದರೆ ಇದನ್ನು ದಮನ ಮಾಡಿ ಇನ್ನೊಬ್ಬರ ಮೇಲೆ ಏರಲಾಗಿರುವ ಆಹಾರ ಪದ್ಧತಿಯ ವಿರುದ್ಧ ಕಾವ್ಯ ಧ್ವನಿ ಎತ್ತಿರುವ ಕಂಡುಬಂದಿದೆ. ಸಮಾಜದಲ್ಲಿ ನಡೆಯುವ ಕೋಮು ಸಂಘರ್ಷ ಮತ್ತು ಸಮುದಾಯಗಳ ಅಸ್ಮಿತೆಯ ಕುರಿತು ಕಾವ್ಯ ಮಾತನಾಡುತ್ತಿದೆ.

**ಕೊನೆ ಟಿಪ್ಪಣಿಗಳು**

೧. ವೀರಣ್ಣ ಮಡಿವಾಳರ, **ನೆಲದ ಕರುಣೆಯ ದನಿ,** ಪುಟ ೩೧.

೨. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೩೦.

೩. ಎನ್ಕೆ. ಹನುಮಂತಯ್ಯ, **ಮಾಂಸದಂಗಡಿಯ ನವಿಲು(ಚಿತ್ರದ ಬೆನ್ನು),** ಪುಟ ೯೮.

೪. ಎನ್ಕೆ. ಹನುಮಂತಯ್ಯ, **ಮಾಂಸದಂಗಡಿಯ ನವಿಲು(ಹಿಮದ ಹೆಜ್ಜೆ),** ಪುಟ ೫೪.

೫. ಲಕ್ಕೂರ ಆನಂದ, **ಉರಿವ ಏಕಾಂತ ದೀಪ,** ಪುಟ ೪೦.

೬. ರಮೇಶ ಅರೋಲಿ, **ಜುಲುಮೆ,** ಪುಟ ೩೫.

೭. ರತಿ(ಸಂ), **ತಂಪು,** ಪುಟ ೮೫.

೮. ಅದೇ, ಪುಟ ೮೬.

೯. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೯೫.

೧೦. ಪಣೀಕರ, **ರಾಷ್ಟ್ರೀಯತೆ ಬೆಳವಣಿಗೆ,** ಪುಟ ೬.

೧೧. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೯೬.

೧೨. ಅದೇ, ಪುಟ ೪.

೧೩. ಅದೇ.

೧೪. ಎನ್ಕೆ. ಹನುಮಂತಯ್ಯ, **ಮಾಂಸದಂಗಡಿಯ ನವಿಲು,** ಪುಟ ೮೬.

೧೫. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೩೦.



ಅಧ್ಯಾಯ : ನಾಲ್ಕು

# ಇತ್ತೀಚಿನ ಕನ್ನಡ ಕಾವ್ಯದಲ್ಲಿ ವಿಷಾದದ ನೆಲೆ


೪.೧. ನೋವಿನ ಸಂಕಥನ

೪.೨. ಪ್ರೀತಿಯ ಹುಡುಕಾಟ

೪.೩. ಮನುಷ್ಯತ್ವದ ತುಡಿತ

೪.೪. ಬದುಕಿನ ಅಸ್ಥಿರತೆ

ಅಧ್ಯಾಯ : ನಾಲ್ಕು

# ಇತ್ತೀಚಿನ ಕನ್ನಡ ಕಾವ್ಯದಲ್ಲಿ ವಿಷಾದದ ನೆಲೆ

ಕನ್ನಡ ಕಾವ್ಯ ಸಾವಿರಾರು ವರ್ಷಗಳ ಐತಿಹಾಸಿಕ ಹಿನ್ನೆಲೆ. ಒಂದು ಸುದೀರ್ಘವಾದ ಪರಂಪರೆ ಇದೆ. ಹೊಸ ಕಾವ್ಯ, ಕಲೆ, ಚಿಂತನೆಗಳು ಪರಂಪರೆಯ ಪ್ರಜ್ಞೆಯಿಂದಲೇ ಮೈ ಪಡೆಯುತ್ತವೆ. ಹೊಸದರ ಕಡೆಗೆ ತುಡಿಯುವುದಾಗಲಿ ಕಟ್ಟುವುದಾಗಲಿ ಹಿಂದಿನ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಅರಿವಿನ ಮೂಲಕವೇ ಸಾಧ್ಯವಾಗುವುದು. ನಮ್ಮ ಕನ್ನಡ ಕಾವ್ಯ ಸಂದರ್ಭದಲ್ಲಿ ಚಳುವಳಿಗಳು ಇವೆ. ಪ್ರಯೋಗಗಳೂ ಇವೆ. ಪ್ರಯೋಗಶೀಲತೆ ವೈಯಕ್ತಿಕವಾದದ್ದು. ಚಳುವಳಿ ಸಾಮೂಹಿಕವಾದದ್ದು, ಪ್ರಚಲಿತ ಕನ್ನಡ ಕಾವ್ಯ ಒಪ್ಪಿತ ಮೌಲ್ಯಗಳನ್ನು ಸ್ವೀಕರಿಸುತ್ತಲೇ ಅದರ ಪರಿಮಿತಿಯೊಳಗೆ ಹೊಸತನವನ್ನು ಮೆರೆದಿದ್ದಾರೆ. ಅಂದಂದಿನ ಸಮಕಾಲೀನ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳಿಗೆ ನಿರೀಕ್ಷೆಗಳಿಗೆ ಒತ್ತಡದ ಅಗತ್ಯಗಳಿಗೆ ಅನುಗುಣವಾಗಿ ಒಂದು ಕಾವ್ಯ ರೂಪವು ಸಿದ್ಧವಾಗುತ್ತದೆ. ಇಂದಿನ ರಾಜಕೀಯ, ಪರಿಸ್ಥಿತಿ, ಮೌಲ್ಯರಹಿತವಾದ ಸಾಮಾಜಿಕ ಸ್ಥಿತಿ, ಒಂದು ಕಾಲಕ್ಕಿದ್ದ ರಾಷ್ಟ್ರಾಭಿಮಾನ ಒಡೆದು ವಿಚ್ಛಿನ್ನವಾಗಿ ಪ್ರತ್ಯೇಕತಾ ಭಾವವೇ ವ್ಯಾಪಕವಾಗಿರುವಾಗ ಜಾತ್ಯಾತೀತ ರಾಷ್ಟ್ರವಾದ ಭಾರತದಲ್ಲಿ ಕೋಮುಗಲಭೆಗಳ, ಮತಿಯ ಸಂಘರ್ಷಗಳು, ಭಯೋತ್ಪಾದನೆ, ಬಡತನ, ಹಸಿವು, ಒಂಟಿತನ, ಅನುಮಾನದ ದೃಷ್ಟಿ ಮನುಷ್ಯ ಮನುಷ್ಯನ ನಡುವಿನ ಅಂತರತೆ, ಅಸ್ಪೃಶ್ಯತೆ ಇವುಗಳಿಗೆ ಪರಿಣಾಮಕ್ಕೆ ಕಮರಿದ ಬದುಕು ಮತ್ತು ಮಾನವ ಸಂಬಂಧಗಳ ಪರಿಸ್ಥಿತಿಯನ್ನು ಇತ್ತೀಚಿನ ಕಾವ್ಯ ವಿಷಾದದ ನೆಲೆಯಲ್ಲಿ ಅಭಿವ್ಯಕ್ತಿಸುತ್ತದೆ. ಕಣ್ಣೀರಿನ ಕಾವ್ಯ, ಸಂಕಟದ ಕಾವ್ಯ ನೋವಿನ ಕಾವ್ಯವಾಗಿ ಮೂಡುತ್ತಿರುವುದು ಕಂಡುಬಂದಿದೆ. ಪ್ರತಿ ಕವಿಯ ಕಾವ್ಯದಲ್ಲಿ ನೋವು ಒಡಮಾಡಿರುವುದು ದುಃಖ ಹೊರಹಾಕುವ ಕಣ್ಣೀರಿಡುವುದು ಕಂಡು ಬಂದಿದೆ. ಈ ವಿಷಾದದ ನೆಲೆಯಲ್ಲಿ ಒಂದು ಹೊಸ ಬೆಳಕನ್ನು ಹೊಸ ಲೋಕವನ್ನು ಕಾಣಬಯಸಿದ ಕಾವ್ಯ ಇತ್ತೀಚಿನ ಕನ್ನಡ ಕಾವ್ಯವಾಗಿದೆ.

### ೪.೧. ನೋವಿನ ಸಂಕಥನ

ಇತ್ತೀಚಿನ ಕನ್ನಡ ಈ ಹಿಂದಿನ ಪರಂಪರೆಯಲ್ಲಿ ತನೆಗೆ ಬೇಕಾದ್ದನ್ನು ಸ್ವೀಕರಿಸಿ ಬೇಡವಾದದ್ದೂ ವಿಮರ್ಶಿಸಿ ಹೊಸ ನುಡಿಗಟ್ಟು, ರೂಪಕ, ಆಶಯವನ್ನು ಅಭಿವ್ಯಕ್ತಿಸುತ್ತ ಕಾವ್ಯ

ಪರಂಪರೆಯನ್ನು ಮುಂದುವರೆಸುತ್ತದೆ. ಕಾವ್ಯ ಬರೀ ಕಾವ್ಯವಾಗದೇ ಆನಂದಕ್ಕೆ ಹೆಚ್ಚಿನ ಆದ್ರತೆ ನೀಡಿದೆ ಮನುಷ್ಯ ಬದುಕಿನ ಭಾಗವಾಗಿ ಸಾಮಾಜಿಕ ಮೌಲ್ಯಗಳನ್ನು ಬಿತ್ತುವ ಮಹತ್ತರ ಕೆಲಸ ಮಾಡುತ್ತದೆ. ಕಾವ್ಯ ಕಾವ್ಯಕ್ಕಾಗಿ ಕಾವ್ಯವಾಗದೆ ಬದುಕಿಗಾಗಿ ಮನುಷ್ಯರಿಗಾಗಿ ಕಾವ್ಯಾವಾದಾಗ ಅದು ಸರ್ವಕಾಲಕ್ಕೂ ಜೀವಂತವಾಗಿ ನಿಲ್ಲಬಲ್ಲದು. ಇಂದಿನ ಜಾಗತೀಕರಣದ ಪ್ರಭಾವಕ್ಕೆ ಆಧುನಿಕತೆಯ ಭರಾಟೆಗೆ ದೇಸಿತನಕ್ಕೆ ಬಿದ್ದ ಪೆಟ್ಟು ಮನುಷ್ಯನ ಬದುಕಿನಲ್ಲಿ ಆದ ಅವಾಂತರಗಳನ್ನು ನೋವನ್ನು ಕಾವ್ಯ ಅಭಿವ್ಯಕ್ತಿಸುತ್ತಿದೆ. ಹೊಸ ತಲೆಮಾರಿನ ಕವಿಗಳ ಕವಿತೆಯ ಸಾಲುಗಳನ್ನು ಗಮನಿಸಿದಾಗ ನೋವನ್ನು ವ್ಯಕ್ತಪಡಿಸಿ ಕಣ್ಣೀರಿಡುವುದು ಕಂಡುಬಂದಿದೆ. ಕವಿ ಪೀರಭ್ಞಾಷಾರ ಕವಿತೆಯ ಸಾಲುಗಳಾದ 'ನಾನು ಅತ್ತಾಗ ಬಿದ್ದ ಕಣ್ಣೀರಲ್ಲಿ ಜೀವವಿದೆ' ಎಂಬ ಸಾಲು ಇದರಂತೆ ಕವಿ ವೀರಣ್ಣ ಮಡಿವಾಳರ ಸಾಲುಗಳಿಂದ ನಾನು ಅಳುತ್ತೇನೆ. ಶಬ್ದವಾದದಂತೆ ಎಂಬ ಸಾಲುಗಳು ಆರೀಫರಾಜರ ಸಾಲುಗಳಾದ;

ಆಗ ನಾನು ಎಲ್ಲರಿಗೂ ಕೇಳಿಸುವ ಹಾಗೆ ಅಳುತ್ತಿದ್ದೆ.
ನಡುವೆ ಕೇವಲ ನನಗೆ ಕೇಳಿಸುವ ಹಾಗೆ ಅತ್ತೆ
ಈಗೀಗ ನಾನು ಅಳುವುದು ನನಗೆ ಕೇಳಿಸುವುದಿಲ್ಲ.[೧]

ಇಂತಹ ಕವಿತೆಯ ಸಾಲುಗಳನ್ನು ಗಮನಿಸಿದಾಗ ಒಡಲಾಳದ ಸಂಕಟ, ಹತಾಶೆ, ನೋವನ್ನು ಅಭಿವ್ಯಕ್ತಗೊಂಡಿರುವುದು ಗಮನಿಸಬಹುದು. ಸಂಕಟದ ಬುತ್ತಿ ಒಂದೊಂದು ಅಕ್ಷರದಲ್ಲೂ ಹರಡಿಕೊಂಡಿರುವುದು; ಕೈಗೆತ್ತಿಕೊಂಡರೆ ಸುಡುವುದು, ಹಾಗೇ ಸುಟ್ಟಕೊಂಡವರ ಕನಸಿಗೆ ಕಾವ್ಯ ಕೊಟ್ಟು ಸಲಹುವುದು. ಇದರ ಮುಂದೆ ಕುಳಿತು ಹಸಿದವರಿಗೆ ಜೀವವೇ ಬಂದಂತಾಗುವುದು. ಬಂದ ಜೀವ ಹೋದಂತಾಗುವುದು. ಅಲ್ಲಾಡುವ ಉಸಿರ ಬತ್ತಿಯನ್ನು ಅಂಗೈಯಲ್ಲಿ ಹಿಡಿದು ಯಾರೋ ಹಾಕಿ ಬಿಟ್ಟಿರುವ ಅಗಳಿಯನ್ನು ತೆರೆಯುವ ಹಂಬಲವನ್ನು ತೋಡಿಕೊಳ್ಳುವುದು. ಇವತ್ತಿನ ಕಾವ್ಯದ ನೆಲೆಯಾಗಿದೆ. ಕವಿಯ ವೈಯಕ್ತಿಕ ಸಂಕಟವಾಗದೆ ಸಮುದಾಯದ ಸಂಕಟವಾಗಿ ಅಭಿವ್ಯಕ್ತಗೊಳ್ಳುತ್ತಿದೆ. ಒಬ್ಬ ಕವಿ ತನ್ನ ಪರಿಸರದ ಸಮುದಾಯದ ಧ್ವನಿಯಾಗಿ, ಕೂಗಾಗಿ ಕಣ್ಣಾಗಿ ಕಾವ್ಯ ರಚಿಸಿದರೆ ಅದು ಸಮುದಾಯದ ಪಾಡಾಗಿ ಉಳಿಯಲು ಸಾಧ್ಯ. ತನಗೆ ಎದುರಾಗುವ ಸಂಕಟಗಳು ವೈಯಕ್ತಿಕವಾದರೂ ಅದರ ಹಿಂದಿನ ಮನಸ್ಥಿತಿ ಅಂತಹ ಸಂಕಟಕ್ಕೆ ಕಾರಣವಾದ ಸಾಮಾಜಿಕ ದುಸ್ಥಿತಿಯನ್ನು ಕವಿಯು ಒಳಗಣ್ಣಿನಿಂದ ನೋಡಿದಾಗ ತನಗಾದ ಸಂಕಟ ತನ್ನ ಸಮುದಾಯದ ತನ್ನ ಪರಿಸರದ ಅನೇಕ ಜನರಿಗಾದ ಅನುಭವದ ಅಭಿವ್ಯಕ್ತಿ ದೊರೆಯುತ್ತದೆ.

ಕವಿ ನಡೆಸುವ ಅನ್ವೇಷಣೆಯು ಅವನಂತಹ ಅನೇಕ ಓದುಗರ ಅನ್ವೇಷಣೆಯೂ ಆಗುವುದರಿಂದ ತೀರ ವೈಯಕ್ತಿಕವಾದ ಕವಿತೆಗಳು ಸಾರ್ವಜನಿಕ ಮಹತ್ವ ಬರುತ್ತದೆ. ಕವಿಯ ತುಡಿತ ಸಂಕಟ, ಹುಡುಕಾಟ ತೊಡಗುವಿಕೆಯೋ ಕವಿಯ ಕವಿತೆಯು ಓದುಗನ ಕವಿತೆಯಾಗಿಸುತ್ತದೆ. ಸಮುದಾಯದ ಧ್ವನಿ ಸಂಕಟವಾಗಿಸುತ್ತದೆ. ನವೋದಯ ಕಾಲದ ಕವಿತೆ ಆದರ್ಶ, ರಮಣೀಯತೆ

ಸೌಂದರ್ಯ, ನಿಸರ್ಗದ ಆಶಯ ಹೊಂದಿದೆ. ಪ್ರಗತಿಶೀಲದಲ್ಲಿ ಸಮಾಜದ, ಬಡತನ, ಅಸಮಾನತೆಯ ಅಂಶಗಳು ಕಂಡುಬಂದವು. ನವ್ಯದಲ್ಲಿ ವೈಯಕ್ತಿಕ ತುಡಿತ ಬಯಕೆ, ಆಯಾಮಗಳು ಕಂಡುಬಂದವು. ನಂತರದಲ್ಲಿ ಬಂಡಾಯದಲ್ಲಿ ಬಂಡಾಯದ ಧೋರಣೆಗಳು ವ್ಯಕ್ತಗೊಂಡವು. ಇಂದು ಇತ್ತೀಚಿನ ಕನ್ನಡ ಕಾವ್ಯದಲ್ಲಿ ಈ ಎಲ್ಲದರ ಆಶಯಗಳನ್ನು ಹೊಸ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ.

ನನಗೆ ನನ್ನವ್ವ ಈವರೆಗೂ ಲಾಲಿ ಹಾಡಲಿಲ್ಲ.
ಅವಳ ದನಿ ಯಾವಾಗಲೋ ಹಸಿವಿಗೆ ಸತ್ತು ಹೋಗಿದೆ
ನನಗೆ ನನ್ನವ್ವ ಈವರೆಗೂ ತೊಟ್ಟಿಲೂ ತೂಗಿಲ್ಲ
ಅವಳ ಕೈಗಳೆರಡೂ ಸಾಲ ತೀರಿಸಲಾಗದೆ ಮುರಿದು ಹೋಗಿವೆ
ಎಲ್ಲ ಮಕ್ಕಳು ತಮ್ಮ ತಮ್ಮ ತಾಯಿಂದಿರ
ಕಿರ ಬೆರಳಿಡಿದುಕೊಂಡು ಆಟವಾಡುತ್ತಿದ್ದರೆ
ನಾನು ಬಿರು ಬಿಸಿಲಲ್ಲಿ ಅನ್ನದ ಕನಸು ಕಾಣುತ್ತ
ನನ್ನವ್ವನ ಸೆರಗ ಮರೆಯಲ್ಲಿ ಮಲಗಿದ್ದೇವೆ ಸಾರ್![೨]

ಲಕ್ಕೂರ ಆನಂದ ಅವರ 'ಅವ್ವ' ಎನ್ನುವ ಕವಿತೆಯ ಸಾಲುಗಳು ಮೇಲಿನ ಸಾಲುಗಳು ತಾಯಿ ಮಗನ ಸಂಬಂಧ ಎಂತಹದ್ದು ಎಂಥ ನೋವು ಸಂಕಟದ ಜೀವನ ಎಂದು ಕೊರಗುವುದನ್ನು ಕಾಣಬಹುದು. ಈ ಲೋಕದಲ್ಲಿ ಎಷ್ಟೇ ಮಕ್ಕಳು ತಾವೂ ಸರಿಯಾಗಿ ಬಾಲ್ಯ ಅವನ ಅನುಭವಿಸದೆ ಬಡತನ, ಹಸಿವು, ರೋಗ, ಕಾಯಿಲೆಗಳಿಗೆ ತುತ್ತಾಗಿ ಸರಿಯಾಗಿ ತಾಯಿ ಮಮತೆ ಪಡೆಯದೆ ಬದುಕುವುದನ್ನು ಕಳ್ಳುಕರಗುವ ರೀತಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ತಾಯಿಯ ಲಾಲಿಹಾಡು, ತೊಟ್ಟಿಲು ಸಹ ದೂರವಾಗಿ ಕೈತುತ್ತು ಕನಸಾಗಿ ಬೀದಿ ಬೀದಿಯಲ್ಲಿ ಭಿಕ್ಷೆ ಬೇಡಿತ್ತಾ ತಾಯಿಗೂ ತಮಗೂ ತುತ್ತು ಅನ್ನಕ್ಕಾಗಿ ಹಂಬಲಿಸುವುದು ಈ ಸಮಾಜದಲ್ಲಿ ಕಾಣಬಹುದಾಗಿದೆ ಎಂದು ವ್ಯಕ್ತಪಡಿಸಿದರೆ, "ಸಮಾಜ ಬದಲಾಗುತ್ತದೆ ಎಂದರೆ ಸಂವೇದನೆಯ ಸೃಷ್ಟಿಗೆ ಕಾರಣವಾದ ಪರಿಸ್ಥಿತಿಗಳ ಬದಲಾಗುತ್ತವೆ. ಕಾವ್ಯ ಕೂಡ ಈ ಬದಲಾದ ಶ್ರುತಿಗೆ ಹೊಂದಿಯೇ ತನ್ನ ಅಭಿವ್ಯಕ್ತಿಯನ್ನು ತಿದ್ದಿಕೊಳ್ಳಬೇಕಷ್ಟೆ. ಹಾಗಲ್ಲದೆ ಒಂದು ಘಟ್ಟದಲ್ಲಿ ಅದು ತಟಸ್ಥಿ ನಿಂತು ಬಿಟ್ಟರೆ ಸಂವೇದನೆ ಅಭಿವ್ಯಕ್ತಿಗಳಿಗೆ ನಡುವೆ ಕಂದಕ ಮೈಬಿಟ್ಟುತ್ತದೆ. ಕಣ್ಣ ಕಾಣುತ್ತಿರುವುದೇ ಒಂದು ಕಂಠ ನುಡಿಯುತ್ತಿರುವುದೇ ಒಂದು ಎಂಬ ಪರಿಸ್ಥಿತಿ ತಲೆ ಹಾಕುವುದು ಆಗಲೇ".[೩]

ಕನ್ನಡ ಸಾಹಿತ್ಯ ಪರಂಪರೆಯ ಆದಿಯಾಗಿ ಅವಲೋಕಿಸಿದಾಗ ಬದಲುಗೊಳ್ಳುತ್ತಿರುವ ಸಾಮಾಜಿಕ ಸ್ಥಿತಿಗತಿಗೆ ಮುಖಾಮುಖಿಯಾಗಿ, ಅಭಿವ್ಯಕ್ತಿಯಾಗಿ ಕಾವ್ಯ ಸಾಗುತ್ತಾ ಬಂದಿದೆ. ಸಂವೇದನೆಗಳನ್ನು ಹೊಸ ಹೊಸ ನೆಲೆಯ ಸೃಷ್ಟಿಸಿಕೊಳ್ಳುತ್ತಾ, ಪರಿಸ್ಥಿತಿಗೆ ವ್ಯಾಖ್ಯಾನದ ರೀತಿಯಲ್ಲಿ

ಅಭಿವ್ಯಕ್ತಿಸಿದೆ. ನೋವು, ಸಂಕಟ ಒಂದೇ ನೆಲೆಯಲ್ಲಿ ಸಾಗಿ ಬಂದಂಥವುಗಳಲ್ಲಿ ಅವು ಸಿದ್ಧ ಮಾದರಿಗಳಲ್ಲಿ ಕಾಲಘಟ್ಟಕ್ಕೆ ಅನುಗುಣವಾಗಿ ಅನುಭವಿಸಿದ ಸಂಕಟಗಳಿಗೆ ತಕ್ಕದಾದ ಭಾಷೆ ರೂಪಗೊಳ್ಳುತ್ತ ಬಂದಿದೆ. ಪಂಪನ ಆದಿಯಾಗಿ ಪ್ರತಿಭಟಿಸುವ ಗುಣ ನಮ್ಮ ಕನ್ನಡ ಸಾಹಿತ್ಯ ಕಲಿಸಿಕೊಟ್ಟಿದೆ. ರಾಜಪ್ರಭುತ್ವ ಆದಿಯಾಗಿ ನೀಡಿದ ನೋವುಗಳನ್ನು ಪ್ರಜಾಪ್ರಭುತ್ವದಲ್ಲಿ ರಾಜಕೀಯ ಸನ್ನಿವೇಶಗಳು, ಬಂಡವಾಳಶಾಹಿ ಮನಸ್ಸುಗಳು, ಪ್ರಭುತ್ವ ಹಿಂಸೆಗಳು ನೀಡುತ್ತಿರುವ ಸಂಕಟಗಳಿಗೆ ಕಾವ್ಯ ಭಾಷೆ ಕಾಲಕಾಲಕ್ಕೆ ಹೊಸದಾಗಿ ರೂಪ ತಾಳುತ್ತಾ ಬಂದಿದೆ. ಅದರಂತೆ ಇತ್ತೀಚಿನ ಕಾವ್ಯವು ಒಂದಾಗಿದೆ. ಪ್ರಸ್ತುತ ಜಾಗತೀಕರಣದ ಪ್ರಭಾವಕ್ಕೆ ನಲುಗಿದ ಬದುಕಿನ ಚಿತ್ರಣ, ನೋವುಗಳನ್ನು ಅಭಿವ್ಯಕ್ತಿಸಲು ಕಾವ್ಯ ಈ ಕಾಲಕ್ಕೆ ತಕ್ಕದಾದ ರೀತಿಯಷ್ಟೇ ಕಾವ್ಯ ಭಾಷೆಯನ್ನು ನಿರ್ಮಿಸಿಕೊಂಡಿದೆ. ಕಾವ್ಯ ತನ್ನ ನೆಲದಲ್ಲಿ ಬದುಕುವವರ ಬದುಕಿನ ಚಿತ್ರಣ, ನೋವುಂಡವರ ನೋವು, ಅದನ್ನು ಪ್ರತಿಭಟಿಸುವ ಒಳಮನಸ್ಸಿನ ಧ್ವನಿ ಕಾವ್ಯದಲ್ಲಿ ರೂಪಕವಾಗಿ ಒಮ್ಮುವುದು. ಜೊತೆಗೆ ಅದನ್ನು ಅನುಭವಿಸುವ ಸಂಕಟದಲ್ಲಿ ಪ್ರತಿಭಟಿಸದೇ ಕವನದ ನೆಲೆಯಲ್ಲಿ ಅನುಭವಿಸುತ್ತಿರುವ ಮುಗ್ಧ ಮನಸ್ಸಿನ ಚಿತ್ರಣವೂ ಇದೆ. ತನ್ನ ನಂಬಿದವರ ಪರವಾಗಿ ಕಾವ್ಯ ಮಾತಾಡುತ್ತದೆ. ತನ್ನವರ ನೋವುಗಳನ್ನು ಪ್ರತಿಧ್ವನಿಸಿ ಪ್ರತಿಭಟಿಸಲು ಶಕ್ತಿ ನೀಡುತ್ತದೆ. ಸಮಕಾಲೀನ ಸುಡುವ ವಾಸ್ತವಗಳು ಇಂದಿನ ಪರಿಸ್ಥಿತಿಯಾಗಿದೆ. ಪರಿಸ್ಥಿತಿಗಳು ತಂದೊಡ್ಡುವ ಸುಡುವ ವಾಸ್ತವಗಳು ಮನುಷ್ಯ ಮನುಷ್ಯರ ನಡುವೆ ಗೋಡೆ ನಿರ್ಮಿಸುತ್ತಿದೆ.

ಇಂದಿನ ಪರಿಸ್ಥಿತಿಯ ತಂದೊಡ್ಡಿದ ಸುಡುವ ವಾಸ್ತವಗಳ ನೋವನ್ನು ಕಾವ್ಯ ಧ್ವನಿಸುತ್ತಿದೆ. ಬದುಕು, ಸಮಾಜ, ಸಮುದಾಯದ ಸಂಕಟಗಳನ್ನು ಕ್ರಿಯಾಶೀಲತೆಯೊಂದಿಗೆ ಸೃಜನಶೀಲತೆಯಲ್ಲಿ ಅಭಿವ್ಯಕ್ತಿಸುತ್ತಿದೆ. ನೋವುಗಳನ್ನು ಅಭಿವ್ಯಕ್ತಿಸುವುದರ ಜೊತೆಗೆ ಅವುಗಳನ್ನು ನುಂಗಿ ಎದುರಿಸುವ ಆಶಯದ ಮುಂದಿರುವ ಬೆಳಕಿನ ಬಗ್ಗೆ ಜಾಗೃತಿಯನ್ನು ಸಹ ಕೂಗಿ ಹೇಳುತ್ತದೆ. ಅಂತಹ ಹೊಂಬೆಳಕಿನ ಕನಸಿಗಾಗಿ ಕಣ್ಣುತ್ತೆರದು ಕುಂತಂತಿದೆ. ಇಂದಿನ ಕನ್ನಡ ಕಾವ್ಯ ಪ್ರಭುತ್ವ ನಿರ್ಮಿಸಿದ ಎಲ್ಲ ಕಟ್ಟಳೆಗಳನ್ನು ಮುರಿದಾಕಿ ಸ್ವಾತಂತ್ರ್ಯದಲ್ಲಿ ಅಜಾದಿಯ ಕೂಗು ಕೂಗಿದೆ.

ಮನದ ಮಾತುಗಳು
ಮೌನದ ಸೆರೆಯಲಿ
ಮಗುಚಿ ಆಗೋ ಬಿಕ್ಕತಿವೆ
ಸ್ನಿಗ್ಧ ನುಗುವಿಹೀನ  ಮುಗ್ಧ ಮುಖ
ದಗ್ಧವಾದ ಆಗಸದ ಮುಕ್ತ ಸುಖ
ಕತ್ತರಿಸಿದ ಎದೆಯ ಕನಸ ರೆಕ್ಕೆ
ನೆಲಕ್ಕೆ ಅಪ್ಪಳಿಸಿ ಮರದ ಪಕ್ಕೆ[೪]

ಹೊಸ ಪೀಳಿಗೆಯಲ್ಲಿ ಒಂದಿಷ್ಟು ಹೊಸತನದ ಕವಿತೆಗಳನ್ನು ಗಮನಿಸಬಹುದಾಗಿದೆ. ಅದರಲ್ಲಿ ವಿಠಲ ದಳವಾಯಿ ಒಬ್ಬರಾಗಿದ್ದಾರೆ. ಇವರು ತಮ್ಮ ಅನುಭವಗಳಿಗೆ ಕಲಾತ್ಮಕ

ಮೂಲಕ ಹೊರಹಾಕಿದ್ದಾರೆ. ಕಾರ್ಪೋರೇಟ್ ವ್ಯವಸ್ಥೆಯು ತಂದಿರುವ ಅವಾಂತರಗಳನ್ನು ಸ್ಲಮ್‌ನಲ್ಲಿರುವ ಬದುಕಿನ ಚಿತ್ರಣವನ್ನು, ನಗರದಲ್ಲಿ ಬರೀ ಮನೆಗಳಿಗೆ ಮನಸ್ಸುಗಳಿಲ್ಲ ಎಂಬ ಸಂದೇಶವನ್ನು ಯಾಂತ್ರೀಕೃತವಾದ ಮಾನವ ಬದುಕಿನ ಚಿತ್ರಣ ಕಾವ್ಯದಲ್ಲಿ ಒಡಮೂಡಿಸಿರುವುದು ಕಂಡುಬಂದಿದೆ. ಒಂದು ಅರ್ಥದಲ್ಲಿ ಇತ್ತೀಚಿನ ಕಾವ್ಯ ವಿಷಾದತೆಯನ್ನು ಹೆಚ್ಚು ಅಭಿವ್ಯಕ್ತಿಸುತ್ತಿರುವುದು ನೋವನ್ನು ಹೆಚ್ಚು ಹೊರ ಚೆಲ್ಲುತ್ತಿರುವುದು ಕಂಡುಬಂದಿದೆ. ಒಂದು ವಿಶಿಷ್ಟ ರೂಪಕ ಶೈಲಿಯಲ್ಲಿ ಗ್ರಾಮೀಣ ಭಾಷೆಯಲ್ಲಿ ಒಂದು ವಿಭಿನ್ನ ಲಯದಲ್ಲಿ ಅಭಿವ್ಯಕ್ತಿಸುತ್ತಿರುವುದು ಗಮನಿಸಬಹುದು.

ಜೀವಂತ ಬದುಕಿಗೆ ನಿರ್ಬಂಧ
ಒಪ್ಪಂದ ಹೇರಿದವರು
ನಮ್ಮ ಸುತ್ತ ಹಲ್ಲು ಗರಿಗಳ ಹೆಣದು
ಗೂಡಿನೊಳು ಕನಸ ಬಿತ್ತಿ
ಕಾಣದೇ ಅಗ್ನಿ ಇಟ್ಟವರು.

ಭ್ರೂಣಕ್ಕೆ ಕತ್ತಿ ಇರಿದು
ಬೆಂಕಿಗೆಸೆದು ಬಾಯಿ ತೆರೆದವರು
ವಸ್ತ್ರಗಳನುಟ್ಟರೂ ಫತ್ವಾ ಹೊರಡಿಸಿದರು
ಪರದೆಯ ಚಾದರದಡಿ ಮುದುಡಿ
ಮಲಗಿ ಎದ್ದವರು[೫]

ಈ ಕವಿತೆಯ ಸಾಲುಗಳಲ್ಲಿ ಅಭಿವ್ಯಕ್ತಗೊಳ್ಳುವ ನೋವಿನ ಸಂಕಥನ ಹೃದಯ ಕಲುಕುವಂತಹದ್ದು. ಒಂದು ಸ್ವತಂತ್ರನಾದ ಜೀವಂತ ಬದುಕನ್ನು ನಾಶ ಮಾಡಿ, ಜೀವವನ್ನು ನೆಚ್ಚಿಕೊಂಡು ಜೀವಗಳನ್ನು ಬದುಕಲು ಬಿಡದೆ ನಿರ್ಬಂಧ ಹೇರಿದ ವ್ಯವಸ್ಥೆಯನ್ನು ಕೂರತೆಯನ್ನು ನೋವಿನಿಂದ ಹತಾಶಾಗಿ ಅಭಿವ್ಯಕ್ತಿಸಿರುವುದಾಗಿದೆ. ಯಾರಿಗೂ ಕೇಡನ್ನು ಬಯಸದ ಯಾವ ತಪ್ಪ ಮಾಡದ ಇನ್ನು ಸ್ವತಂತ್ರವಾಗಿ ಉಸಿರಾಟವಾಡಲು ಅಸಹಾಯಕವಾದ, ಇನ್ನೂ ಕಣ್ಣ ತೆರೆಯದ ಹಸುಗೂಸಿನ ಭ್ರೂಣಕ್ಕೆ ಕತ್ತಿ ಇರಿದು ಜಯಘೋಷ ಕೂಗಿ ಕೇಕೆ ಹಾಕಿ ಬೆಂಕಿಗೆ ಎಸೆದು ಸುಟ್ಟ ರಾಕ್ಷಸ ಸ್ಥಿತಿಯನ್ನು ನೆನೆದು ಸಂಕಟದ ಕಣ್ಣೀರಿ ಇಟ್ಟಿರುವುದು ಈ ಕವಿತೆಯಲ್ಲಿ ವ್ಯಕ್ತಗೊಂಡಿದೆ. ಆಹಾರ ಸಂಸ್ಕೃತಿ, ಉಡುಗೆ, ತೊಡಿಗೆಯ ನಿರ್ಬಂಧದಲ್ಲಿ ಬದುಕನ್ನು ಸಾಗಿಸುವುದು ಎಂತಹ ಸ್ವತಂತ್ರ ಎಂದು ಕವಿತೆ ಪ್ರಶ್ನಿಸಿದಂತಿದೆ. ಈ ಸಮಾಜ ಕುಟುಂಬದಲ್ಲಿ ಅನುಭವಿಸಿದ ಯಾತನೆಗೆ ಧ್ವನಿಯಾಗಿದೆ. ಜಾತಿ ವ್ಯವಸ್ಥೆ, ಧರ್ಮದ ವ್ಯವಸ್ಥೆ, ಸಮಾಜ, ವಿವಾಹದ ವ್ಯವಸ್ಥೆಗಳು ನಿರಂತರವಾಗಿ ನಿರ್ಬಂಧದಲ್ಲಿ ಅಮಾಯಕ ನೆಲೆಗೆ ಬಾರದೆ ಯಾವ ತಪ್ಪು ಮಾಡದೇ ಅಪಮಾನಕ್ಕೆ, ಅನುಮಾನಕ್ಕಾಗಿ ಗುರಿಯಾದ ಸಮುದಾಯದ ಸಂಕಟಗಳು ಅನುಭವಿಸಿದ ಯಾತನೆಗಳನ್ನು ಹಾಗೂ ಆ ಸಮುದಾಯದ ವಿಶೇಷತೆಯನ್ನು ಸ್ಮರಿಸುತ್ತಾ ಆ ಸಮುದಾಯದ

ಸಂಕಟಗಳಿಗೆ ಕಾವ್ಯದ ಮೂಲಕ ಸಾಂತ್ವನ ಹೇಳುವ, ಮೂಲಾಮು ಹಚ್ಚುವ, ಧ್ವನಿಯಾಗುವ ಪ್ರಯತ್ನ ಇಲ್ಲಿ ವ್ಯಕ್ತಗೊಂಡಿದೆ.

### ೪.೨. ಪ್ರೀತಿಯ ಹುಡುಕಾಟ

ಒಲವು ಕವಿತೆಯ ಜೀವಾಳ. ಪ್ರೀತಿಯನ್ನು ವ್ಯಕ್ತಪಡಿಸುವ ಆಪ್ತ ಮಾಧ್ಯಮ ಕಾವ್ಯ. ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯು ತನ್ನದೇ ಆದ ಮಹತ್ವ ಪಡೆದುಕೊಂಡಿದೆ. ಪಂಪ, ರನ್ನ, ಜನ್ನರಾದಿಯಾಗಿ ಪ್ರೀತಿಗಾಗಿ, ಹಂಬಲಿಸಿರುವುದು ಮನುಷ್ಯ ಪ್ರೀತಿಯನ್ನು ಬಿತ್ತಿದವರೆ ಆಗಿದ್ದಾರೆ. ಆದ್ದರಿಂದಲೇ ಪಂಪ ಮನುಷ್ಯ ಜಾತಿ ತಾನೊಂದೆ ವಲಂ ಎಂದು ಹೇಳಿರುವುದಕ್ಕೆ ಪ್ರೀತಿಯೇ ಕಾರಣ. ಆಧುನಿಕ ಹೊಸಗನ್ನಡ ಸಾಹಿತ್ಯದಲ್ಲಿ ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಪು.ತಿ.ನ., ಕೆ.ಎಸ್. ನರಸಿಂಹಸ್ವಾಮಿ, ಜಿ.ಪಿ. ರಾಜರತ್ನಂ, ಲಂಕೇಶ, ತೇಜಸ್ವಿ, ಸಿದ್ಧಲಿಂಗಯ್ಯ ಇನ್ನು ಮುಂತಾದ ಅನೇಕ ಕವಿಗಳು ತಮ್ಮ ಕಾವ್ಯದಲ್ಲಿ ಪ್ರೀತಿಗಾಗಿ ಹಂಬಲಿಸಿರುವುದು ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಅದರ ಮುಂದುವರಿಕೆಯ ಭಾಗದಂತೆ ಇತ್ತೀಚಿನ ಹೊಸ ತಲೆಮಾರಿನ ಕವಿಗಳಲ್ಲಿಯೂ ಪ್ರೀತಿ ಹುಡುಕಾಟ ಹಂಬಲ, ಜಪ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಪ್ರೀತಿ ಮೂಲಕವೇ ಜಗತ್ತನ್ನು ನೋಡುವ ಮತ್ತು ಜೀವಿಸುವ ಆಶಯವನ್ನು ಹೊಂದಿರುವುದು ತಮ್ಮ ಕಾವ್ಯದ ಮೂಲಕ ಸಾಕ್ಷೀಕರಿಸಿದ್ದಾರೆ. ಪ್ರೀತಿಯ ಮೂಲಕ ಪ್ರೇಯಸಿಯ ಮೂಲಕ ತಮ್ಮ ಸಂವೇದನೆಗಳನ್ನು ಕಾವ್ಯದಲ್ಲಿ ಅಭಿವ್ಯಕ್ತಿಸಲಾಗಿದೆ. ಪ್ರೀತಿಯ ಹುಡುಕಾಟದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನೆಗಳನ್ನು ವ್ಯಕ್ತಪಡಿಸುತ್ತಿರುವುದು ಈ ಕಾವ್ಯದ ಶಕ್ತಿಯಾಗಿದೆ. ಸಾಂಸ್ಕೃತಿಕ ಜವಾಬ್ದಾರಿಯನ್ನು ಪ್ರೀತಿಯ ಮೂಲಕ ಹೊಂದಿರುವುದು ಕಂಡುಬಂದಿದೆ. ಜಾತಿ, ಧರ್ಮಗಳನ್ನು ಮೀರಿದ ಮನುಷ್ಯ ಪ್ರೀತಿಗಾಗಿ, ಮನಸು ಮನಸ್ಸುಗಳ ಮಧ್ಯೆ ಇರುವ ಅಂತರ ದೂರ ಮಾಡಿ ಸೌಹಾರ್ದತೆಯ ಪ್ರೀತಿಗಾಗಿ ಹುಡುಕಾಟ ನಡೆಸುತ್ತಿರುವುದು ಇಂದಿನ ಕಾವ್ಯದ ಧ್ಯೇಯವಾಗಿದೆ.

ಇಂದಿನ ಸಮಾಜದಲ್ಲಿ ಅನೇಕ ಸಿದ್ಧಾಂತಗಳು ರೂಪುಗೊಂಡು, ಅನೇಕ ವಿಚಾರಗಳು ಬೆಳಕು ನೀಡಿ, ಜೀವಪರ ಹೋರಾಟಗಳು ನಡೆಯುತ್ತಿರುವುದು. ಪ್ರೀತಿಗಾಗಿಯೇ, ಅದು ಆಕರ್ಷಿತವಲ್ಲದ ಪ್ರೀತಿ, ಮನುಷ್ಯ ಪ್ರೀತಿಗಾಗಿ ಎಲ್ಲಾ ಸಿದ್ಧಾಂತ, ಚಿಂತನೆ, ಹೋರಾಟ, ಬರಹ, ಕೂಗು, ಸಮಾಜ ಸುಧಾರಕರ ಹಂಬಲ ಪ್ರೀತಿಗಾಗಿ ಜಾತಿ, ಧರ್ಮ, ಲಿಂಗ, ಮುಕ್ತ ಪ್ರೀತಿಗಾಗಿ. ಕಾವ್ಯ ಮೊದ ಮೊದಲು ಹುಟ್ಟುವುದೇ ಪ್ರೀತಿಯಿಂದ, ಪ್ರೀತಿಯ ಅಭಿವ್ಯಕ್ತಿಗಾಗಿ, ಎಷ್ಟೋ ಕವಿಗಳು ತಮ್ಮ ಮೊದಲ ಕವಿತೆಯ ಸಾಲು ಓ ಪ್ರೀತಿಯೇ, ಓ ಪ್ರೇಯಸಿಯೇ, ಓ ಜೀವವೇ ಎಂಬ ಸಾಲಿನಿಂದಲೇ ಬರಹ ಪ್ರಾರಂಭಿಸಿರುತ್ತಾರೆ. ಅದು ಗಟ್ಟಿಗೊಳ್ಳುತ್ತಾ ಪ್ರೀತಿಯನ್ನು ಅನುಭವಿಸುತ್ತಾ ಲೋಕ ಚಿಂತನೆಗೆ ಸಾಮಾಜಿಕ ಕಳಕಳಿಗೆ ಸಂಕಟಗಳ ಗಂಭೀರತೆಯನ್ನು ಪಡೆಯುತ್ತದೆ. ಈ ಗಂಭೀರತೆಯ ಅಂತರಾಳದಲ್ಲಿ ಪ್ರೀತಿಯ ಉಸಿರಾಟ, ಲಯ ಇದ್ದೇ ಇರುತ್ತದೆ. ಪ್ರೀತಿ ಇಲ್ಲದ ಕಾವ್ಯ ಕಾವ್ಯವಾಗಲು ಅಸಾಧ್ಯ.

'ಪ್ರೀತಿ ಯಾವ ತರದ್ದು ಅಂತ ಕೇಳಿದರೆ ಒಮ್ಮೆ ಸೂಫೀ ಸಂತ ರಮಣಿ ರಜಿಯಾಳನ್ನು ಯಾರೋ ಕೇಳಿದರಂತೆ ನೀನು ದೇವರನ್ನು ಪ್ರೀತಿಸುತ್ತೀಯಾ? ಹೌದು ಪ್ರೀತಿಸುತ್ತೇವೆ ಅವಳು ಹೇಳಿದರು. ಹಾಗಾದರೆ ಸೈತಾನನ್ನು ದ್ವೇಷಿಸುತ್ತಿವೆಯಾ? ಅದಕ್ಕೆ ಅವಳ ಕೊಟ್ಟ ಉತ್ತರ 'ನನ್ನ ಹೃದಯದಲ್ಲಿ ಪ್ರೇಮ ಎಷ್ಟು ತುಂಬಿದೆ ಎಂದರೆ ಅದರಲ್ಲಿ ಇತರರನ್ನು ದ್ವೇಷಿಸಲು ಜಾಗವೇ
ಹೃದಯದಲ್ಲಿ ಪ್ರೇಮ ಎಷ್ಟು ತುಂಬಿದೆ ಎಂದರೆ ಅದರಲ್ಲಿ ಇತರರನ್ನು ದ್ವೇಷಿಸಲು ಜಾಗವೇ
ಇಲ್ಲ' ಎಂದರಂತೆ ಅಂತ ಪ್ರೀತಿಯ ಇತ್ತೀಚಿನ ಕಾವ್ಯದಲ್ಲಿ ವ್ಯಕ್ತವಾಗುತ್ತಿದೆ. ಪ್ರೀತಿಯ ಮೂಲಕ ಜಗತ್ತನ್ನೊಂದಿಗೆ ಸಂಬಂಧ ಹೊಂದಿರುವುದು ಪ್ರೇಮದೊಂದಿಗೆ ಎಲ್ಲವನ್ನು ಕಾಣಲು ಬಯಸುವ ಕಾವ್ಯವಾಗಿದೆ. ಪ್ರೀತಿಯ ಕುರಿತಾಗಿ ಆರೀಫರ ಕವಿತೆಯ ಸಾಲುಗಳನ್ನು ಗಮನಿಸುವುದಾದರೆ,

ನಾವಿಬ್ಬರು ಪ್ರೇಮಿಗಳು
ನಮಗೆ ಪ್ರೇಮಿಸಲು ಜಾಗವಿಲ್ಲ
ನಮ್ಮನ್ನು ಜೈಲಿಗೆ ಹಾಕಿ
ದೇಶಭಕ್ತರಿಗೆ ದೇಶದ್ರೋಹಿಗಳಿಗಷ್ಟೇ ಅಲ್ಲ
ಪ್ರೇಮಿಗಳಿಗೂ ಜಾಗ ಇದೆ ಒಳಗೆ
ನಮ್ಮನ್ನು ಒಳಗೆ ಹಾಕಿ[೬]

ಪ್ರೀತಿಯ ಮಹತ್ವವನ್ನು ಪ್ರೀತಿಗಾಗಿ ನಡೆಸಿದ ಹುಡುಕಾಟವನ್ನು ಹಾಗೂ ದಕ್ಕಿದ ಪ್ರೀತಿಗೆ ಸಾಮಾಜಿಕ ಮನ್ನಣೆ ಇರದಿದ್ದಾಗ ಪ್ರೇಮಿಗಳನ್ನು ಅಪರಾಧ ಭಾವನೆಯಲ್ಲಿ ಕಾಣುವಂತಹ ಸ್ಥಿತಿಗೆ ನಮ್ಮನ್ನು ಜೈಲಿಗೆ ಹಾಕಿ ಎಂದು ಕವಿ ನೋವಿನಿಂದ ನುಡಿದಿರುವುದು ಈ ಕವಿತೆಯಲ್ಲಿ ಧ್ವನಿತವಾಗಿದೆ. ಪ್ರೀತಿಗೆ ಅಡ್ಡವಾಗಿರುವ ಅಮಾನವೀಯ ಅಂಶಗಳ ಜಾತಿ ಧರ್ಮಗಳನ್ನು ಮೀರಿ ಮನುಷ್ಯ ಪ್ರೀತಿ ಹುಟ್ಟಿದರೂ ಅದನ್ನು ಸಹಿಸದ ಮನಸ್ಸುಗಳು ಧಿಕ್ಕಾರ ರೂಪದಲ್ಲಿ ಹೇಳಿದಂತಿದೆ. ಈ ಪ್ರಪಂಚದಲ್ಲಿ ಪ್ರೀತಿ ಕಾಣೆಯಾಗಿದೆ. ಪ್ರೀತಿಗೆ ಬೆಲೆ ಇಲ್ಲ. ಪ್ರೀತಿಯನ್ನು ಅನುಮಾನದ ರೀತಿಯಲ್ಲಿ ನೋಡುವ ದುಸ್ಥಿತಿಯನ್ನು ಕಂಡು ಈ ಉಸಿರುಗಟ್ಟುವ ಬಂಧನಕ್ಕಿಂತ ಜೈಲಿಗೆ ಹಾಕಿ ನಾವು ಅಲ್ಲಿ ಪ್ರೀತಿಸುತ್ತೇವೆ. ಅಲ್ಲಿ ಪ್ರೀತಿಯ ದೀಪ ಹಚ್ಚುತ್ತೇವೆ ಎಂಬ ಮಹತ್ತಾದ ಆಶಯವನ್ನು ಈ ಕವಿತೆ ಅಭಿವ್ಯಕ್ತಿಸಿದೆ. ಇಂದು ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕೆ ಅವಕಾಶವಿರದ ಸಂದರ್ಭದಲ್ಲಿ ಉಸಿರಾಡುವ ಎದೆಗುಂಡಿಗೆಗೆ ಗುಂಡು ಹೊಡೆದು ಸಾಯಿಸುವ ಕರಾಳ ದುರಂತ ಸ್ಥಿತಿಗೆ ಇಂದಿನ ಕಾವ್ಯ ಮತ್ತು ಪ್ರೀತಿಯೊಂದಿಗೂ ಕೂಗನ್ನು ಕೂಗಿ ಮುಖಾಮುಖಿಯಾಗಿ ನಿಂತಿರುವುದು ಇಂದಿನ ಕಾವ್ಯದ ಶಕ್ತಿಯಾಗಿದೆ. ಕವಿ ಆರೀಫರಾಜರು ಪ್ರೀತಿಯ ಮೂಲಕ ತಮ್ಮ ಸೈದ್ಧಾಂತಿಕ ನಿಲುವನ್ನು, ಸಮಾಜವನ್ನು ನೋಡುವ ಹಾಗೂ ಮನುಷ್ಯ ಮನುಷ್ಯರಲ್ಲಿ ಪ್ರೀತಿ ನಾಶವಾದಕ್ಕೆ ನೋವಿನಿಂದಲೇ ಮತ್ತು ಆ ಮನಸ್ಸುಗಳಿಗೆ ಪ್ರೀತಿ ದೀಪ ಹಚ್ಚಲು ಹಂಬಲಿಸುತ್ತಿರುವುದು ಪ್ರೀತಿಯ ಸೌಹಾರ್ದತೆಯ ಬೆಳಕು ಕಾಣಲು ಬಯಸಿರುವುದು ಅವರ ಕಾವ್ಯದ ಮೂಲಕ ಕಾಣಬಹುದು.

ಸುಧಾರಕರ ತಾತ್ವಿಕ ಮಾತುಗಳು, ಹೋರಾಟಗಳು ಪ್ರೀತಿಯ ಮೂಲ ನೆಲೆಯಲ್ಲಿ ನಿಂತಿರುವುದು ಕಂಡುಬಂದಿದೆ. ಅದು ಮನುಷ್ಯ ಮನುಷ್ಯದಲ್ಲಿ ಕಾಣಿಸುವ ಮನುಷ್ಯತ್ವದ ಪ್ರೀತಿ. ಈ ಪ್ರೀತಿಯ ಮೂಲಕ ಹೆಸರನ್ನು ಬಿತ್ತುವ ಹಾಗೂ ಹುಡುಕುವ ಕಾರ್ಯ ಮುಂದುವರಿದಂತೆ, ತನ್ನ ನಿರಂತರತೆಯನ್ನು ಇಂದಿನ ಕಾವ್ಯ ಮುಂದುವರೆಸಿಕೊಂಡಿದೆ. ಅದರೊಂದಿಗೆ ಸಾಮಾಜಿಕ ಜವಾಬ್ದಾರಿಯನ್ನು ಹೊತ್ತು ಪ್ರೀತಿಯ ದೀಪ ಹಿಡಿದು ಮುಂದುವರೆಯುತ್ತಿದೆ. ಬುದ್ಧ, ಯೇಸು, ಪೈಗಂಬರ್, ಬಸವ, ಗಾಂಧಿ, ಅಂಬೇಡ್ಕರ್ ಬಯಸಿದ ಪ್ರೀತಿಯನ್ನು ಅಂತಹ ಪ್ರೀತಿಗಾಗಿ ಹುಡುಕಾಟ ನಡೆಸುತ್ತಿರುವುದು ಆ ಪ್ರೀತಿಯಲ್ಲಿ ಜೀವನದ ಚೈತನ್ಯ ತುಂಬಿಕೊಳ್ಳುವ ಆಶಯವನ್ನು ಇಂದಿನ ಕಾವ್ಯದಲ್ಲಿ ಕಾಣಿಸುತ್ತದೆ. ತನ್ನ ಪ್ರೇಯಸಿಯ ಮೂಲಕ, ಪ್ರಿಯಕರನ ಮೂಲಕ ಸಂಭಾಷಣೆಗೆ ಇಳಿದು ತಮಗೆ ಕಾಣುವ ಲೋಕದ ಮಹತ್ವ, ಘನತೆಯನ್ನು ಅರಿತು ಅದನ್ನು ಸಾಕ್ಷೀಕರಿಸಲು ನಡೆಸುವ ಪ್ರಯತ್ನ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಕೊಂಡಿದೆ. ಪ್ರೀತಿಯ ಕಣ್ಣಿಂದ ಕಾಣುವ ಲೋಕವನ್ನು ಈ ಸಮಾಜದಲ್ಲಿ ಅಂಧರ ಮುಂದೆ ಬಿತ್ತಿ ಅವರ ಅಂಧತ್ವ ದೂರ ಮಾಡಿ ಪ್ರೀತಿ ತೋರುವ ಪ್ರೀತಿಯ ಬೆಳಕನ್ನು ಕಾಣಿಸುವ ಪ್ರಯತ್ನ ಕಂಡುಬಂದಿದೆ. ಬುದ್ಧ ಬಯಸಿದ ಪ್ರೀತಿಯನ್ನು, ಪ್ರೇಮವನ್ನು ಶಾಂತಿಯನ್ನು ಪುನಃ ಉಚ್ಚರಿಸುವ ರೀತಿಯಲ್ಲಿ ಹೊಸತನದೊಂದಿಗೆ ಪ್ರೇಮಿಗಳು ತಮ್ಮ ಕಣ್ಣಂಚಲ್ಲಿ ಕಾಣುವುದನ್ನು ಈ ಲೋಕ ಕಾಣುತ್ತಿಲ್ಲವಲ್ಲ ಎಂಬ ಬೇಸರದ ಮನಸ್ಸಿನಿಂದಲೇ ಕವಿ ಹನುಮಂತಯ್ಯರವರ ಕವಿತೆಯ ಸಾಲುಗಳನ್ನು ನೋಡಿದಾಗ

ಬಾ ಗೆಳತಿ

ಚೂರಾದ ಮುಖಗಳನು ಆಯೋಣ
ಎಲ್ಲಾದರೂ
ನಗು ಮೆತ್ತಿಕೊಂಡಿದ್ದರೆ
ನಮ್ಮ ತುಟಿಗಳಿಗೆ ತುಂಬಿಕೊಳ್ಳೋಣ
ಎಲ್ಲಾದರೂ
ಅಳ ಅಂಟಿಕೊಂಡಿದ್ದರೆ
ನಮ್ಮ ಕಣ್ಣುಗಳಿಗೆ ಬಸಿದುಕೊಳ್ಳೋಣ
ಬಾ ಗೆಳತಿ
ಚೂರಾದ ಎದೆಗಳನು ಆಯೋಣ
ಎಲ್ಲಾದರೂ ಹದವಿದ್ದರೆ
ಅಲ್ಲಿ ಬೀಜಗಳಾಗಿ ಮೊಳೆಯೋಣ[೭]

ಕವಿ ತನ್ನ ಸಂಗಾತಿಯನ್ನು ಪ್ರೀತಿಯ ಮೂಲಕ ಕರೆದು ಪ್ರೀತಿಯಿಂದ ವಂಚಿತವಾದ ಮುಖಗಳು ದ್ವೇಷದ ಕೆನ್ನಾಲಿಗೆಗೆ ತುತ್ತಾಗಿ ಚೂರು ಚೂರಾಗಿ ಬಿದ್ದ ಕಣ್ಣೀಡುವುದು ನೋಡಲಾರದೆ

ಪ್ರೀತಿಯ ಮುಖಗಳನ್ನು ಆಯೋಣ ಆ ಮುಖಗಳಿಗೆ ನಮ್ಮಲ್ಲಿರುವ ಪ್ರೀತಿಯ ಮೂಲಾಮು ಹಚ್ಚೋಣ ಮತ್ತೆ ಆ ಮುಖದಲ್ಲಿ ಪ್ರೀತಿಯ ನಗು ತಲುಪಲು ಪ್ರಯತ್ನಿಸೋಣ ಎಂದು ಕವಿ ಕರೆಯುವುದು ತುಂಬಾ ಸೊಗಸಾಗಿದೆ. ಕೆಲವೊಂದು ನಗುವ ಮುಖಗಳಿದ್ದರೆ ಅಂತಹ ಮುಖಗಳನ್ನು ನಮ್ಮ ತುಟಿಗಳಿಗೆ ಮೆತ್ತಿಕೊಳ್ಳೋಣ. ಅದರಿಂದ ಪ್ರೀತಿ ಕೊಡುಕೊಳ್ಳುವಿಕೆಯಲ್ಲಿ ಮತ್ತಷ್ಟು ನಮ್ಮ ಪ್ರೀತಿ ಗಟ್ಟಿಗೊಳ್ಳುತ್ತದೆ ಎಂಬ ಆಶಯದ ಭಾವನೆ ವ್ಯಕ್ತಪಡಿಸುತ್ತಾ ಚೂರು ಚೂರಾದ ಎದೆಯೊಳಗೆ ಅಂಟಿಕೊಂಡಿರುವ ದುಃಖವನ್ನು, ಸಂಕಟವನ್ನು ಅರಿತುಕೊಂಡು ಸಾಂತ್ವನ ಹೇಳೋಣ. ನಾವು ಕಾಣುವ ಪ್ರೀತಿ ಸವಿಯನ್ನು ಅವರಿಗೂ ತಿಳಿಸೋಣ. ಅದರಂತೆ ಅವರನ್ನು ನಡೆಸಲು ಪ್ರೇರೇಪಿಸೋಣ. ಆ ಎದೆಯಲ್ಲಿ ನೋವು ಕರಗಿಸಲು ನಾವು ಕೈ ಜೋಡಿಸೋಣ, ಬಾ ಗೆಳತಿ ಚೂರಾದ ಮುಖಗಳ ಆಯೋಣ ಎಂದು ಪ್ರೀತಿಯಿಂದ ಈ ಲೋಕದ ಎಲ್ಲಾ ಮುಕ್ತ, ಸೌಹಾರ್ದಯುತ ಮನಸ್ಸುಗಳನ್ನು ಕರೆದಂತಿದೆ. ಬಾ ಕೈಜೋಡಿಸು ಎಂದು ಧ್ಯೇಯ ವಾಕ್ಯವನ್ನು ಕಾವ್ಯ ನೀಡಿದಂತಿದೆ. ಪ್ರೀತಿಯನ್ನು ಕಾಣದೆ ಬರುಡಾದ ಎದೆಯೊಳಗೆ, ನೆಲದೊಳಗೆ ಎಲ್ಲದರೂ ಹದವಿದ್ದರೆ ಬೀಜವಾಗಿ ಈ ಭೂಮಿಗೆ ಇಳಿಯೋಣ. ಅಲ್ಲಿ ಇದ್ದ ಚೂರು ತೇವದಿಂದಲೇ ಮೊಳಕೆಯಾಗಿ, ಬೀಜವಾಗಿ, ಸಸಿಯಾಗಿ, ಚಿಗುರೋಣ, ಚಿಗುರಿ ಮರವಾಗಿ ಪ್ರೀತಿಯ ಗಾಳಿ, ನೆರಳು, ಫಲ, ಹೂ ನೀಡಿ ಅಂತಹ ಗಾಳಿ, ನೆರಳು, ಫಳ, ಹೂ ನೀಡಿ ಅಂತಹ ಗಾಳಿ ಕುಡಿದ ಪ್ರತಿಯೊಂದು ಎದೆಯಲ್ಲಿ ಪ್ರೀತಿಯನ್ನು ಹುಟ್ಟಿಸೋಣ. ನಮ್ಮ ನೆರಳನ್ನು ಸವಿದ ಪ್ರತಿಯೊಬ್ಬರನ್ನು ಮನುಷ್ಯ ಪ್ರೀತಿಯಿಂದ ಬದುಕಲು ನೆರವಾಗೋಣ. ನಮ್ಮ ಪ್ರೀತಿಯ ಹೂ ಹಣ್ಣ ತಿಂದ ಮನುಷ್ಯತ್ವದ ನೆಲೆಯಲ್ಲಿ ಜೀವಿಸಲು ಸ್ಫೂರ್ತಿ ತರೋಣ. ಬಾ ಗೆಳತಿ, ಕತ್ತಲಾದ ಈ ಸಮಾಜದಲ್ಲಿ ನಮ್ಮ ಪ್ರೀತಿಯ ದೀಪ ಹಚ್ಚೋಣ, ಆ ದೀಪದ ಬೆಳಕಲ್ಲಿ ಕಲ್ಮಶ ತುಂಬಿದ ಎದೆಯೊಳಗೆ ಪ್ರೀತಿಯ ಬೆಳಕನ್ನು ಆಯಿಸೋಣ ಎಂಬ ಆಶಯವನ್ನು ಕವಿತೆ ಹೊಂದಿರುವುದು ಕಂಡುಬಂದಿದೆ.

ಇತ್ತೀಚಿನ ಕನ್ನಡ ಕಾವ್ಯದ ಕವಿಗಳು ಬಹುತೇಕ ಯುವಕರಾಗಿರುವುದರಿಂದ ಸಹಜವಾಗಿ ಯೌವನಾವಸ್ಥೆಯ ಪ್ರೀತಿಯ ಬಯಕೆಯಲ್ಲಿ ಬರಹ ಪ್ರಾರಂಭಿಸಿದರೂ ಈ ಲೋಕದ ಅನುಭವಕ್ಕೆ ಅಂತರಂಗದ ಒಳಧ್ವನಿಗೆ ಗಂಭೀರ ಸ್ವರೂಪ ತಾಳಿರುವುದು ಕಂಡುಬಂದಿದೆ. ಆ ಪ್ರೀತಿಯ ಮೂಲಕ ಲೋಕದೃಷ್ಟಿಯನ್ನು ಸಾಮಾಜಿಕ ಜವಾಬ್ದಾರಿ ಮತ್ತು ಕಳಕಳಿಯನ್ನು ಒಂದು ಕ್ರಾಂತಿ ರೂಪದಲ್ಲಿ ಅಭಿವ್ಯಕ್ತಿಸುವುದಾಗಿದೆ. ಪ್ರೀತಿ ಮತ್ತು ಕ್ರಾಂತಿಯನ್ನು ಒಟ್ಟೊಟ್ಟಿಗೆ ತೆಗೆದುಕೊಂಡು ಪ್ರೀತಿಯ ಮೂಲಕ ಕ್ರಾಂತಿಯನ್ನು ಕಾಣುವ, ಕ್ರಾಂತಿಯಲ್ಲಿ ಪ್ರೀತಿಯನ್ನು ಬಿತ್ತುವ ಆಶಯ ಇತ್ತೀಚಿನ ಕಾವ್ಯದ್ದಾಗಿದೆ. ಕನ್ನಡ ಕಾವ್ಯ ಹೊಸ ಅವಸ್ಥೆಗೆ ದಾಟಬೇಕಾಗಿರುವ ಈ ಹೊತ್ತಲ್ಲಿ ಧರ್ಮ ದೇಶ ಭಾಷೆ ಮೀರಿದ ಪ್ರೀತಿಯನ್ನು ಕಾಣುವುದು ಮತ್ತು ಆ ಪ್ರೀತಿಯನ್ನು ಜೀವಂತವಾಗಿಸುವುದು ಗಮನಿಸಬಹುದಾಗಿದೆ. ದೇಶ ದೇಶಗಳ ನಡುವೆ ರಾಷ್ಟ್ರ ಪ್ರೇಮದ ಹೆಸರಲ್ಲಿ ಕೆಲವು ಸಮುದಾಯದವರನ್ನು ಅನುಮಾನಿಸುವ ಮನಸುಗಳಿಗೆ ನಿಜವಾದ ಪ್ರೇಮ,

ರಾಷ್ಟ್ರಪ್ರೇಮ ಯಾವುದು ಎನ್ನುವುದನ್ನು ಜೊತೆಗೆ ಅತಿಯಾದ ಭಾಷೆ ಅಂಧತೆಯ ಸ್ಥಿರಸ್ಥಿತಿಯ ಪ್ರೇಮವನ್ನು ಮುರಿದು ಒಂದು ಭಾಷೆ ಮತ್ತೊಂದು ಪಕ್ಕದ ಭಾಷೆಯೊಂದಿಗೆ ಪ್ರೀತಿಯನ್ನು ಹೊಂದುವುದನ್ನು ಸಹ ಕಾವ್ಯ ಕಲಿಸುತ್ತಿದೆ.

ಪ್ರಸ್ತುತ ಸಂದರ್ಭದಲ್ಲಿ ಭಾಷಿಕ ಚರ್ಚೆ ತುಂಬಾ ಅತ್ಯವಶ್ಯಕವಾಗಿ ಕೆಲವು ಸಂಘಟನೆಗಳು ಅದನ್ನು ಮೈಮೇಲೆ ಎಳೆದುಕೊಂಡು ತಾವೇ ಅದರ ವಾರಸುದಾರರ ಎಂಬ ಸ್ವಯಂಘೋಷಿತ ರಕ್ಷಕರಾಗಿ ಬೀದಿಗಿಳಿದು ಹೋರಾಡುತ್ತಿದ್ದಾರೆ. ಇದು ತಪ್ಪು ಅಂತ ಹೇಳಲಾರೆ ಆದರೆ ಇದು ಒಂದು ರೀತಿಯ ಅಪಾಯಕಾರಿ ಒಂದು ಭಾಷೆ. ಇನ್ನೊಂದು ಭಾಷೆಯೊಂದಿಗೆ ಪ್ರೀತಿಪೂರ್ವಕ ಗೌರವ ಪೂರಕ ಭಾವನೆ ಹೊಂದಬೇಕಾಗಿದೆ. ಇಂತಹ ಅಂಶವನ್ನು ಇತ್ತೀಚಿನ ಕನ್ನಡ ಕಾವ್ಯ ಕಲಿಸುತ್ತಿದೆ. ಭಾಷಿಕ ಪ್ರೇಮವನ್ನು ಒಂದು ಮೂಲ ತಾತ್ವಿಕವೆಂಬಂತೆ ಇಂದಿನ ಕಾವ್ಯ ಅಭಿವ್ಯಕ್ತಗೊಳ್ಳುತ್ತಿದೆ. ಭಾಷಿಕ ಪ್ರೇಮ ಎಂದ ಕೂಡಲೇ ಒಂದೇ ಸ್ಥಿರವಾದ ಭಾಷೆ ಅಲ್ಲಿ ಬಹುಭಾಷೆ, ಬಹುಸಂಸ್ಕೃತಿಯನ್ನು ಗೌರವಿಸುವ ಮಾನ್ಯ ಮಾಡುವ ಬಗೆಯನ್ನು ಕಾಣಬಹುದು. ಒಂದು ಭಾಷೆ ಕೇವಲ ಭಾಷೆಯಾಗಿರದೆ ಆ ಭಾಷೆಯನ್ನು ಮಾತನಾಡುವ ಜನರ ಜೀವನ ಕ್ರಮ, ಸಂಸ್ಕೃತಿ, ಆಚಾರ, ವಿಚಾರ ಎಲ್ಲವೂ ಆಗಿರುತ್ತದೆ. ಆದ್ದರಿಂದ ಒಂದು ಭಾಷೆ ಮತ್ತೊಂದು ಭಾಷೆಗೆ ಪರಸ್ಪರ ಕೊಡುಕೊಳ್ಳುವಿಕೆಯಿಂದ ಸಾಂಸ್ಕೃತಿಕ ಅನನ್ಯತೆ, ತಿಳಿಯುತ್ತದೆ. ಪ್ರೀತಿಯಲ್ಲಿ ಸಾಮಾಜಿಕ ದೃಷ್ಟಿ, ಲೋಕದೃಷ್ಟಿಯ ಅಭಿವ್ಯಕ್ತಿಯನ್ನು ಇತ್ತೀಚಿನ ಕನ್ನಡ ಕಾವ್ಯದಲ್ಲಿ ಸೊಗಸಾಗಿ ಮೂಡಿಬಂದಿದೆ.

ಇಂದಿನ ಕಾವ್ಯದಲ್ಲಿ ಮನುಷ್ಯ ಮನುಷ್ಯನ್ನು ಪ್ರೀತಿಸುವುದು. ಆ ಪ್ರೀತಿಯಲ್ಲಿ ವಿಶ್ವಮಾನವ ಸಂದೇಶವನ್ನು ಕಾಣಲು ಬಯಸಿರುವುದು ಕಂಡುಬಂದಿದೆ. ಹಾಗೇ ವಾಸ್ತವಸ್ಥಿತಿ ಅದರ ಆಶಯಕ್ಕೆ ವಿರುದ್ಧವಾಗಿರುವಾಗ, ಪ್ರೀತಿಯ ಬೀಜ ಬಿತ್ತಲು, ಪ್ರೀತಿಗಾಗಿ ಹುಡುಕಾಟ ನಡೆಸುತ್ತಿರುವುದು ಗಮನಿಸಬಹುದಾದ ಸಂಗತಿ. ಪ್ರೀತಿಯ ಕಣ್ಣರೆಪ್ಪೆಯಲ್ಲಿ ಕನಸುಗಳು ಕುಣಿಯುವವರನ್ನು ಇಂದಿನ ಕಾವ್ಯ ಸಾಕ್ಷೀಕರಿಸುತ್ತಿರುವುದು ವಿಭಾ ಅವರ ಕವಿತೆಯಲ್ಲಿ ಗಮನಿಸುವುದಾದರೆ,

> ಪ್ರಿಯಾ ನಾನು
> ಮುತ್ತಿನ ಮಳೆ ಸುರಿಸಬೇಕಿತ್ತು
> ಆದರೆ
> ಬೊಗಸೆ ತುಂಬ ಕಣ್ಣೀರು ಕೊಟ್ಟ
> ಹೃದಯ ತುಂಬುವಷ್ಟು ಪ್ರೀತಿ ಕೊಡಬೇಕಿತ್ತು
> ಆದರೆ
> ಎದೆಯ ಭಾರವಾಗುವಷ್ಟು ನೋವು ಹೇಳಿಕೊಂಡೆ

ಆದರೂ ನೀನು ಹುಚ್ಚ
ನನ್ನಂಥವಳ ಪ್ರೀತಿಸಿ ಬಿಟ್ಟೆ

ಪ್ರೀತಿಯ ಮೂಲಕ ಜೀವನದ ಸಾರ್ಥಕತೆಯನ್ನು ಕಾಣಬಯಿಸುವಲ್ಲಿ ಕಣ್ಣೀರೆ ನೀಡಿದ ಈ ವ್ಯವಸ್ಥೆಗೆ ಧಿಕ್ಕಾರ ಹೇಳುವ ರೀತಿಯಲ್ಲಿ ವ್ಯಕ್ತಪಡಿಸಿರುವುದು ಗಮನಿಸಬಹುದು. ಹೃದಯ ತುಂಬಾ ಪ್ರೀತಿಯನ್ನು ನೀಡಿ ಆ ಪ್ರೀತಿಯಲ್ಲೇ ಸಂಸಾರದ ನೌಕೆಯನ್ನು, ಜೀವನವನ್ನು ಸಾಗಿಸಬೇಕೆಂಬ ಮಹಾದಾಸೆಗೆ ಭಂಗವಾದಾಗ ಕಣ್ಣೀರೆ ಗಡಿಯಾಗಿದ್ದ ಎಂಬ ವಿಷಾದತೆಯಲ್ಲಿ ನುಡಿದಿರುವುದು ವ್ಯಕ್ತಗೊಂಡಿದೆ. ತನ್ನ ನೋವು, ಸಂಕಟಗಳನ್ನು ಇಂಚು ಇಂಚು ಹೇಳಿದರು. ಅದನ್ಯಾವುದನ್ನು ಗಮನಿಸಿದೆ ತನ್ನಂಥ ಹುಚ್ಚನ್ನು ನೆಚ್ಚಿ ಪ್ರೀತಿಸಿದ ಪ್ರೀತಿಗೆ ಅಚ್ಚರಿ ವ್ಯಕ್ತಪಡಿಸಿರುವುದು ಕಂಡುಬಂದಿದೆ. ಕೊನೆಗೆ ಪ್ರೀತಿಗೆ ಯಾವುದು ಮುಖ್ಯವಲ್ಲ ಅದನ್ನು ತನ್ನ ಹೃದಯವಂತಿಕೆಯನ್ನು ಮಾತ್ರ ಬಯಸುವುದು ಎಂಬುದನ್ನು ಸಾಬೀತುಪಡಿಸಿದೆ. ಇಂಥ ಮನಸ್ಥಿತಿ ಎಲ್ಲಾ ಮನಸ್ಸುಗಳದ್ದಾಗಲಿ, ಆಗ ಕಣ್ಣೀರಿಗೆ ಜಾಗವಿರುವುದಿಲ್ಲ. ಎಲ್ಲಾ ಕಡೆ ಪ್ರೀತಿಯ ಸಾರ್ವಭೌಮತ್ವ ಬೆಳಕು ಕಾಣಬಹುದು ಎಂಬ ಮಹಾದಾಸೆಯ ಈ ಕವಿತೆಯ ಮೂಲಕ ಕವಯತ್ರಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

"ಸಮುದಾಯದ ತಬ್ಬಲಿತನ, ಆತಂಕ, ಆಕಾಂಕ್ಷೆ, ದುರಂತಗಳ ಮನುಕುಲ ಕಥನ, ಕನ್ನಡ ಸಾಹಿತ್ಯದಲ್ಲಿ ವಿಭಿನ್ನ ಧ್ವನಿ, ಕನ್ನಡ ಕಾವ್ಯಕ್ಕೆ ಒಂದು ವಿಭಿನ್ನವಾದ ಮಾದರಿಯ ರೂಪ ಸೃಷ್ಟಿಸಿಕೊಂಡಿದ್ದ ವ್ಯಕ್ತಿ ವಿಭಿನ್ನ ಧ್ವನಿ, ಕನ್ನಡ ಕಾವ್ಯಕ್ಕೆ ಒಂದು ವಿಭಿನ್ನವಾದ ಮಾದರಿಯ ರೂಪ ಸೃಷ್ಟಿಸಿಕೊಂಡಿದ್ದ ವ್ಯಕ್ತಿ ವಿಶಿಷ್ಟತೆಯ ಪ್ರಾಮುಖ್ಯತೆಯಲ್ಲಿ ಅಭಿವ್ಯಕ್ತಿ ಮಾದರಿಗಳನ್ನು ರೂಪಿಸಿಕೊಳ್ಳುತ್ತಿದ್ದ ಕನ್ನಡ ಕಾವ್ಯ ಪರಂಪರೆಯ ಧ್ವನಿಗಿಂತ ಭಿನ್ನವಾದ ಧ್ವನಿಯಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ".[೯]

ಕವಿಯಾದವನು ತನ್ನತನದ ಆತಂಕ ಆಕಾಂಕ್ಷೆಯನ್ನು ಸಮುದಾಯದ ಧ್ವನಿಯಾಗಿ ಅಭಿವ್ಯಕ್ತಿಸುವುದು ಕಂಡುಬಂದಿದೆ. ಒಬ್ಬ ಕವಿ ತನ್ನ ಸಂಕಟವನ್ನು ಸಮಾಜದ ಸಂಕಟೆಂಬಂತೆ. ಸಮಾಜದ ಸಂಕಟವನ್ನು ತನ್ನ ಸಂಕಟವೆಂಬಂತೆ ಅಭಿವ್ಯಕ್ತಿಸಿದಾಗ ಅದು ಜೀವಂತ ಸಾಮಾಜಿಕ, ಸಾಹಿತ್ಯ, ಬರಹವಾಗಿ ಉಳಿಯುತ್ತದೆ. ಇತ್ತೀಚೆಗೆ ಮಹಿಳಾ ಕಾವ್ಯ ಒಂದು ಜೀವಸತ್ವದೊಂದಿಗೆ ತಾಯಿತನದ ಕರುಣೆಯೊಂದಿಗೆ ಹೊಸ ಸಂವೇದನೆಯನ್ನು ಹುಡುಕುತ್ತಿರುವುದು ಕಂಡುಬಂದಿದೆ. ಎಲ್ಲವನ್ನು ಪ್ರೀತಿಯ ಮೂಲಕ ನೋಡುವ ಕ್ರಮ ಈ ಮಹಿಳಾ ಸಾಹಿತ್ಯದ್ದಾಗಿದೆ. ವ್ಯಕ್ತಿ ತಾನು ಕಳೆದುಕೊಂಡ ಪ್ರೀತಿ, ಸುಖ, ಸಂಪತ್ತನ್ನು ಸಾಹಿತ್ಯ ಪ್ರೇಮದಲ್ಲಿ ಹುಡುಕಿ ಹುಡುಕಿ ಪಡೆದಂತಿದೆ. ಕಳೆದ ದಶಕದ ಉತ್ತರ ಕರ್ನಾಟಕದ ದಕ್ಷಿಣ ಕರ್ನಾಟಕದವರೂ ಬಹುತೇಕ ಎಳೆಯ ಬರಹಗಾರರೆಲ್ಲ ತಮ್ಮ ಕಾಗದದ ದೋಣಿಗಳ ಮೂಲಕ ಜೋಡಿಸಿದ ಮಮತೆಯ ಕೊಂಡಿಯಂತೆ ವ್ಯಕ್ತಿಗೊಂಡಿದೆ. ಕಳೆದುಕೊಂಡ ಮೌಲ್ಯವೊಂದರ ಹುಡುಕಾಟ. ಆಳವಾದ ನೋವು. ಇತ್ತೀಚಿನ

ಕನ್ನಡ ಕಾವ್ಯ ಪ್ರೇಮದ ಮುಖ್ಯ ಧ್ವನಿಯಾಗಿದೆ. ಕವಿತೆಯಲ್ಲಿ ವ್ಯಕ್ತಗೊಳ್ಳುವಂತೆ ಹಳೆಯ ಬಟ್ಟೆಯ ಗಂಟು ತೆಗೆದು ಅದರೊಳಗಿಂದ ಬಾಳ ಬಟ್ಟೆಯ ಒಂದೊಂದೇ ನೆನಪುಗಳು ಪದರಗಳನ್ನು ಹೊಸದಾಗಿ ಸೋಕುವ ಕ್ಷಣದ ಚಿತ್ರಣಗಳು ಮತ್ತು ತಾವು ಕನಸಕಟ್ಟ ಜೀವ ನೀಡಿ ಹೊಸದೊಂದು ಲೋಕಸೃಷ್ಟಿಯಲ್ಲಿ ಬೀಗುವಾಗ, ಪ್ರಭುತ್ವದ ಬಲದಿಂದ ಆ ಬೆಳಕು ಕಾಣದಂತಾದಾಗ ಕಣ್ಣೀರು ಇಡುತ್ತ ಪ್ರೀತಿಗಾಗಿ ಹಂಬಲಿಸುವುದು ತನ್ನ ಲೋಕವನ್ನು ಜೀವಂತವಾಗಿರಿಸಿಕೊಳ್ಳಲು ಹಂಬಲಿಸುವ ಕಾವ್ಯಾಭಿವ್ಯಕ್ತಿಯ ಶಕ್ತಿಯುತವಾಗಿ ಮೂಡಿಬಂದಿದೆ.

ರಾಷ್ಟ್ರ, ಭಾಷೆ, ನೆಲ, ಜಲ, ಸಂಸ್ಕೃತಿ, ತನ್ನತನದ ಅಭಿವ್ಯಕ್ತಿ ಸಂಗಾತಿ, ಬಾಳು, ಬದುಕು, ಕುಟುಂಬ, ಉದ್ಯೋಗ, ಈ ಎಲ್ಲದರಲ್ಲೂ ಒಂದು ಬಗೆಯ ಆಪ್ತತೆತೆಯ ಪ್ರೀತಿಯ ಹುಡುಕಾಟ ಹಾಗೂ ಪ್ರೀತಿಯಿಂದಲೇ ಮನುಷ್ಯ ಸಂಬಂಧಗಳನ್ನು ಬೆಸೆದುಕೊಳ್ಳಲು ಸಹಕಾರಿಯಾಗುವಂತೆ ಆಶಯ ಹೊಂದಿವೆ. ರಾಷ್ಟ್ರೀಯತೆಯಲ್ಲಿ ಪ್ರೀತಿಯನ್ನು ತುಂಬಿ ಬೇರೊಂದು ರಾಷ್ಟ್ರ ಗೌರವಿಸುವವರೊಂದಿಗೆ ತನ್ನ ನೆಲದ ರಾಷ್ಟ್ರವನ್ನು ಪ್ರೀತಿಸುವ ಬಗ್ಗೆ ಮೌಲ್ಯಾಯುತವಾಗಿ ವ್ಯಕ್ತಪಡಿಸಿದೆ.

### ೪.೩. ಮನುಷ್ಯತ್ವದ ತುಡಿತ

ಕಾವ್ಯ ಮಾನವನ ಅಂತರಂಗಕ್ಕೆ ಸಂಬಂಧಪಟ್ಟದ್ದು. ದೇಶ ಧರ್ಮ, ಜಾತಿ, ಕುಲ, ಪಂಥ, ಭಾಷೆ ಈ ಎಲ್ಲವನ್ನು ಮೀರಿ ನಿಲ್ಲುವಂಥದ್ದು ಕಾವ್ಯ. ಕಾವ್ಯ ಕೇವಲ ಅಕ್ಷರ, ಪದ, ಲಯ, ಪ್ರತಿಮೆಗಳು ಮಾತ್ರ ಒಳಗೊಂಡಿರದೆ ಅದು ಮಾನವ ಬದುಕಬೇಕಾದ ದಾರಿಯನ್ನು, ಬದುಕುತ್ತಿರುವ ಬಗೆಯನ್ನು ಸಹ ಹೇಳುತ್ತದೆ. ಮಾನವನ ಅಂತರಂಗದ ಅತ್ಯಂತ ಪ್ರಮುಖ ಅಭಿವ್ಯಕ್ತಿಯಿಂದ ಕಾವ್ಯ ಎಲ್ಲ ಕಾಲದಲ್ಲೂ ರಚಿತವಾಗುತ್ತಿರುತ್ತದೆ. ಜೊತೆಗೆ ಮೌಲ್ಯಗಳನ್ನು, ತತ್ವಗಳನ್ನು ಬೋಧಿಸುತ್ತಿರುತ್ತದೆ. ಬದುಕು ಹೇಗೆ ಬದಲಾವಣೆಯನ್ನು ಹೊಂದುತ್ತ ಸಾಗುತ್ತಿರುತ್ತದೆಯೋ ಹಾಗೇ ಕಾವ್ಯವು ಬದಲಾವಣೆ ಹೊಂದುತ್ತಾ ಸಾಗುತ್ತಿರುತ್ತದೆ. ಕಾಲಮಾನದ ಕನ್ನಡಿಯಾಗಿ, ಪ್ರೀತಿ, ಸಿದ್ಧಾಂತ, ತಾತ್ವಿಕತೆಯ ಜೊತೆ ಜೊತೆಯಲ್ಲೇ ಹಸಿವು ಬಡತನ, ಏಕಾಂಗಿತನ, ಅಪಮಾನ, ಅಸಹಾಯಕತೆಯನ್ನು ಸಹ ಧ್ವನಿಸುತ್ತದೆ. ನೋವುಂಡವರ ಎದೆಯಲ್ಲಿ ಧೈರ್ಯ ತುಂಬುವ, ಅಪಮಾನ ಎದುರಿಸಿದವರ ಗುಂಡಿಗೆಯಲ್ಲಿ ಪ್ರತಿಭಟಿಸಿ ಹೋರಾಡುವ ಮನೋಧರ್ಮವನ್ನು ತುಂಬುತ್ತದೆ. ಪ್ರೀತಿ, ಪ್ರೇಮ, ಸ್ನೇಹದಿಂದ ವಂಚಿತರಾದವರಿಗೂ ಪ್ರೀತಿಯ ಧಾರೆ ಎರೆಯುತ್ತದೆ. ಹಸಿದವರ ಹೊಟ್ಟೆ ತುಂಬಿಸಲು ದಾರಿ ಮಾಡಿಕೊಡುತ್ತದೆ ಕಾವ್ಯ. ಇದಕ್ಕೆ ಇತ್ತೀಚಿನ ಕಾವ್ಯದಲ್ಲಿ ಹೊರತಲ್ಲ. "ಭೂತಕಾಲದ ಬೀಜಗಳನ್ನು ಭವಿಷ್ಯ ಬಿಡುವ ಹಣ್ಣುಗಳನ್ನು ಕಂಡು ಎಚ್ಚರವಾಗಿಯೋ ಇದ್ದ ಕಾವ್ಯ ಸಂಪ್ರದಾಯವನ್ನು ಜೀವಂತವಾಗಿಯೂ ವ್ಯಕ್ತವಾಗಿಯೂ ಇಡುತ್ತದೆ. ಕಾವ್ಯ, ಹೀಗೆ ಮಾನವತ್ವದ ವಿಶಿಷ್ಟ ಯಾವುದೇ ಅದನ್ನು ನಿರಂತರವಾಗಿ ಕಾಯುತ್ತ ಅದಕ್ಕಾಗಿ ಮಿಡಿಯುತ್ತ ಇರುವ ವಿಶೇಷ ಕ್ರಿಯೆ ಮಾಡುತ್ತದೆ.

ಇತ್ತೀಚಿನ ಕನ್ನಡ ಕಾವ್ಯ ಆಧುನಿಕತೆಯ ಪ್ರಭಾವ ಪರಿಣಾಮವನ್ನು ಅಭಿವ್ಯಕ್ತಿಸುವುದರ ಜೊತೆಯಲ್ಲಿ ಮನುಷ್ಯನ ಅಂತರಂಗದಲ್ಲಿ ಕಾಣೆಯಾದಾದ ಮನುಷ್ಯತ್ವದ ಬಗ್ಗೆಯ ತುಡಿತ, ಹುಡುಕಾಟ ನಡೆಸುತ್ತಿರುವುದಾಗಿದೆ. ಇಂದಿನ ಯಾಂತ್ರೀಕೃತ ಬದುಕಿನಲ್ಲಿ ಸಂಬಂಧಗಳು ಯಾಂತ್ರಿಕೃತಗೊಂಡ ಬಗೆಗೆ ಬೇಸರ ವ್ಯಕ್ತಪಡಿಸುತ್ತ ವ್ಯವಹಾರಿಕವಾದ ಸಂಬಂಧಗಳ ಬಗ್ಗೆ ಮಾಡುತ್ತ ಅವುಗಳು ಮನುಷ್ಯತ್ವ ಜೀವಂತಿಕೆಯ ಚಿಲುಮೆಯನ್ನು ತರಲು ಆಶಯ ಹೊಂದಿದೆ. ಇದಕ್ಕೆ ಪ್ರೇರಣಾ ರೂಪದಂತಿರುವ ಅನೇಕ ಜೀವಪರ ಚಿಂತನೆಯ ತಾತ್ವಿಕವಾದ ನಿಲುವುಗಳು ಪ್ರಭಾವಗಳಾಗಿವೆ. ಅವು ಇತ್ತೀಚಿನ ಕನ್ನಡ ಕಾವ್ಯದಲ್ಲಿ ಹೂವಾಗಿ ಅರಳಿನಿಂತಿವೆ.

ಕಾವ್ಯ ಇಂದ್ರಿಯಗಳಿಗೆ ಸಂಬಂಧಿಸಿದ್ದಾದರೂ ಮಾಗುತ್ತಾ ಹೋದಂತೆ ಅದು ಆತ್ಮ ಸಾಕ್ಷಾತ್ಕಾರವೆನಿಸಿಕೊಳ್ಳುತ್ತದೆ. ಹಾಗೇ ಜೀವನ ದರ್ಶನವನ್ನು ಒಳಗೊಂಡಿರುತ್ತದೆ. ಕಾವ್ಯ ಕೇವಲ ಮನುಷ್ಯನ ಜೀವನ ದರ್ಶನ, ಪ್ರೀತಿ, ಕರುಣೆಯ ಬಗ್ಗೆ ಮಾತಾಡುವುದಿಲ್ಲ. ಅದು ಸರ್ವ ಜೀವರಾಶಿ, ಜೀವಸಂಕೋಲದ ಕುರಿತಾಗಿ ಮಾತನಾಡುವಂತಹದ್ದು. ಇಂತಹ ಆಶಯ ಹೊಂದಿರುವ ಕನ್ನಡ ಕಾವ್ಯ ಜಗತ್ತು "ಹೊಸ ಮನೋಧರ್ಮವನ್ನು ವ್ಯಕ್ತಪಡಿಸಲು ಹೊಸ ನಾಲಿಗೆ, ಹೊಸ ನುಡಿಗಟ್ಟು ರೂಪಗೊಳ್ಳಬೇಕಾಗಿದೆ. ಈಗ ಬರೆಯುತ್ತಿರುವ ಕವಿಗಳೆಲ್ಲ ಈ ಕುರಿತು ಯೋಚನೆ ಮಾಡಬೇಕಾದದ್ದು ಅನಿವಾರ್ಯ. ಹೊಸತನಕ್ಕಾಗಿ ಬರೆಯುತ್ತಿರುವ ತರುಣ ಕವಿಗಳಂತೂ ಈ ಕುರಿತು ಯೋಚಿಸದೆ ಗತ್ಯಂತರವಿಲ್ಲ. 'ಗದ್ಗದಿತ' ಈ ಸಮಸ್ಯೆ ಎದುರಿಸುವುದು ಅನಿವಾರ್ಯ. ಇಂತಹ ಹೊಸ ಸಾಧ್ಯತೆಗಳಿಗೆ ಹೊಸ ದಾರಿಗಳಿಗೆ ಸಂವೇದನೆಗಳಿಗೆ ಇತ್ತೀಚಿನ ಕಾವ್ಯ ಪ್ರಯೋಗಶೀಲತೆಯಿಂದ ಕೂಡಿದೆ. ಹೊಸ ಹೊಸ ರೂಪಕಗಳು, ನುಡಿಗಟ್ಟುಗಳು ಸಂವೇದನೆಗಳು, ಬದುಕಬೇಕಾದ ಬಗೆಗಳನ್ನು ಜೀವಪರ ಚಿಂತನೆಗಳನ್ನು ಅಭಿವ್ಯಕ್ತಿಸುತ್ತಿರುವುದು ಕಂಡುಬಂದಿದೆ. ಪ್ರತಿಯೊಂದರಲ್ಲಿ ಮನುಷ್ಯತ್ವದ ಕುರಿತಾಗಿ ಧ್ವನಿ ಎತ್ತಿರುವುದು ಗಮನಿಸಬಹುದಾಗಿದೆ. ಈ ಮನುಷ್ಯತ್ವ ಎನ್ನುವ ಮೌಲ್ಯದ ಕುರಿತಾಗಿ ಮಿಡಿಯುತ್ತಿರುವುದು ಅದನ್ನು ಸಕಾರಗೊಳಿಸಲು ಕರೆ ನೀಡುತ್ತಿರುವ ಬಗೆ ಹೃದಯ ತತ್ವವಂತಹದ್ದಾಗಿದೆ. ಇದರ ಕೊರತೆಯಿಂದಲೇ ಯುದ್ಧಗಳು, ಅಪಮಾನಗಳು, ನೋವುಗಳು, ಸಾವುಗಳು ಸಂಭವಿಸುತ್ತಿವೆ. ಸಂಬಂಧಗಳು ಮೌಲ್ಯ ಕಳೆದುಕೊಳ್ಳುತ್ತಿವೆ ಎಂಬ ಆತುರದ ಧ್ವನಿಯನ್ನು ಸಹ ಗದ್ಗಂತ ಧ್ವನಿಯಲ್ಲಿ ಧ್ವನಿಸುತ್ತದೆ.

ಪ್ರಸ್ತುತ ದಿನಮಾನದಲ್ಲಿ ಪ್ರತಿದಿನ ದಿನಪತ್ರಿಕೆ ತೆರೆದರೆ ಸಾಕು, ಟಿ.ವಿ. ಆನ್ ಮಾಡಿದರೆ ಸಾಕು ಸಾವು, ಕೊಲೆ, ಕಳ್ಳತನ, ಮೋಸ, ರೇಪು, ಹಸಿವು, ಶಾಲಾ ಬಾಲಕಿಯ ಮೇಲೆ ಅತ್ಯಾಚಾರ, ಜ್ಯೋತಿಷ್ಯ, ಆಫೀಸ್‌ಗಳಲ್ಲಿ ಲೈಂಗಿಕ ಕಿರುಕುಳ, ತಂದೆ ಮಗಳ ಮೇಲೆ ಅತ್ಯಾಚಾರ, ಶಿಕ್ಷಕಿಯ ಅತ್ಯಾಚಾರ ಇಂತಹ ಸುದ್ದಿಗಳು ತುಂಬಿರುತ್ತವೆ. ಇದಕ್ಕೆಲ್ಲ ಕಾವ್ಯ ಉತ್ತರಿಸುವುದು ಹೀಗೆ.

ಮನುಷ್ಯನಲ್ಲಿ ಮನುಷ್ಯತ್ವ, ಪ್ರೀತಿ ಕರುಣೆ ನಾಶವಾಗಿರುವುದಕ್ಕೆ ಕಾರಣ ಎಂದು ಕೂಗಿ ಹೇಳುತ್ತದೆ. ಆ ಮನುಷ್ಯತ್ವವನ್ನು ಇನ್ನು ಉಸಿರಾಡುವ ಮನುಷ್ಯ ಜೀವಿಯಲ್ಲಿ ಜೀವಂತವಾಗಿಸುವಲ್ಲಿ ದೊಡ್ಡ ಹೋರಾಟ ನಡೆಸುತ್ತಿದೆ ಇಂದಿನ ಕಾವ್ಯ. ಮನುಷ್ಯತ್ವದ ತುಡಿತದ ಕುರಿತಾಗಿ ಇಂದಿನ ಕಾವ್ಯದಲ್ಲಿ ಗಮನಿಸುವುದಾದರೆ,

> ನಟ್ಟ ನಡುರಾತ್ರಿಯಲಿ ಅಕ್ಕ ನಡೆದು ಬರುತ್ತಾಳೆ
> ತಾಯಿ ಮೊಲೆ ಹಾಲಿನ ಪಾಲು ಎಲ್ಲರಿಗೂ ದಕ್ಕುತ್ತದೆ
> ಕಾಗೆಗಳ ಕೂಗು ಜಗದಗಲ ಅಲೆ ಅಲೆಯಾಗಿ ಹಬ್ಬಿ
> ಅಣ್ಣನ ಕಾಯಕ ಮಂತ್ರವೇ ಅಂತಿಮ ಸತ್ಯವಾಗುತ್ತದೆ
> ಆ ದಿನ
> ಹಡೆದವ್ವನ ಜೋಗುಳದಲಿ ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತವೆ[೧೦]

ಈ ಕವಿತೆಯ ಸಾಲುಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿರುವ ಮನುಷ್ಯತ್ವ ಮಾನವೀಯತೆಯ ತುಡಿತ ಸಹೋದರತ್ವದ ಜೀವನದ ಸೂಚಕವಾಗಿದೆ. ಈ ಮನುಷ್ಯತ್ವದ ಕೊರತೆಯಿಂದಾಗಿಯೇ ರಾತ್ರಿ ಬೀದಿಯಲ್ಲಿ ಒಬ್ಬ ಹೆಣ್ಣು ಮಗಳು ಸ್ವತಂತ್ರವಾಗಿ ನಡೆಯದ ದಾರುಣ ಸ್ಥಿತಿ ಬಂದಿದೆ. ಇತ್ತೀಚೆಗೆ ಹಗಲಲ್ಲಿಯೂ ನಡೆಯ ಘೋರ ದಿನಗಳಲ್ಲಿ ನಾವು ಬದುಕುತ್ತಿದ್ದೇವೆ ಎಂದು ನೋವಿನಿಂದ ನುಡಿದಂತಿದೆ. ಭಾರತ ಮಾತೆಯ ಪ್ರೀತಿ ಸರ್ವರಿಗೂ ಸಮಪಾಲಿನ ರೀತಿಯಲ್ಲಿ ದೊರೆಯುವುದು ಸಹೋದರತ್ವ ಭಾವನೆ ಬರುವುದು ಮನುಷ್ಯತ್ವದಿಂದ, ಇಲ್ಲದಿದ್ದರೆ ಮತಾಂಧತೆಯ ಅಧಿಕತನದಿಂದ ಕೋಮುಗಲಭೆಗಳು ಸಂಭವಿಸಲು ಕಾರಣವಾಗುತ್ತದೆ. ಕಾಯಕ ತತ್ವಕ್ಕೆ ನಿಜವಾದ ಅರ್ಥ ಬರುತ್ತದೆ. ಎಷ್ಟೇ ಕೂಲಿ ಕೆಲಸವಾಡುವ ಕಾರ್ಮಿಕರ ಪಾಲಿಗೆ ಶ್ರಮ, ಬೆವರು ಮಾತ್ರ ದಕ್ಕುತ್ತದೆ. ಅದಕ್ಕೆ ತಕ್ಕರಾದ ಪ್ರತಿಫಲ ಅವರಿಗೆ ದೊರೆಯುತ್ತಿಲ್ಲ. ಕಾಯಕದ ಕೈಲಾಸ ಕಾಣುತ್ತಿಲ್ಲ. ಹಸಿವು, ಬಡತನದ ಬವಣೆಯಲ್ಲೇ ಬದುಕನ್ನು ಸಾಗಿಸುತ್ತಿದ್ದಾಗ ದುಡಿಸಿಕೊಳ್ಳುವರಲ್ಲಿ ಮಾನವೀಯತೆಯ ಕೊರತೆಯಿಂದಾಗಿ ಅದಕ್ಕಾಗಿ ಕವಿತೆ ಮನುಷ್ಯರಲ್ಲಿ ಮನುಷ್ಯರ ದಿನ ನಿಜವಾದ ಬೆಳಕು, ಗಾಳಿ ಬರುತ್ತದೆ ಎಂಬ ಆಶಯದ ಮಾತು ನುಡಿದಾಗಿದೆ.

ಮನುಷ್ಯನ ಮನಸ್ಸು ಕಲ್ಲಿನ ನಗರದಲ್ಲಿ ಕಲ್ಲಾಗಿ ಹೋಗಿದೆ. ಆಡುವ ಮಾತು ಬಿಡುವ ಉಸಿರು ನೋಡುವ ನೋಟವು ಕಲ್ಲಾಗಿದೆ. ಅಂತಹ ಕಲ್ಲ ಬಂಡೆಯ ಮೇಲೆ ಸೌಹಾರ್ದತೆಯ ಮನುಷ್ಯತ್ವದ ಗಿಡ ನಾಟಿಸುವುದು ಹೇಗೆ, ಎಂದು ಪ್ರಶ್ನಿಸಿಕೊಳ್ಳುತ್ತಾ ಭಯಪಡುವ ಸ್ಥಿತಿ ಸಮಕಾಲೀನ ಸ್ಥಿತಿಯಾಗಿದೆ ಎಂದು ನೋವಿನಿಂದಲೇ ಕಾವ್ಯ ನುಡಿನಂತಿದೆ. ಆದರೂ ಅಂತಹ ಕಲ್ಲುಬಂಡೆಯ ಹೃದಯದಲ್ಲಿ ಮನುಷ್ಯ ಪ್ರೀತಿಯನ್ನು ಮಾನವೀಯತೆಯ ಚಿಗರನ್ನು ಚಿಗುರಿಸುವ ಆಶಯ ಇಂದಿನ ಕಾವ್ಯ ಹೊಂದಿದೆ. ಇದಕ್ಕೆ ಕಾರಣ ತತ್ವಪದ, ವಚನಸಾಹಿತ್ಯ, ಜಾನಪದ, ದರಗ ಸಂಸ್ಕೃತಿಯ ಪ್ರತಿಫಲವೆಂದರೆ ತಪ್ಪಾಗದು. "ಮಹತ್ವದ ಕವಿಯ ಕಾವ್ಯದರ್ಶನ

ಅಖಂಡವಾಗಿರುತ್ತದೆ. ಕಾವ್ಯದ ಒಳರೂಪ ಮತ್ತು ಹೊರಗೆ ಆತ ಅದರಿಂದ ನಿರೀಕ್ಷಿಸುವ ಪರಿಣಾಮ ಎರಡೂ ಕೂಡಾ ಒಂದೇ ನೆಲೆಯಿಂದ ಹೊರಡುವುದು ಮಹತ್ವದ ಕವಿಗಳಿಂದಲೇ[??] ಕಾವ್ಯದ ಪರಿಣಾಮವನ್ನು ಕುರಿತು ಅವರ ವಿಚಾರಗಳು ಕೂಡಾ ಕಾವ್ಯಸೃಷ್ಟಿಯ ಪ್ರಕ್ರಿಯೆಯೆಂದು ಹೊರತಾಗಿ ಬಂದುದಲ್ಲ. ಬದಲಾಗಿ ಕಾವ್ಯ ಹುಟ್ಟುವ ಪ್ರಕ್ರಿಯೆಯೊಳಗೇ ಅದರ ಕ್ರಿಯಾ ಸ್ವರೂಪ ಕೂಡಾ ಇಲ್ಲಿ ಸೂಚಿತವಾಗಿರುತ್ತದೆ.

ಇಂದಿನ ಕಾವ್ಯದಲ್ಲಿ ಮನುಷ್ಯತ್ವದ ಕುರಿತಾಗಿ ದೇವರೊಂದಿಗೆ ಸಂವಾದ ಮಾಡುತ್ತಾ, ಪ್ರಶ್ನಿಸುತ್ತಾ ಕಟ್ಟಕಲೆಯಲ್ಲಿ ನಿಲ್ಲಿಸುವ ವಿಶಿಷ್ಟ ಅಭಿವ್ಯಕ್ತಿಯನ್ನು ನೋಡಬಹುದು. ದೇವರು ಮನುಷ್ಯರಾದ ದೀನ. ಮನುಷ್ಯರೇ ಮನುಷ್ಯರಾಗುವುದು. ದೇವರ ನಾಲಿಗೆಯ ಮೇಲೆ ಮುಳ್ಳುಗಳಿವೆ. ಕಳ್ಳದೇವರು, ದೇವರೆ ಒಮ್ಮೆ ಹೆಣ್ಣಾಗೂ ಒಮ್ಮೆ ಹೆಣ್ಣಾಗೂ ಪ್ರಭುವೆ ಎಂಬಂಥ ಕವಿತೆಯ ಶೀರ್ಷಿಕೆಗಳು, ರೂಪಕಗಳು ಮಾನವೀಯತೆಯ ಕುರಿತಾಗಿ ದೇವರನ್ನೊಂದಿಗೆ ಸಂವಾದ ನಡೆಸುವುದು ಕಂಡುಬಂದಿದೆ. ಇಂದಿನ ದುರಂತ ಪರಿಸ್ಥಿತಿಗೆ ಒಂದರ್ಥದಲ್ಲಿ ದೇವರು ಪಾಲುದಾರನೇ ಅದರ ಪರಿಣಾಮದ ಭಾರ ಅವನು ಹೊರಬೇಕು. ಇದಕ್ಕೆ ಅವನೇ ಉತ್ತರ ಹೇಳಬೇಕು ಎಂಬ ವಿನೂತನ ಆಶಯ ಭಾವ ಇತ್ತೀಚಿನ ಕನ್ನಡ ಕಾವ್ಯ ಹೊಂದಿದೆ. ಮಾನವೀಯತೆ ಅನ್ನುವುದು ನಡುಬೀದಿಯಲ್ಲಿ ಬಿದ್ದು ಹೊದ್ದಾಡುತ್ತಿದೆ. ಮನುಷ್ಯತ್ವದ ಕುರಿತಾಗಿ ನಮ್ಮ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪಂಪನು ಕುಲದ ಪ್ರಶ್ನೆ ಬಂದಾಗ ಮಾನವೀಯತೆ ಮೆರೆದು ಅಭಿಮಾನ, ಛಲವೇ ಕುಲ ಎಂದಿದ್ದಾರೆ. ಇವರ ಆದಿಯಾಗಿ ಕುವೆಂಪು ಮನುಜಮತ ವಿಶ್ವಪಥ ಎಂದಿರುವುದು ಇದರ ಭಾಗವಾಗಿಯೋ, ಇವೆಲ್ಲವೂ ಮನುಷ್ಯ ಜಾತಿ ಒಂದೇ ಎಂದು ಸಾರವು ಮೌಲ್ಯವಾಗಿದೆ. ಜಾಗತೀಕರಣದ ಭಾಗವಾಗಿ ಎಲ್ಲವನ್ನು ಮಾರಾಟದ ದೃಷ್ಟಿಯಲ್ಲಿ ನೋಡುವ ಸಂದರ್ಭದವರು ಅದರಂತೆ ಮೌಲ್ಯಗಳನ್ನು ಸಹ ಇದಕ್ಕೆ ದಕ್ಷ ಪರಿಣಾಮ ರೀತಿಯಲ್ಲಿ ಮಾನವೀಯತೆಯನ್ನು ಸಹ ಮಾಹಿತಿ ಮಾಡಲಾಗದೆ ಎಂದು ಆತಂಕದ ಅಭಿವ್ಯಕ್ತ ಕಾವ್ಯದಲ್ಲಿ ಕಂಡಿದೆ.

ಇತ್ತೀಚಿನ ಕನ್ನಡ ಕಾವ್ಯದಲ್ಲಿ ಹೊಸ ಸಂದಿಗ್ಧ ಕಾಲವನ್ನು ಈ ಬದುಕಿನ ಚಿಂತನೆ ನಡಾವಳಿ ಮತ್ತು ಜೀವನಕ್ರಿಯೆಯಲ್ಲಿ ರೂಪಿಸಿದೆ ಎನ್ನುವುದು ಮುಖ್ಯ ಸಂಗತಿ. ಇಂತಹ ಸಂದಿಗ್ಧ ಕಾಲದ ತುಡಿತಗಳ, ಸಂಕಟಗಳ ಜೊತೆಯಲ್ಲಿ ಮಾನವೀಯತೆಗಾಗಿ ಮಿಡಿಯುವುದು, ಅದನ್ನೇ ಹಂಬಲಿಸುವುದು ವ್ಯಕ್ತಗೊಂಡಿದೆ. ಜಾತಿ, ಮತ, ಸಿದ್ಧಾಂತ, ಕಾಲ ಇವೆಲ್ಲವುಗಳನ್ನು ಮೀರಿದ ಅಥವಾ ಅವುಗಳ ತಳದಲ್ಲಿರುವ ಮೂಲಭೂತ ಮಾನವತ್ವದ ತಿರುಳನ್ನು ಒಳಗೊಳ್ಳುವುದು ಕಾವ್ಯ. ವರ್ತಮಾನದಲ್ಲಿ ಕಾವ್ಯ ಸೃಷ್ಟಿಯಾದರೂ ಅದು ಸರ್ವಕಾಲದ ಧ್ವನಿಯನ್ನು ಒಳಗೊಂಡಿರಬೇಕು. ಕಾವ್ಯ ತಕ್ಷಣಕ್ಕೆ ಪ್ರತಿಕ್ರಿಯಿಸಿದರೂ ನಾಳೆಯದನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡುತ್ತ ಕೇವಲ ವರ್ತಮಾನದಲ್ಲಿ ಮುಳುಗಿದ್ದರೂ ಅಲ್ಲಿಯೂ ಭೂತಕಾಲದ ಬೀಜಗಳನ್ನು

ಭವಿಷ್ಯ ಬಿಡುವ ಹಣ್ಣುಗಳನ್ನು ಕಂಡು ಎಚ್ಚರವಾಗಿಯೇ ಕಾವ್ಯ ಸಂಪ್ರದಾಯವನ್ನು ಜೀವಂತವಾಗಿಯೂ, ದೃಷ್ಟವಾಗಿಯೂ ಇಡುತ್ತದೆ. ಒಂದು ವರ್ತಮಾನದ ಸಂಗತಿಗೆ ಸ್ಪಂದಿಸುತ್ತ ಅದಕ್ಕೆ ಮೂಲ ನೆಲೆಯನ್ನು ಹುಡುಕಿ ಈ ಹಿಂದೆ ಇದ್ದ ಪ್ರಭಾವ ಪ್ರೇರಣೆಯ ಜೀವಂತಿಕೆ ಹಾಗೂ ಅದು ನಾಳೆ ಪಡೆಯುವ ಸ್ವರೂಪದ ಕುರಿತಾಗಿ ಕಾವ್ಯ ಧ್ವನಿಸುವಂತಿರಬೇಕು. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಇಂತಹ ಅಂಶಗಳು ಒಳಗೊಂಡಿದೆ. ಮಾನವೀಯತೆಯ ನಾಶದ ಕುರಿತಾಗಿ ಮನುಷ್ಯನಲ್ಲಿ ಮನುಷ್ಯತ್ವ ಕಾಣೆಯಾದ ಬಗೆಗೆ ಕಾವ್ಯ ತುಂಬಾ ಅರ್ಥಪೂರ್ಣವಾಗಿ ಕಕ್ಕುಲಾತಿಯಿಂದ ಧ್ವನಿಸುತ್ತದೆ. ಮಾನವೀಯತೆಗೆ ನಾಶದ ಕುರಿತಾಗಿ ಇಂತಹ ಮನಸ್ಥಿತಿಗೆ ಪುರಾಣದ ನೆಲೆ ಸಂಪ್ರದಾಯಸ್ಥ ವೈದಿಕಶಾಹಿ ಮನಸ್ಥಿತಿಯ ಪ್ರೇರಣೆಯ ಕಂಡುಕೊಂಡು ಮುಂದಾಗುವ ಮನುಷ್ಯ ಸಂಬಂಧಗಳನ್ನು ಗಮನದಲ್ಲಿಟ್ಟುಕೊಂಡು ಮನುಷ್ಯತ್ವದ ಅರಳಿಸಿ ಅದರ ಜೀವಂತಿಕೆಯನ್ನು ಬಯಸುವ ಆಶಯ ವ್ಯಕ್ತಪಡಿಸಿರುವುದು ಕಂಡುಬಂದಿದೆ. ಮನುಷ್ಯ ನೆಮ್ಮದಿಯ ಜೀವನಕ್ಕೆ ಏನೆಲ್ಲಿ ಬಯಸಿ ಪಡೆಯುವಷ್ಟು ಮುಂದಾಗಿದ್ದಾನೆಯೋ ಪಡೆಯುತ್ತ ಪಡೆಯುತ್ತಾ ಜೀವಸ್ಥಾಯಿಯಾದ ಮಾನವ ಪ್ರೀತಿ, ಮನುಷ್ಯ ಮಾನವೀಯತೆಯನ್ನು ಕಳೆದುಕೊಳ್ಳುತ್ತಿರುವುದಕ್ಕೆ ಆತಂಕ ವ್ಯಕ್ತಪಡಿಸಿರುವುದು ಕಂಡುಬಂದಿದೆ.

ಆದರ್ಶ, ಪರಿವರ್ತನೆ, ಹೊಸ ಧೋರಣೆಗಳು ಮಾತ್ರ ಇದ್ದರೆ ಕಾವ್ಯವೇ ಆಗುವುದಿಲ್ಲ. ಆದ್ದರಿಂದ ಸಾರ್ವಕಾಲಿಕವಾದದ್ದರ ಮತ್ತು ಅದ್ಯತನವಾದುದರ ಒಂದು ಹಠಾತ್ ಸಂಯೋಗ ಸಾಮರಸ್ಯಗಳಿಂದ ಮಾತ್ರ ಉತ್ತಮ ಕಾವ್ಯ ಹುಟ್ಟುತ್ತದೆ. ಇಂತಹ ಸಾಮರಸ್ಯದ ಅಂಶಗಳು ಸಾಮರಸ್ಯದ ಕೊರತೆಯಿಂದಾದ ಯಾತನೆಗಳು ಮನುಷ್ಯನನ್ನು ಯಾವ ರೀತಿಯು ಬಲಿ ತೆಗೆದುಕೊಳ್ಳುತ್ತದೆ ಎನ್ನುವುದನ್ನು ಇತ್ತೀಚಿನ ಕಾವ್ಯ ಅಭಿವ್ಯಕ್ತಿಸುತ್ತಿದೆ.

ನನ್ನ ಕಣ್ಣೀರು
ಅಕ್ಷರವಾದಗಲೇ
ಹೇಳಿದೆ
ನನ್ನ ಕಾವ್ಯ
ಸಾಯುವುದಿಲ್ಲ
ಬೆವರು
ಕಣ್ಣೀರಿನೊಟ್ಟಿಗೆ
ಮಾತಾಡಿತು
ಜೀವನಗಳ ಬಿತ್ತುತ್ತಾ
ಬಪೀದಿ ತುಂಬಾ ಹಾಡು[೧೨]

ಕಾವ್ಯ ಕಣ್ಣೀರಿಡುತ್ತದೆ. ಯಾತಕ್ಕಾಗಿ ಎಂದರೆ ಮಾನವನಲ್ಲಿ ಮನುಷ್ಯತ್ವ ಕಾಣೆಯಾಗಿದೆ. ಜೀವನಗಳು ಬೀದಿ ಬೀದಿಯಲ್ಲಿ ಬಿಕ್ಕುತ್ತಿವೆ. ಮನುಷ್ಯನ ಬೆವರು, ಕಣ್ಣೀರು ಏಕವಾಗಿ ನೆಲಕ್ಕೆ

ಬೀಳುತ್ತಿದೆ ಎಂಬ ನೋವಿನ ಧ್ವನಿ ಕಾವ್ಯ ಅದಕ್ಕಾಗಿ ಬೀದಿ ಬೀದಿಯಲ್ಲಿ ಮಾನವ ಪ್ರೀತಿಗೆ ಹಂಬಲಿಸಿ ಪ್ರೀತಿಯ ಹಾಡನ್ನು ಹಾಡುವುದು ಕಂಡುಬಂದಿದೆ. ಪದ್ಯ ಪದವಿಲ್ಲದಿರಬೇಕು. ಹೆಜ್ಜೆ ಗುರುತು ಇಲ್ಲದೆ ಪಕ್ಷಿ ಹಾರುವಂತೆ ಇರಬೇಕು ಎನ್ನುವ ಹಾಗೆ ಇತ್ತೀಚಿನ ಕಾವ್ಯದಲ್ಲಿ ಮನುಷ್ಯ ಪ್ರೀತಿಗಾಗಿ ಪ್ರೀತಿಯ ಮೂಲಕ ಎಲ್ಲವನ್ನು ನೋಡುವ, ಪ್ರೀತಿಯಿಂದಲೇ ಅರ್ಥೈಸುವ ರೀತಿ ಕಂಡುಬಂದಿದೆ. ನವ್ಯ ಕಾವ್ಯದಲ್ಲಿ ಆಯ್ಕೆ, ಕಾಮ ಮತ್ತು ಪ್ರಯೋಗಶೀಲತೆ ಕಂಡುಬಂದರೆ ಇತ್ತೀಚಿನ ಕಾವ್ಯದಲ್ಲಿ ಪ್ರೀತಿ ಮತ್ತು ಪ್ರಯೋಗಶೀಲತೆ ಕಂಡುಬಂದಿದೆ. ಹೊಸ ಹೊಸ ನುಡಿಗಟ್ಟಿನ ಮೂಲಕ ಪ್ರೀತಿಯನ್ನು ವ್ಯಕ್ತಪಡಿಸದೆ ಹಾಗೇ ಮನುಷ್ಯತ್ವಕ್ಕಾಗಿ ಮಿಡಿಯುವುದು ವ್ಯಕ್ತಗೊಂಡಿದೆ.

ಕಾವ್ಯದಲ್ಲಿ ಕೇವಲ ಆದರ್ಶಗಳು ಧೋರಣೆಗಳು ಒಳಗೊಳ್ಳುವುದಷ್ಟೆ ಅಲ್ಲ. ಅಲ್ಲಿ ಸಂತಸ, ರಮ್ಯತೆಗೂ ಜಾಗ ಬೇಕು ಅಂದಾಗ ಮಾತ್ರ ಅದು ಮನಮುಟ್ಟುತ್ತದೆ. ಕಾವ್ಯದಿಂದ ದೊರೆಯಬೇಕಾದ ಆದರ್ಶಗಳ ಜೊತೆಗೆ ಸ್ಫೂರ್ತಿಯೂ, ಸಂತಸವೂ, ಆಶ್ಚರ್ಯವೂ ಅದರಿಂದ ದೊರೆಯಬೇಕು. ಆಗಾದಾಗ ಮಾತ್ರ ಕಾವ್ಯ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಪ್ರತಿ ಯುಗದಲ್ಲೂ ಪ್ರತಿಯೊಬ್ಬ ವಿಶಿಷ್ಟ ಕವಿಯ ಕೃತಿಯಲ್ಲೂ ಒಂದು ಹೊಸತನ ಅನಾದೃಶ್ಯ ಎನ್ನುವಂಥ ಒಂದು ವಸ್ತು ಪರಿಪಾಠ ವಿಶಿಷ್ಟವಾದೊಂದು ಒಮ್ಮುತ್ತದೆ. ಇಂತಹ ಹೊಸತನಕ್ಕೆ ಇತ್ತೀಚಿನ ಕಾವ್ಯವು ಉದಾಹರಿಸಬಹುದಾಗಿದೆ. ಹೊಸ ಪ್ರಯೋಗಗಳನ್ನು ಮಾಡುತ್ತ, ಪ್ರೀತಿ, ಪ್ರೇಮ, ವಿರಹ, ಸಂತಸ, ಅಳು, ಇನ್ನೂ ಮುಂತಾದ ಅಂಶಗಳ ಕುರಿತಾಗಿ ಧ್ವನಿಸಿರುವುದು ಕಂಡುಬಂದಿದೆ. ಅದರಂತೆ ಯಾವುದೇ ಆಗಲಿ ದಿಢೀರನೆ ಉದ್ಭವಿಸಿರುವುದಿಲ್ಲ. ಅದಕ್ಕೆ ಪರಂಪರೆಯ ಬೆಳಕು ಇದ್ದೇ ಇರುತ್ತದೆ. ಆ ಪರಂಪರೆಯ ಬೆಳಕಲ್ಲಿ ಹೊಸತನದ ಹಾದಿಯನ್ನು ಕಂಡುಕೊಂಡ ಹೇಳುವ ಅಭಿವ್ಯಕ್ತಿಸುವ ನೆಲೆ ಬೇರೆಯಾಗಿರುತ್ತದೆ. ಜೊತೆಗೆ ಮುಂದಿನ ಹೊಸ ಹಾದಿಗೆ ಪ್ರೇರೇಪಣೆಯನೂ ನೀಡುತ್ತದೆ.

ಪರಂಪರೆಯ ಹಾದಿಯಾಗಿ ಬಂದಿರುವ ಮೌಲ್ಯಗಳಲ್ಲಿ ಮಾನವೀಯತೆಯು ಒಂದಾಗಿದೆ. ಈ ಹಿಂದೆ ನಮ್ಮ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪಂಪ, ರನ್ನ, ಜನ್ನ, ಕುಮಾರವ್ಯಾಸ, ರಾಘವಾಂಕ, ಅಲ್ಲಮ, ಬಸವಣ್ಣ ಇನ್ನು ಮುಂತಾದ ಸಾಹಿತಿಗಳ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ರೀತಿಯ ಪ್ರೇರಣೆಯು ಇಂದಿನ ಮಿತಿಗೆ ಮಿಡಿಯುತ್ತಿರುವುದು ಕಂಡುಬಂದಿದೆ. ಇದಕ್ಕೆ ಪ್ರೇರಣಾ ರೂಪದಲ್ಲಿ ವಚನಸಾಹಿತ್ಯ ದಾಸಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದ ಪ್ರಭಾವವೂ ಹೊರತಲ್ಲ. ಆದರೆ ಆ ಕಾಲಮಾನಕ್ಕೆ ತಕ್ಕದಾದ ಧ್ವನಿಯಲ್ಲಿ ಮಿಡಿತದ ಸ್ವರೂಪ ಹೊಸ ಬಗೆಯಲ್ಲಿ ಕಾಣಬಹುದು. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಎಲ್ಲವನ್ನು ವ್ಯವಹಾರಿಕತೆಯ ನೆಲೆಯಲ್ಲಿ ಕಾಣುತ್ತಿರುವ ಹಾಗೂ ಬದುಕುತ್ತಿರುವ ಕಾಲದಲ್ಲಿ ಕಳೆದ ಮೌಲ್ಯಗಳನ್ನು ಪುನರ್‌ಸೃಷ್ಟಿಸಲು ಮಾನವೀಯತೆಯ ಸಹೋದರತ್ವದ ಬದುಕನ್ನು ಕಟ್ಟಿಕೊಳ್ಳಲು ಆ ನೆರಳಲ್ಲಿ ಬಾಳಲು ಕರೆ ನೀಡಿದಂತಿದೆ.

ಕಾವ್ಯ ಬರಿ ಕಣ್ಣಾದರೆ ಸಾಲದು. ಅದು ಪ್ರೀತಿಸುವ ಹೃದಯವನ್ನು ಸಹ ಹೊಂದಿರಬೇಕು. ಕಾವ್ಯ ಅಂದರೆ ಒಂದರ್ಥದಲ್ಲಿ ಪ್ರೀತಿ ಅಂತಾನೂ ವ್ಯಾಖ್ಯಾನಿಸಬಹುದು. ಬದುಕನ್ನು ಪ್ರೀತಿಸುವ ಬಗೆ, ಸುಂದರಗೊಳಿಸಿಕೊಳ್ಳುವ ರೀತಿಗೆ ಕಾವ್ಯಮಯ ಬದುಕು ಎಂದು ಕರೆಯುವುದು ಕಂಡುಬರುತ್ತದೆ. ಇಂತಹ ಕಾವ್ಯವು ಕಾವ್ಯವಾಗಿ ಓದಿಗಷ್ಟೇ ಸೀಮಿತವಾಗದ ಬದುಕಿನ ಭಾಗವಾಗಿ ರೂಪಗೊಳ್ಳಬೇಕು. ಹೀಗೆ ರೂಪಗೊಳ್ಳಬೇಕಾದರೆ ಸರ್ವಕಾಲಕ್ಕೂ ಸಲ್ಲುವ ರೀತಿಯಲ್ಲಿ ಅದು ಅಭಿವ್ಯಕ್ತಗೊಳ್ಳಬೇಕು. ವೈಯಕ್ತಿಕತೆಯ ಸಂವೇದನೆ ಸಮುದಾಯದ, ಲೋಕದ ಸಂವೇದನೆಯಾಗಿ ಮಿಡಿಯುವಂತಿರಬೇಕು. ಸದಾ ಹೊಸ ನೆಲೆಯಲ್ಲಿ ಹೊಸತನದಿಂದ ಮೈಪಡೆಯುತ್ತ ಮೈ ಬಿಚ್ಚಿಕೊಳ್ಳುತ್ತಿರಬೇಕು. ಜೊತೆಗೆ ಪರಂಪರೆ ಮತ್ತು ಭವಿಷ್ಯವನ್ನು ಒಳಗೊಂಡಿರಬೇಕು. ಪ್ರಸ್ತುತ ಸಂದರ್ಭದಲ್ಲಿ ಅನೇಕ ಸಮುದಾಯಗಳು, ಜಾತಿಗಳು, ವರ್ಗಗಳು, ಧರ್ಮಗಳು ಒಂದು ನಿರ್ಬಂಧಿತ ಚೌಕಟ್ಟಿನಲ್ಲಿ ಗೋಡೆ ಕಟ್ಟಿಕೊಳ್ಳುತ್ತಿವೆ. ಇದು ಅಪಾಯಕಾರಿ ಸಂಗತಿ. ಒಂದು ಸಮುದಾಯ ಸಂಘಟಿತವಾಗುವುದು ತಪ್ಪಲ್ಲ. ಆದರೆ ಸಂಘಟಿತದೊಂದಿಗೆ ಸ್ಥಿರತೆಯನ್ನು ಕಂಡುಕೊಂಡು ಬೇರೊಂದನ್ನು ಗೌರವಿಸಿ ಪ್ರೀತಿಸುವ ಗುಣಬೇಕು. ಇದು ಬಾರದಿದ್ದರೆ ಮನುಷ್ಯ ಮನುಷ್ಯರ ಮಧ್ಯೆ ದ್ವೇಷ, ಕಂದಕಗಳು ಏರ್ಪಟ್ಟು ಮಾನವೀಯತೆಯನ್ನು ಬೀದಿಯಲ್ಲಿ ನಿಂತು ಕಣ್ಣೀರಡಬೇಕಾಗುತ್ತದೆ. ಕಲಹದಿಂದ ಅನೇಕ ಸಾವು-ನೋವುಗಳ ಸಂಭವಿಸುತ್ತವೆ. ಇಂತಹ ದಾರುಣತೆಯನ್ನು ಕಂಡ ಕಾವ್ಯ ಮರುಗುತ್ತಿದೆ. ಮಾನವೀಯತೆಗಾಗಿ ಮಿಡಿಯುತ್ತಿದೆ.

ಈ ಪ್ರಪಂಚದಲ್ಲಿ ಸಕಲ ಜೀವರಾಶಿಯನ್ನು ಪ್ರೀತಿಸುವ, ಗೌರವಿಸುವ, ಗುಣವನ್ನು ಮಾನವೀಯತೆಯ ಸಂಕೇತವಾಗಿದೆ. ಇಂತಹ ಮಾನವೀಯತೆಯನ್ನು ಉಸಿರಾಗಿಸಿಕೊಂಡ ಇತ್ತೀಚಿನ ಕನ್ನಡ ಕಾವ್ಯ ಇದನ್ನು ಒಂದು ತಾತ್ವಿಕತೆಯ ನೆಲೆಯಲ್ಲಿ ಅಭಿವ್ಯಕ್ತಗೊಳಿಸುತ್ತಿರುವುದಾಗಿದೆ. ಮನುಷ್ಯ ಮನುಷ್ಯರನ್ನು ಪ್ರೀತಿಸಿ ಗೌರವಿಸುವುದು, ದೇವರನ್ನು ಪ್ರೀತಿಸಿದಂತೆ ದೈವತ್ವವನ್ನು ಆರಾಧಿಸಿದಂತೆ, ಮನುಷ್ಯನ ಹೃದಯದಲ್ಲಿ ದೇವರಿದ್ದಾನೆ ಎಂದು ಸಾರುತ್ತದೆ.

### ೪.೪. ಬದುಕಿನ ಅಸ್ಥಿರತೆ

ಸಾಹಿತ್ಯ ಸಮಾಜದ ಶಿಶು, ಸಮಾಜಮುಖಿಯಾದ ಸಾಹಿತ್ಯ ಸರ್ವಕಾಲ ಉಳಿಯುವ ಗುಣ ಹೊಂದಿರುತ್ತದೆ. ಕೆಲವೊಂದು ಸಾರಿ ಸಾಹಿತ್ಯದ ಮೂಲಕ ಸಮಾಜ ತನ್ನ ಸ್ಥಿತಿಗತಿಯನ್ನು ಬದಲಾಯಿಸಿಕೊಳ್ಳುತ್ತಿರುತ್ತದೆ. ಪ್ರೇರಣೆ ಪ್ರಭಾವಕ್ಕೆ ಒಳಗಾಗುತ್ತಿರುತ್ತದೆ. ಸಾಹಿತ್ಯ ಸಕಲ ಜೀವರಾಶಿಗಳ ಕುರಿತಾಗಿ ಧ್ವನಿ ಎತ್ತುವ ಜೊತೆಗೆ ಮನುಷ್ಯನ ಬದುಕಿನ ಭಾಗವಾಗಿಯೂ ಗೋಚರಿಸುತ್ತದೆ. ಮನುಷ್ಯನ ದೈನಂದಿನ ಬದುಕಿನ ಆಚರಣೆ, ವಿಚಾರ, ಸಂಸ್ಕೃತಿ, ದಿನನಿತ್ಯದ ಬದುಕಿನ ಬಗೆಯನ್ನು, ತಾತ್ವಿಕ ನೆಲೆಯನ್ನು ನಂಬಿದ ನಂಬಿಕೆ, ನೋವು-ನಲಿವನ್ನು ಅಭಿವ್ಯಕ್ತಿಸುತ್ತಿರುತ್ತದೆ. ಅದರಂತೆ ಮನುಷ್ಯನ ಬದುಕಿನ ಅಸ್ಥಿರತೆಯನ್ನು ಇತ್ತೀಚಿನ ಕಾವ್ಯದಲ್ಲಿ ಒಡಮಾಡಿರುವುದು ಕಂಡು ಬಂದಿದೆ. ಸಾಹಿತ್ಯ ಆರಂಭದ ಕಾಲದಿಂದಲೂ ಇಂದಿನವರೆಗೆ ಮನುಷ್ಯನ ಕುರಿತಾಗಿ

ನುಡಿದಿರುವುದು ಕಂಡುಬಂದಿದೆ. ಅವನು ಬಾಳಿನ ಸ್ಥಿತಿ, ಬಾಳಬೇಕಾದ ಸ್ಥಿತಿಯನ್ನು ಅದರೊಂದಿಗೆ ಉಪಯೋಗಗಳನ್ನು ಸಹ ಅಭಿವ್ಯಕ್ತಿಸಿರುವುದು ನೋಡಬಹುದು. ಅದರಂತೆ ಪ್ರಸ್ತುತ ದಿನಮಾನದಲ್ಲಿ ಜಾಗತೀಕರಣದ ಪ್ರಭಾವಕ್ಕೆ ಬಂಡವಾಳಶಾಹಿಗಳ ಹಿಡಿತದಲ್ಲಿ ಮನುಷ್ಯನ ಬದುಕು ಯಾವ ರೀತಿಯಾಗಿ ಕರಾಳತೆಯನ್ನು ಅನುಭವಿಸುತ್ತಿದೆ. ಯಾವ ರೀತಿಯಾಗಿ ಅಸ್ಥಿರತೆಯನ್ನು ಹೊಂದಿದೆ ಎಂಬುದನ್ನು ಸಮರ್ಥವಾಗಿ ಅಭಿವ್ಯಕ್ತಿಸಿದೆ ಇಂದಿನ ಕಾವ್ಯ.

ಕಾವ್ಯ ಸರ್ವಕಾಲ ಉಳಿಯುವಂತಹ ಅಂಶಗಳನ್ನು ಒಳಗೊಂಡಿರುವುದರ ಜೊತೆ ಜೊತೆಯಲ್ಲಿ ತತ್‌ಕ್ಷಣದ ಸಂಕಟ, ದುಃಖ, ಅಸ್ಥಿರತೆಯ ಕುರಿತಾದ ಅಂಶಗಳನ್ನು ಒಳಗೊಂಡಿದೆ. ಹಸಿವು ನಿರುದ್ಯೋಗ, ಅವಮಾನದ ಸಂಕಟವನ್ನು ಮನುಷ್ಯ ಯಾವ ರೀತಿಯಾಗಿ ಅನುಭವಿಸುತ್ತಿದ್ದಾನೆ. ಅದಕ್ಕೆ ಕಾರಣ ಮತ್ತು ಪ್ರಭಾವ ಯಾವ ನೆಲೆಯದ್ದಾಗಿದೆ ಎಂಬುದನ್ನು ಕಾವ್ಯ ಧ್ವನಿಸುತ್ತಿದೆ. ಮೌಲ್ಯಗಳಲ್ಲಿ ಒಂದಾದ ಪ್ರೀತಿ, ಪ್ರೇಮ, ಸ್ನೇಹದ ಜೊತೆ ಜೊತೆಯಲ್ಲಿ ಗುಡಿಸಲಲ್ಲಿ, ಮನೆಗಳಲ್ಲಿ, ಬೀದಿಯಲ್ಲಿ, ಕಾರ್ಯಾಲಯಗಳಲ್ಲಿ, ಕಾರ್ಖಾನೆಯಲ್ಲಿ, ಸಾರ್ವಜನಿಕ ಸ್ಥಳದಲ್ಲಿ ಸಾಮಾನ್ಯ ಮನುಷ್ಯನ ಬದುಕಿನ ಚಿತ್ರಣ, ಅವನ ಅನುಭವಿಸುವ ಯಾತನೆ ಸಂಕಟದ ಕುರಿತಾಗಿ ಅಭಿವ್ಯಕ್ತಿಸಿದೆ. ಉದ್ಯೋಗದ ಕೊರತೆಯಿಂದ ಅನೇಕ ತಳಸಮುದಾಯದ ಯುವಕರು ಗುಳೆ ಹೋಗುವ ಅತಂತ್ರ ಸ್ಥಿತಿ ನಮ್ಮ ಕಣ್ ಮುಂದೆ ಇದೆ. ಅನ್ನಕ್ಕಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗಿ ದುಡಿದು ಅನ್ನಕ್ಕಾಗಿ ಬದುಕುವ ಧಾರಾಳ ಸ್ಥಿತಿಯನ್ನು ಕಾವ್ಯ ಹಿಡಿದಿಟ್ಟಿದೆ. ಇತ್ತೀಚಿನ ಕಾವ್ಯದಲ್ಲಿ ಬಹುತೇಕ ಕವಿಗಳ ಯುವಕರಾಗಿದ್ದೂ ಪ್ರೀತಿ ಪ್ರೇಮದ ಅನುಭವಿಸುವ ವಯಸ್ಸಿನಲ್ಲಿ 'ಗಂಭೀರ' ಸ್ಥಿತಿಗೆ ಅರಳುವಂತೆ ಮಾಡಿದ ಸ್ಥಿತಿ ಇಂದಿನದ್ದಾಗಿದೆ. ಅನೇಕ ತಳಸಮುದಾಯದ ಯುವಕ ಯುವತಿಯರು ಶಿಕ್ಷಣ ಕುರಿತು ಬೇರೊಂದು ಊರಿಗೆ ಕೆಲಸಕ್ಕಾಗಿ ದುಡಿಯಲು ಗುಳೆ ಹೊರಟಿರುವ ವರ್ತಮಾನ ಸ್ಥಿತಿ ಇಂದಿನ ಕಾವ್ಯದಲ್ಲಿ ಕಣ್ಣಿಗೆ ಕಟ್ಟುವ ರೀತಿಯಲ್ಲಿ ವ್ಯಕ್ತಗೊಂಡಿದೆ. ಕೃಷಿಯನ್ನು ಅವಲಂಬಿಸಿಕೊಂಡು ಬದುಕು ಸಾಗಿಸುವ ಸಮುದಾಯಗಳು ಮಳೆ ಇಲ್ಲದೆ. ಸರಿಯಾದ ಬೆಳೆ ಬೆಳೆಸಿ ಬೆಲೆ ಸಿಗದೆ, ನೇಣಿಗೆ ಕೊರಳೊಡ್ಡಿ ಸಾಯುವ ಸ್ಥಿತಿ ತಲುಪಿದ ಭೀಕರತೆ, ಬದುಕಿಗಾಗಿ ಸಣ್ಣ ಪುಟ್ಟ ಕೆಲಸಗಳನ್ನು ಕೈಗೂಡಿಸಿಕೊಂಡು ಬದುಕನ್ನು ನಡೆಸುವುದರ ಜೊತೆಯಲ್ಲಿ ಸ್ಥಿರವಾದ ನೆಲೆಯ ಕುರಿತು ಹಂಬಲಿಸುವ ಸ್ಥಿತಿ ಇನ್ನೊಂದು ಬಗೆಯದ್ದಾಗಿದೆ. ಆಧುನಿಕತೆಯ ಪ್ರಭಾವದಿಂದ ಹಳ್ಳಿಗಳಲ್ಲಿ ಕೆಲವು ಸಮುದಾಯದ ಕುಲಕಸುಬುಗಳ ಸಹ ಸರಿಯಾದ ರೀತಿಯಲ್ಲಿ ಹಣ ಪಡೆಯುವಲ್ಲಿ ವಿಫಲವಾದಾಗ ಆ ಕಸುಬುಗಳನ್ನು ಬಿಟ್ಟ ಪಟ್ಟಣ ಸೇರಿ ಹೊಸದೊಂದು ದಾರಿ ಹಿಡಿಯುವ ರೀತಿ, ಪಟ್ಟಣದಲ್ಲಿಯೂ ಅತಂತ್ರ ಸ್ಥಿತಿಗೆ ಕಾರಣವಾಗುವ ಅನೇಕ ಅಂಶಗಳನ್ನು ಸಹ ಕಣ್ಣುಮುಂದೆ ಕಾಣುವಂತೆ ಕಾವ್ಯ ಒಳಗೊಂಡಿದೆ.

ಇಂದು ಪಡೆಯುತ್ತಿರುವ ಶಿಕ್ಷಣ ಸಹ ಕೇವಲ ಅಕ್ಷರ ಜ್ಞಾನವನ್ನು ಮೂಡಿಸುತ್ತದೆ ಹೊರತು ಅದರಿಂದ ಬದುಕನ್ನು ಕಟ್ಟಿಕೊಂಡ ಬಾಳುವ ಸೌಭಾಗ್ಯ ಕಡಿಮೆ. ಸರ್ಕಾರಿ ಕೆಲಸ

ಸಿಕ್ಕರೂ ಇಂದಿನ ಬೆಲೆ ಏರಿಕೆಯಲ್ಲಿ ನೆಮ್ಮದಿಯ ಜೀವನ ನಡೆಸುವುದು ಕಷ್ಟಕರವಾಗಿರುವ ಪರಿಸ್ಥಿತಿಯಲ್ಲಿ ಕೃಷಿಯನ್ನು ನಂಬಿ ಕೂಲಿಯನ್ನು ಆಶ್ರಯಿಸಿ ಬದುಕುವ ಜನರ ಬದುಕಿನ ಚಿತ್ರಣ ಕಲ್ಪಿಸಿಕೊಂಡರೆ ವಾಸ್ತವ ಸ್ಥಿತಿ ಅರಿವಾಗುತ್ತದೆ. ಇದಕ್ಕೆ ಸಾಕ್ಷೀಕರಿಸುವಂತಹ ಕಾವ್ಯ ಇತ್ತೀಚಿನ ಕಾವ್ಯದ್ದಾಗಿ, ಪ್ರಸ್ತುತ ಕಾವ್ಯ ಪ್ರಸ್ತುತ ಸನ್ನಿವೇಶಕ್ಕೆ ಕನ್ನಡಿ ಇದ್ದಂತೆ. ಇಂದಿನ ಬದುಕಿನ ಅಸ್ಥಿರತೆಯನ್ನು ಸಮರ್ಪಕವಾಗಿ ಕಾವ್ಯ ಹಿಡಿದಿಟ್ಟದೆ. ಎಸ್. ಮಂಜುನಾಥ ಅವರ ಕವಿತೆಯ ಸಾಲುಗಳಾದ

> ಕಡ್ಡಿ ಕಡ್ಡಿಯನೂ ತಿದ್ದಿ ತೋರಿರುವ
> ಎಲೆಮಲೆಯನೂ ಎಣಿಸಬಹುದೆನಿಸಿರುವ
> ಬಯಲಲ್ಲಿ ತುಂಬಿ ಮನೆಯೊಳಗೆ ತುಳುಕಿರುವ
> ಕದ್ದಿಣುಕಿರುವ
> ಬೆಳದಿಂಗಳ ಹೊಗಳಲು ಕಾಲವಿದಲ್ಲ.[೧೩]

ವರ್ತಮಾನದ ಕಾಲ ಬಹು ದುಸ್ಥಿತಿಯಿಂದ ಕೂಡಿದ ಕಾಲವಾಗಿದೆ. ಮನುಷ್ಯ ತನ್ನ ಆಶಾವಾದಿತನದ ಅತಿರೇಕದಿಂದಾಗಿ ಅರಣ್ಯ ನಾಶ ಮಾಡುತ್ತ, ನಿಸರ್ಗ ಸಂಪತ್ತನ್ನು ನಾಶ ಮಾಡುತ್ತ. ನಗರ ನಿರ್ಮಾಣದಲ್ಲಿ, ಕೈಗಾರಿಕೆ ನಿರ್ಮಾಣದಲ್ಲಿ ತೊಡಗಿದ್ದಾನೆ. ಈ ರೀತಿ ಬೆಳವಣಿಗೆಯಿಂದಾಗಿ ಮಳೆ ಇಲ್ಲದೆ ನೀರಿಲ್ಲದೆ, ಗಾಳಿ ಇಲ್ಲದೆ ಬದುಕು ಸಾಗಿಸಬೇಕಾದ ದುಸ್ಥಿತಿ, ಅಸ್ಥಿರತೆಗೆ ಕಾರಣವಾಗಿದೆ. ಮಂಜುನಾಥ ಅವರ ಕವನ ಸಂಕಲನದ ಶೀರ್ಷಿಕೆಯೇ 'ಬೊಗಸೆ ಜಲ ಒಂದು ಬೀಜಕ್ಕಾಗಿ' ಎನ್ನುವುದು ತುಂಬಾ ಅರ್ಥಪೂರ್ಣವಾಗಿದೆ. ಇಂದಿನ ಬರಗಾಲದ ದುಸ್ಥಿತಿಯನ್ನು ಒತ್ತಿ ಹೇಳಿದಂತೆ ಕಾಣುತ್ತಿದೆ. ಮಣ್ಣಲ್ಲಿ ಬೀಜ ಮೊಳಕೆ ಹೊಡೆಯಲು, ಜೀವ ಬದುಕಲು ಒಂದು ಬೊಗಸೆ ನೀರು ಬೇಕಾಗಿದೆ. ನೀರಿಲ್ಲದೆ ಈ ನೆಲೆ. ಬಾಯಾರಿದ ರೀತಿಯನ್ನು, ರೈತ ಅನುಭವಿಸುವ ಸಂಕಟವನ್ನು ಮುಗಿಲಿಗೆ ಕತ್ತೆತ್ತಿ ಚಿತ್ರಣವನ್ನು ಚಿತ್ರಿಸುತ್ತಿದೆ. ಕವಿತೆ ತನ್ನ ಆತ್ಮತೃಪ್ತಿಗಾಗಿ ಎಂದು ಈಗ ಯಾರೂ ಹೇಳಲಾರರು. ಅಂಥವರು ವ್ಯಂಗ್ಯಕ್ಕೀಡಾಗುತ್ತಾರೆ. ಕಾರಣ ಅಂತಹ ಸ್ಥಿತಿ ಒದಗಿದೆ. ಬದುಕು ತಲ್ಲಣಗೊಂಡಿರುವಾಗ ಉಸಿರಾಟವು ತೊಂದರೆಯಾದಾಗ ಕಾವ್ಯ, ಬರಹ, ಆತ್ಮತೃಪ್ತಿ, ರಂಜನೆ, ಖುಷಿಗಾಗಿ ಎಂದು ಹೇಳಿದರೆ ಬಹಿಷ್ಕರಿಸುವ ರೀತಿಯಲ್ಲಿ ನೋಡುವ ಬಗೆ ಇಂದಿನದ್ದಾಗಿದೆ. ಕಾರಣ ಹಸಿವಿನಿಂದ ಕೂಳಿಗಾಗಿ ಕೂಗುವಾಗ ಅಂತಹ ದೃಷ್ಟಿಕೋನಕ್ಕೆ ಜಾಗವಿಲ್ಲ. ಕಾವ್ಯ ಸಮಾಜದ ಶಿಶುವಾಗಿ ಸಮಾಜಮುಖಿಯಾಗಿ ಬೆಳೆಯುತ್ತಿರಬೇಕು. ಅದು ಸಮಾಜದ ನೋವುಗಳಿಗೆ ಮುಲಾಮು ಹಚ್ಚುವ ರೀತಿಯಲ್ಲಿ ವ್ಯಕ್ತಗೊಳ್ಳಬೇಕು. ಕವಿತೆ ಸಮಾಜಕ್ಕಾಗಿ ಎಂದು ಹೇಳಿಕೊಳ್ಳುವುದು ಸರಿಯಾದ ದಾರಿ. ಕವಿತೆಯನ್ನು ಕವಿ ತನಗಾಗಿಯೇ ಬರೆದರು. ಸಕಲ ಜೀವಗಳನ್ನು ಒಳಗೊಂಡಿರುವಂತಹ ಸಂವೇದನೆ ಇರಬೇಕು ಇಲ್ಲವಾದಲ್ಲಿ ತನ್ನ ಸುತ್ತಮುತ್ತಲಿನ ಸಮುದಾಯದ ಸಂವೇದನೆಯಾದರೂ ಒಳಗೊಂಡಿರಬೇಕು. ಈ ರೀತಿ ಹೇಳಿದಾಕ್ಷಣ ಪ್ರಜ್ಞಾಪೂರಕ ಆಯ್ಕೆಯ

ಪ್ರಶ್ನೆ ಎದುರಾಗುತ್ತದೆ. ಆ ರೀತಿಯಾದರೆ ಕೃತಕೂಗುತ್ತದೆ. ತಾಯಿತನದ ಕರುಣೆ, ಮಮತೆ, ಕವಿಯ ಒಳಸಂವೇದನೆ ಸದಾ ಜಾಗೃತವಾಗಿರಬೇಕು. ಅಂದಾಗ ಸೂಕ್ಷ್ಮ ಸಂಗತಿಯನ್ನು ಸಹ ಕವಿ ಗ್ರಹಿಸಿ ಮಿಡಿಯುವ ಕಾವ್ಯ ಹೊರಬರಲು ಸಾಧ್ಯ. ಇತ್ತೀಚಿನ ಕಾವ್ಯದ ಕವಿತೆಯ ಶೀರ್ಷಿಕೆಗಳೇ ಒಂದು ಸಂಕಟವನ್ನು ಧ್ವನಿಸುವ ರೀತಿಯಲ್ಲಿ ವ್ಯಕ್ತಗೊಂಡಿವೆ. ಜೀವ ಜೀವಗಳ ಮಧ್ಯ ಸಾಮರಸ್ಯ ಸ್ಥಿರತೆ ಪ್ರೀತಿ ಸೌಹಾರ್ದತೆಯನ್ನು ಬಯಸುವ ಸೂಗಿ ಕಾಣಿಸುತ್ತದೆ. ಹಾಗೇ ಅವುಗಳ ನಾಶದ ಕುರಿತಾಗಿ ವಿಚಾರ ವ್ಯಕ್ತಪಡಿಸುತ್ತಿರುವುದನ್ನು ಸಹ ಗಮನಿಸಬಹುದಾಗಿದೆ.

ಪ್ರಸ್ತುತ ದಿನಮಾನದಲ್ಲಿ ದುಡಿದ್ದದ್ದರಲ್ಲೇ ಆತ್ಮತೃಪ್ತಿ ಕಾಣುವ ಪರಿಸ್ಥಿತಿ ದೂರವಾಗಿದೆ. ದುಡಿಯುವುದು ಅಧಿಕವಾಗಿದೆ ಬಂದ ಹಣ ಅಷ್ಟೇ ವೇಗವಾಗಿ ಅತಿಯಾದ ಬೆಲೆಯಿಂದ ವ್ಯಯವಾಗುವುದು ಕಂಡುಬಂದಿದೆ. ಇದಕ್ಕೆ ಪೂರಕವಾಗಿ ಮನುಷ್ಯನ ಮನಸ್ಥಿತಿಯು ಹೊಂದಿಕೊಂಡಿದೆ. ಒಂದು ಪರಸ್ಪರ ಹೊಂದಾಣಿಕೆಯ ಬದುಕು ಇಲ್ಲವಾಗಿದೆ. ಎಲ್ಲವೂ ತನಗಾಗಿ ಬೇಕು. ತನ್ನ ಒಡೆತನದ ಅಧೀನದಲ್ಲಿರಬೇಕು ಎಂಬ ಆಶಯದಂತೆ ಕಂಡಿದ್ದನ್ನು ಕೊಂಡುಕೊಂಡು ಅಲ್ಪದರಲ್ಲಿ ತೃಪ್ತರಾಗದೇ ಪ್ರತಿಷ್ಠೆಗಾಗಿ ಬದುಕನ್ನು ಬಾಗಿಲು ಮುಂದಾಗಿದ್ದಾರೆ. ಈ ರೀತಿಯ ಬದುಕಿನ ಪರಿಯೇ ಅಸ್ಥಿರತೆಯನ್ನು ತಂದೊಡ್ಡಿದೆ ಎಂದರೆ ತಪ್ಪಾಗದು. ಇದನ್ನು ಕಾವ್ಯ ಪ್ರತಿಷ್ಠೆಗಾಗಿ ಮನುಷ್ಯನ ಬಾಳು ಯಾವ ರೀತಿಯಾಗಿ ಅತಂತ್ರ ಸ್ಥಿತಿ ತಲುಪಿದೆ. ಇದರ ಭಾಗವಾಗಿ ಮನುಷ್ಯ ಸಂಬಂಧಗಳು ಯಾವ ನೆಲೆಯಲ್ಲಿ ನಾಶವಾಗಿವೆ ಎಂಬುದನ್ನು ಅಭಿವ್ಯಕ್ತಿಸಿದೆ. ಬದುಕನ್ನು ಕಟ್ಟಿಕೊಳ್ಳಲು ಕಳ್ಳುಬಳ್ಳಿಯನ್ನು ಕಟ್ಟಿಕೊಂಡು ದಿನವಿಡೀ ಪಟ್ಟಣಗಳಿಗೆ ಗುಳೆ ಹೋಗುವುದು ಕಂಡುಬಂದಿದೆ. ತನ್ನದಲ್ಲಿದ್ದ ಊರು, ತನ್ನದಲ್ಲದ ಭಾಷೆ, ತನ್ನದಲ್ಲದ ಸಂಸ್ಕೃತಿಯನ್ನು ತನಗೆ ಇಷ್ಟವಿಲ್ಲದಿದ್ದರೂ ಒಗ್ಗಿಸಿಕೊಂಡು ಅದರಂತೆ ಜೀವಿಸುವ ಜೀವನ ಕಾಣುತ್ತೇವೆ. ಹಳ್ಳಿಯಿಂದ ಬದುಕನ್ನು ಕಟ್ಟಿಕೊಳ್ಳಲು ನಗರಕ್ಕೆ ಬಂದ ಸಮೂಹ ಒಂದು ಕಡೆಯಾದರೆ, ಪಟ್ಟಣದ ಯುವ ಜನತೆ ವಿದೇಶಕ್ಕೆ ಹೋಗಿ ಅಲ್ಲಿ ಹಣಕ್ಕಾಗಿ ಬದುಕನ್ನು ಸಾಗಿಸುವ ಅತಂತ್ರದ ಬದುಕನ್ನು ಸಹ ಇನ್ನೊಂದು ಊರಿನಿಂದ ಇನ್ನೊಂದು ಊರಿಗೆ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಪ್ರಯಾಣ ಬೆಳೆಸುವುದು ಸ್ಥಿರತೆಯಾದರೂ ಪರಕೀಯ ಪ್ರಜ್ಞೆ ಕಾಡುವುದು ಇನ್ನೊಂದು ವಿಷಾದದ ಸಂಗತಿ.

'ಮಾತು ತಲೆಯೆತ್ತುವ ಬಗೆ' ಎಂಬಂತೆ ಬದುಕು ತಲೆ ಎತ್ತುವ ಬಗೆಯನ್ನು ಸಹ ಒಂದು ಮಹತ್ವದ ಸಂಗತಿಯಾಗಿದೆ. ಇಂತಹ ಸಂಗತಿಯನ್ನು ಕಾವ್ಯ ಧ್ವನಿಸುತ್ತದೆ. ಬದುಕು-ರೂಪಗೊಳ್ಳುವ ಬಗೆಯನ್ನು ದೇಶಿ ನೆಲೆಯಲ್ಲಿ ಮೌಲ್ಯಯುತವಾಗಿ ಕಟ್ಟುವ ಆಶಯವನ್ನು ಹೊಂದಿದೆ. ವ್ಯಕ್ತಿಯು ಹೊಂದಬಹುದಾದ ಆದರ್ಶಗಳು, ಮೌಲ್ಯಗಳು ನಿಲುವುಗಳು ಯಾವ ರೀತಿಯಾಗಿರಬೇಕು ಎಂಬುದನ್ನು ಕಾವ್ಯ ಸಾರುತ್ತದೆ. ಬದುಕು ಅತಂತ್ರ ಸ್ಥಿತಿಯಾಗಲು ಕಾರಣವಾದ ಅಂಶಗಳನ್ನು ಕಾವ್ಯ ಧ್ವನಿಸುತ್ತದೆ. ಅಂತಹ ಕಾರಣಗಳಾಗಿ ಉತ್ತರ ಹುಡುಕಲು, ಪ್ರೇರಣೆ ನೀಡುತ್ತದೆ. ಹಾಗೇ ಕೆಲವು ಅಪಾಯಕರ ಸಂಗತಿಗಳನ್ನು ಎಚ್ಚರಿಕೆ ರೂಪದಲ್ಲಿ ಹೇಳುತ್ತದೆ.

ಅಂತಹ ಎಚ್ಚರಿಕೆಯ ಮಾತುಗಳಿಂದ ಮನುಷ್ಯ ಪಾಠ ಕಲಿಯಲು ಪ್ರೇರೇಪಿಸುತ್ತದೆ. ಕೊನೆಗೆ ಕಲಿಯದಿದ್ದಾಗ ಮುಂದೊಂದು ದಿನವಾದರೂ ತನ್ನ ಕಾರ್ಯ ಫಲಿಸುವುದು ಎಂದು ಆಶಯ ಹೊಂದಿರುತ್ತದೆ.

ಬದುಕಿನ ದುರಂತ ಸ್ಥಿತಿಯನ್ನು ನಾಗಣ್ಣ ಕಿಲಾರಿ ಅವರ ಕವಿತೆಯ ಸಾಲುಗಳನ್ನು ಗಮನಿಸಿದಾಗ,

ಇಬ್ಬನಿ ಹೃದಯದ ಮೇಲೆ ಕೂತಿದೆ
ಅನುಭವಿಸುವ ಪಾತ್ರೆಗೆ ಜಿಡ್ಡು ಮೆತ್ತಿದೆ
ಬೆರಳುಗಳಿಗೆ ಪಾಚಿಯ ಮೇಲೆ ಅಸ್ತಿತ್ವವಿಲ್ಲ
ಅವು ಜಾರುವ ಮೀನುಗಳಂತೆ ಚಲಿಸಿವೆ.

ಹಸಿಯಿಲ್ಲದ ಕಪ್ಪ ಮಣ್ಣಿನ ಒಡಲು ಸೀಳಿ
ಬೆಳಕಿನ ವೃಕ್ಷ ತಲೆಯೆತ್ತುತ್ತದೆ
ಮನುಷ್ಯ ತನ್ನ ಕುರುಡು ಕಣ್ಣುಗಳನ್ನು
ಮೊಂಡು ಕೈ ಬೆರಳುಗಳಿಂದ ಉಜ್ಜಿ
ಬೆಳಕನ್ನು ಹೀರಲು ಸಿದ್ಧವಾಗುತ್ತಾನೆ[೧೪]

ಮನುಷ್ಯನ ಬದುಕಿನ ಅತಂತ್ರ ಸ್ಥಿತಿಯನ್ನು ಕಟ್ಟಿಕೊಡುವಲ್ಲಿ ಸಮರ್ಥವಾಗಿ ಅಭಿವ್ಯಕ್ತಗೊಂಡಿವೆ. ಮೇಲಿನ ಕವಿತೆಯ ಸಾಲುಗಳು. ಹಸಿವೆಯಿಂದೆ ಒಡಲು ಸೀಳಿದೆ ಎನ್ನುವ ರೂಪಕ ಮನುಷ್ಯ ಹಸಿವು ಎಷ್ಟರಮಟ್ಟಿಗೆ ಮೇರೆಮೀರಿದೆ ಮಣ್ಣು ತಿನ್ನುವ ದಾರುಣ ಸ್ಥಿತಿ ತಲುಪಿದೆ ಎನ್ನುವ ಆಶಯ? ವ್ಯಕ್ತಪಡಿಸಿದೆ. ಮನುಷ್ಯ ಈ ಲೋಕವನ್ನು ಕಾಣದಂತೆ, ತನ್ನ ಕಣ್ಣುಗಳ ಕುರುಡಾಗಿರುವುದು. ಚಲನಶೀಲವಾದಂತೆ, ಕ್ರಿಯಾಶೀಲವಾಗದಂತೆ ಮೊಂಡು ಕೈಗಳನ್ನು ಹೊಂದಿರುವುದು ಮನುಷ್ಯನ ಅಧಃಪತನವನ್ನು ಸೂಚಿಸುತ್ತದೆ. ಜಾಗತೀಕರಣದ ಭಾಗವಾಗಿ ಮೌಲ್ಯಗಳ ನಾಶದಿಂದಾಗಿ ಮನುಷ್ಯ ತಾನು ಕಾಣಬೇಕಾದದ್ದು ಕಾಣದೆ ಕುರುಡನಾಗಿರುವುದು ಹಾಗೆ ಕಾಣದಂತೆ ವ್ಯವಸ್ಥೆ ಮಾಡಿರುವುದು. ಹಾಗೇ ನೈತಿಕವಾದ ಮೌಲ್ಯಯುತವಾದ ಕೆಲಸ ಮಾಡದಂತೆ ಕೈಗಳನ್ನು ಕತ್ತರಿಸಿ ಆತ್ಮಸಾಕ್ಷಿಯನ್ನು ನುಂಗಿ ಮೊಂಡಾಗಿಸಿರುವುದು ಕಂಡುಬಂದೆ. ಇಲ್ಲಿ ಮೊಂಡಾದ ರೂಪಕ ಮನುಷ್ಯ ತನ್ನ ಬದುಕನ್ನು ಚಲನಶೀಲವಾಗಿಸಲು ಜಿಗಿಯದಂತೆ ಆಶಯಗಳನ್ನು ಕತ್ತರಿಸಿರುವುದು ಸೂಚಕವಾಗಿದೆ. ಇಂಥ ಊನ ಸ್ಥಿತಿಯಲ್ಲಿ ಬದುಕನ್ನು ಹೀರಲು ಬಿಟ್ಟು, ಹೀರಲಾಗದ ಸ್ಥಿತಿಗೆ ಪ್ರಭುತ್ವ ನಗುವುದನ್ನು ನೋಡ ಕವಿ ಮರುಗಿದಂತೆ ಕಾಣುತ್ತದೆ. “ನಾವು ನಂಬಿದ ಪ್ರಜಾಸತ್ತಾತ್ಮಕ ಮೌಲ್ಯಗಳು ನಾಶವಾಗಿವೆ. ಜಾಗತೀಕರಣವು ನಮ್ಮ ಬಹುಪಾಲು ಜನಸಮುದಾಯಗಳನ್ನು ಕಡು ದಾರಿದ್ರ್ಯ ಹಾಗೂ ಹಸಿವಿನ ಅಂಚಿಗೆ ತಾಳಿದೆ” ಎಂಬ ಆಶಯವನ್ನು ರಾಜೇಂದ್ರ ಚೆನ್ನಿಯವರು ವ್ಯಕ್ತಪಡಿಸಿದ್ದಾರೆ. ಹಸಿವಿನ ಅಂಚಿಗೆ ತಳ್ಳಿ ರೈತ ಬೆಳೆಯುವ ಬೆಳೆಯನ್ನು, ಭೂಮಿಯನ್ನು ಕಸಿದುಕೊಂಡು ಅತಂತ್ರ ಸ್ಥಿತಿಗೆ ತಂದೊಡ್ಡಿದೆ ಎಂದು ಕಾವ್ಯ ಧ್ವನಿಸುತ್ತದೆ.

ಸಾಹಿತ್ಯ ಸಂಸ್ಕೃತಿಗೆ, ಬದುಕಿಗೆ ಸಂಬಂಧಿಸಿದಂತೆ ಸರಕಾರವು ಒಂದು ಅಧಿಕಾರದ ಕೇಂದ್ರವಾಗಿ ಬೆಳೆಯುತ್ತಾ ಬಂದಿದೆ. ಪ್ರಜಾಪ್ರಭುತ್ವ ಹಾಗೂ ಸಂವಿಧಾನಗಳನ್ನು ಮೂಲತಃ ಒಪ್ಪದೇ ಇರುವ ರಾಜಕೀಯ ಸಿದ್ಧಾಂತವನ್ನು ಸರಕಾರವು ಹೀಗೆ ಅಧಿಕಾರದ ಕೇಂದ್ರವಾದರೆ ಆಗುವ ಪರಿಣಾಮಗಳು ಕ್ರೂರವಾಗಿರುತ್ತವೆ. ಅನೇಕ ಕಾಯಿದೆ ಕಾನೂನುಗಳನ್ನು ಸರಕಾರ ಜಾರಿಗೆಗೊಳಿಸುವ ಮೂಲಕ ಸಾಮಾನ್ಯ ಜನರ ರೈತರು ಭೂಮಿಯನ್ನು ಕಸಿದುಕೊಂಡು ಸರಿಯಾದ ಬೆಲೆ ನೀಡದೆ ಒಕ್ಕಲೆಬ್ಬಿಸುವುದು, ನೆಲೆ ಕೊಡುತ್ತೇವೆ ಎಂದು ಸುಳ್ಳು ಭರವಸೆ ನೀಡಿ ಬದುಕನ್ನು ಅತಂತ್ರ ಸ್ಥಿತಿಗೆ ತಳ್ಳುವುದು ಇಂದಿನ ವರ್ತಮಾನದ ದುಸ್ಥಿತಿಯಾಗಿದೆ. S.E.Z. ಅಂತ ಕಾಯಿದೆಗಳನ್ನು ಜಾರಿಗೆಗೊಳಿಸಿ ರೈತರಿಂದ ಭೂಮಿ ಕಸಿದುಕೊಂಡು ವಿಶೇಷ ಆರ್ಥಿಕ ವಲಯ ಎಂಬ ನಿಯಮದಡಿ ಒಕ್ಕಲೆಬ್ಬಿಸುವುದು ಕಂಡುಬಂದಿದೆ. ಇದರಿಂದಾಗುವ ದುಷ್ಪರಿಣಾಮಗಳ ರೈತರು ಅನುಭವಿಸುವ ನೋವುಗಳು. ಇತ್ತ ಭೂಮಿ ಇಲ್ಲದೆ ಅತ್ತ ವ್ಯವಸಾಯ ಇಲ್ಲದೆ ಅತಂತ್ರ ಸ್ಥಿತಿಯ್ನು ಕಾವ್ಯ ಧ್ವನಿಸುತ್ತದೆ. ಜೊತೆಗೆ ಈ ರೀತಿ ಅಧಿಕಾರ ಕೇಂದ್ರಿತ ಆಡಳಿತದ ನಿಯಮಗಳನ್ನು ಪ್ರತಿಭಟಿಸುತ್ತದೆ ಇತ್ತೀಚಿನ ಕಾವ್ಯ. ಇದು ವರ್ತಮಾನದ ದುಸ್ಥಿತಿ, ಸಮಕಾಲೀನ ಸಂಕಟ ತಲ್ಲಣವಾಗಿದೆ. ಇಂಥ ಸುಡುವಾಸ್ತವವನ್ನು ಕಾವ್ಯ ತನ್ನ ಸಾಮಾಜಿಕ ಜವಾಬ್ದಾರಿ ಎನ್ನುವ ನೆಲೆಯಲ್ಲಿ ಅಭಿವ್ಯಕ್ತಿಸುವುದು ಕಂಡುಬಂದಿದೆ.

ಒಂದರ್ಥದಲ್ಲಿ ಸಾಹಿತ್ಯವೆಂದರೆ ನೆನಪುಗಳನ್ನು ನಿರಂತರವಾಗಿ ಕಾಪಾಡುವ ಅವುಗಳನ್ನು ಜೀವಂತವಾಗಿ ಇಂದಿನ ಬದುಕಿಗೆ ಜೋಡಿಸುವ ಪ್ರಯತ್ನ ಇದು ಸದಾ ಇಂದಿನ ಸ್ಥಿತಿಗಳನ್ನು ಪ್ರಶ್ನಿಸುತ್ತ ತಿರಸ್ಕರಿಸುತ್ತಾ ನಾಳೆಯ ಸಾಧ್ಯತೆಗಳನ್ನು ಕಲ್ಪಿಸಿಕೊಳ್ಳುತ್ತಿರುತ್ತದೆ. ಇದರಂತೆ ಸಮಕಾಲೀನ ಕಾವ್ಯ ಹೊರತಲ್ಲ. ಇದು ತನ್ನ ಹಿಂದಿನ ಪರಂಪರೆಯ ನೆನಪುಗಳನ್ನು ಕಾಪಿಟ್ಟುಕೊಂಡು ವರ್ತಮಾನದ ದುಸ್ಥಿತಿಯನ್ನು ವಿಶ್ಲೇಷಿಸುತ್ತದೆ. ಸದ್ಯದ ಸ್ಥಿತಿಯಲ್ಲಿ ನಡೆಯುವ ಮನುಷ್ಯ ಬದುಕಿನ ದುರಂತವನ್ನು ಪ್ರಶ್ನಿಸುತ್ತ ಪ್ರತಿಭಟಿಸುವುದು ವ್ಯಕ್ತಗೊಂಡಿದೆ. ಪ್ರತಿಭಟನೆಯೊಂದಿಗೆ ತಾನು ಹೊಂದಿದ ಕನಸು, ತನ್ನ ಕನಸಿನ ಲೋಕವನ್ನು ತನ್ನ ಆಶಯವಾಗಿ ಧ್ವನಿಸುತ್ತಿದೆ. ಪ್ರಭುತ್ವ ತನ್ನ ಕರಾಳತೆಯನ್ನಾಕೆ ಮೆರೆದು ಜನಸಾಮಾನ್ಯ ತಳಸಮುದಾಯದ ಜನರ ಬದುಕನ್ನು ದುಸ್ಥಿತಿಗೆ ತರುವ ಪರಿಯನ್ನು ಎತ್ತಿತೋರಿಸಿದೆ. ಅಪಮಾನ ಅವಮಾನಗಳ ಶೋಷಣೆಗಳು ಪ್ರಭುತ್ವದ ಭಾಗಗಳಾಗಿ ಚಾಚಿಕೊಂಡು ಮನುಷ್ಯನ ಬದುಕನ್ನು ಅಳಿವಿನಂಚಿಕೆ ತರುವುದನ್ನು ಕಾವ್ಯ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

ನಿಸರ್ಗದತ್ತವಾಗಿರುವ ಪ್ರಕೃತಿ ಸಂಪತ್ತಲೂ ಅಸಮಾನತೆಯನ್ನು ಕಾಣುವ ಮನಸ್ಥಿತಿಯನ್ನು ಕವಿ 'ರಮೇಶ ಆರೋಲಿ' ಅವರು ಸಾಲುಗಳಲ್ಲಿ ಗಮನಿಸಿದಾಗ

ಎದೆಗೂಡಿನ ಮಾತು ನಿಂತವು
ಕಂಪನಿ ಭರದಾಗ

ರಂಗಿನ ಗೋಡೆ ಶಹರದಾಗ
ಕುಲ ಗೋತ್ರಕ ಬಣ್ಣ ಬಳೆದನು
ಗ್ಲೋಬಲ್ ಗೌಡಣ್ಣ
ಜೋಪಡಿ ಜಾಗ ನೀಡಿರಣ್ಣಾ[೨೫]

ಅನೇಕ ಬಹುರಾಷ್ಟ್ರೀಯ ಕಂಪನಿಗಳಿಂದಾಗಿ ಸಂಸ್ಕೃತಿಯ ನಾಶವಾಗುವುದರ ಜೊತೆ ಜೊತೆಯಲ್ಲೇ ಮನುಷ್ಯನ ಬದುಕು ಕೂಡ ನಿರಾಶವಾಗಿರುವುದನ್ನು ಧ್ವನಿಸುತ್ತದೆ. ಮೇಲಿನ ಕವಿತೆಯ ಸಾಲುಗಳು, ಆಧುನಿಕತೆಯ ಭರಾಟೆಯಲ್ಲಿ ಸಣ್ಣ ಪುಟ್ಟ ಜಾತಿ ಜಾತಿಗಳ ಮಧ್ಯೆ ನೂರು ನೂರಾರು ಬಣ್ಣ ಬಳಿದು, ಅವುಗಳನ್ನು ಪ್ರತ್ಯೇಕತೆಯ ನೆಪದಲ್ಲಿ ಸಂಘಟಿಸಿ ಅವುಗಳಲ್ಲಿ ಸೀಮಿತ ಮನೋಭಾವನೆ ತುಂಬಿ ಬೇರೆಯವರನ್ನು ಗೌರವಿಸಲಾರದಂತೆ ಪ್ರೀತಿಸಲಾರದಂತೆ ಒಂದು ಸ್ಥಿತಚಿತ್ತಗೊಳಿಸುವ ಹುನ್ನಾರು ಪ್ರಭುತ್ವ ಮಾಡುತ್ತದೆ. ಇದರಿಂದ ತನ್ನ ಅಧಿಕಾರಶಾಹಿ ಧೋರಣೆಯನ್ನು ಪ್ರಬಲಗೊಳಿಸಿಕೊಂಡು ಜನಸಾಮಾನ್ಯರ ಬದುಕನ್ನು ಅತಂತ್ರಗೊಳಿಸುವಲ್ಲಿ ಮುಂದಾಗಿದೆ. 'ಎದೆಗೂಡಿನ ಮಾತು ನಿಂತವು' ಎನ್ನುವ ರೂಪದ ಮನುಷ್ಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಹ ಹತ್ತಿರವಾದ ಸ್ಥಿತಿಯನ್ನು ಹೇಳುತ್ತದೆ. ಕಣ್ಣು ಮುಂದೆ ಅಸಮಾನತೆ, ಶೋಷಣೆ, ನಡೆದರೂ ಅದನ್ನು ಪ್ರಶ್ನಿಸುವ ಮನೋಧೈರ್ಯ ತಾಳದಂತೆ ಹತ್ತಿಕ್ಕುವ ಪ್ರಭುತ್ವದ ಪರಿಯನ್ನು ಕಾವ್ಯ ಸಮರ್ಥವಾಗಿ ಹಿಡಿದಿಟ್ಟಿದೆ. ಜನಸಾಮಾನ್ಯರ ಸ್ವತಂತ್ರ್ಯ ಭೂಮಿ, ಸಂಸ್ಕೃತಿ, ಊಟ, ವಸತಿ ಎಲ್ಲವನ್ನು ಕಸಿದುಕೊಂಡು ನಡುಬೀದಿಯಲ್ಲಿ ಬಿಟ್ಟ ಪ್ರಭುತ್ವಕ್ಕೆ ಹತಾಶನಾಗಿ ತಾವು ಬದುಕಲು ಒಂದಿಷ್ಟು ಜೋಪಡಿಯ ಜಾಗ ನೀಡಿರಣ್ಣಾ ಎಂದು ಕೇಳಿ ಪಡೆಯುವಂತಹ ದಾರುಣಸ್ಥಿತಿ ಬಂದಿರುವುದು ಕಂಡುಬಂದಿದೆ. ಇಂಥ ಧಾರಣ ಸ್ಥಿತಿಯನ್ನು ಸಮಕಾಲೀನ ಕಾವ್ಯ ಅಭಿವ್ಯಕ್ತಿಸಿದೆ. ಈ ನೆಲೆ, ಆಕಾಶ, ಸಂಪತ್ತು, ಗಣಿ, ಗುಡ್ಡ ಎಲ್ಲಾ ನೈಸರ್ಗಿಕ ಸಂಪತ್ತನ್ನು ನೀವೇ ಹಂಚಿಕೊಳ್ಳಿ ನಮಗೆ ನಮ್ಮದೇ ಆದ ಬದುಕನ್ನು ಸಾಗಿಸಲು ಒಂದಿಷ್ಟು ತುಂಡು ಭೂಮಿ ನೀಡಿ ಅಷ್ಟೇ ಸಾಕು ಎನ್ನುವ ಹೃದಯ ಕಲಕುವಂತಹ ಮಾತು ಕೇಳುವುದು ಕಂಡುಬಂದಿದೆ. ಆದರೆ ಈ ಪ್ರಭುತ್ವಕ್ಕೆ ಇಂದು ಕರಣಿಕ ಕೇಳಿ ಇಲ್ಲದಿರುವುದು ಸಹ ಗುರುತಿಸುವ ಸಂಗತಿ.

ವರ್ತಮಾನದ ತಲ್ಲಣಗಳನ್ನು, ಸಾಮಾಜಿಕ ಅನ್ಯಾಯಗಳನ್ನು, ಅಪಮಾನಗಳನ್ನು, ದೃಶ್ಯಾವಳಿಯಂತೆ ತೋರಿಸಿ ಅವುಗಳ ಬಗ್ಗೆ ಚರ್ಚೆ, ವ್ಯಾಖ್ಯಾನ, ಮಾಡಿ ಅವುಗಳ ಬಗ್ಗೆ ಸಮರ್ಪಕ ಎನ್ನುವ ನಿಲುವುಗಳನ್ನು ಬೆಂಬಲಿಸುವ ಆಶಯವವನ್ನು ಸಮಕಾಲೀನ ಕಾವ್ಯ ಹೊಂದಿದೆ. ಒಂದು ಕಾಲದಲ್ಲಿ ಸಾಮಾಜಿಕ ಚಹರೆಗಳನ್ನು ಸಾಹಿತ್ಯ ಹಿಡಿದಿಡುತ್ತಿತ್ತು. ಆದರೆ ಇಂದು ಇದರ ಕೆಲಸ ಅನೇಕ ಪತ್ರಿಕಾ ಮಾಧ್ಯಮಗಳು, ಟಿವಿ ಚಾನೆಲುಗಳು ಇನ್ನೂ ಬೇರೆ ಬೇರೆ ತೆರನಾದ ಮಾಧ್ಯಮಗಳ ಮೂಲಕ ವಿಸ್ತರಿಸಿ ಪ್ರಸ್ತುತ ಪಡಿಸುತ್ತಿರುವುದಾಗಿದೆ. ಇಂಥ

ಒಂದು ಕೆಲಸ ಈ ಹಿಂದೆ ಸಾಹಿತ್ಯದ್ದಾಗಿತ್ತು. ಆದರೆ ಇಂದು ಬದಲಾಗಿದೆ. ಸಾಹಿತ್ಯ ಪ್ರಸ್ತುತಿಯ ಹೊರತಾಗಿ ತಾತ್ವಿಕತೆಯನ್ನು ಹುಡುಕುವ ಹಾಗೂ ಅಭಿವ್ಯಕ್ತಿಸುವ ಕೆಲಸ ಮಾಡುತ್ತಿದೆ. ಇಂದಿನ ಅತಂತ್ರ ಸ್ಥಿತಿಯ ಬದುಕಿಗೆ ಕಾರಣ ಮತ್ತು ಹಿನ್ನೆಲೆ ಅದರ ಮುಂದಾಗುವ ಪರಿಣಾಮಗಳ ಬಗ್ಗೆ ಚಿಂತನೆ ನಡೆಸುತ್ತಿರುವುದು ಹೊಸ ದಾರಿ ಹುಡುಕಿದಂತೆಯಾಗಿದೆ. ಸಾಹಿತ್ಯ ಓದುವ ಮಾರ್ಗವಾಗಿರದೆ ಅರಿವು ಮಾರ್ಗ ಹೊಂದಿರುವುದು ಹೊಸ ಸಂವೇದನೆಗೆ ದಾರಿ ಮಾಡಿದಂತಿದೆ. ಸಾಹಿತ್ಯ, ಕಾವ್ಯ ತನ್ನ ವೈಯಕ್ತಿಕ ಜವಾಬ್ದಾರಿಯ ನಿಯಂತ್ರಣಗಳ ನಡುವೆ ಅದು ತನ್ನ ಕ್ರಿಯಾಶೀಲತೆಯ ಸ್ವೇಚ್ಛಾಚಾರವನ್ನು ಸ್ಪಷ್ಟಪಡಿಸಿಕೊಂಡಿರುವುದು ಕಂಡುಬಂದಿದೆ. ಸ್ಪಷ್ಟಪಡಿಸಿಕೊಂಡಿರುವುದು ಇದು ವರ್ತಮಾನಕ್ಕೆ ಮಾತ್ರ ಇದು ಮುಂದುವರೆದಂತೆ ಬದಲಾಗುವ ಗುಣವನ್ನು ಸಹ ಹೊಂದಿರುವುದು ವಿಶೇಷ ಸಂಗತಿ.

ಮನುಷ್ಯನ ಬದುಕು ನಿಂತ ನೀರಲ್ಲ, ಅದು ತನ್ನ ಪರಂಪರೆಯ ನೆರಳಿನೊಂದಿಗೆ ವರ್ತಮಾನದ ಹೊಸ ಹೂ ಬಿಡುತ್ತ ಮುಂದಾಗುವ ಹೂವಿಗೆ ಬೀಜವಾಗುವ ಪರಿ ಏಕಕಾಲದಲ್ಲಿ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ಆಗುವ ತವಕ ತಲ್ಲಣಗಳನ್ನು ಕಾವ್ಯ ತನ್ನ ಪರಂಪರೆಯ ನೆರಳಲ್ಲಿ ಭವಿಷ್ಯದ ಕನಸಿನೊಂದಿಗೆ ಅಭಿವ್ಯಕ್ತಿಸುವುದು ಕಂಡು ಬಂದಿದೆ. ವರ್ತಮಾನದ ಪಾಠ ಮಾಡುತ್ತ ಭವಿಷತ್ತಿನ ಮನೆಗೆಲಸವನ್ನು ಸಹ ಎಚ್ಚರಿಕೆಯ ಗಂಟೆಯಾಗಿ ನುಡಿಯುತ್ತಿದೆ. ಸ್ವತಂತ್ರಮಯವಾಗಿರುವ ಬದುಕು ಜೀವನ ಪರ ಕಾಳಜಿಯೊಂದಿಗೆ ಸಮೀಕರಿಸಿ ನೋಡುವ ಆಶಯ ಅಭಿವ್ಯಕ್ತಿಗೊಂಡಿರುವುದು ಕಂಡುಬಂದಿದೆ. ಒಟ್ಟಾರೆ ಮನುಷ್ಯ ಅತಂತ್ರಸ್ಥಿತಿಗೆ ಕಾರಣ. ವಾಸ್ತವ ಸ್ಥಿತಿ ಭವಿಷ್ಯದ ಪರಿಣಾಮವನ್ನು ಧ್ವನಿಸಿದೆ ಎನ್ನುವುದು ಮುಖ್ಯ ಸಂಗತಿ.

ಸಮಕಾಲೀನ ಕನ್ನಡ ಕಾವ್ಯದ ತಾತ್ವಿಕ ನೆಲೆ, ಆಶಯದ ನೆಲೆಯಲ್ಲಿ ವಿಷಾದದ ನೆಲೆಯು ಒಂದಾಗಿದೆ. ಪ್ರತಿಯೊಂದು ಕವನ ಸಂಕಲನದಲ್ಲಿ ಕಣ್ಣೀರು, ಅಳು, ಸಂಕಟ ಇರುವುದು ಕಂಡುಬರುತ್ತದೆ. ಕಾವ್ಯದಲ್ಲೇ ಬರುವಂತೆ, ನಾನು ಅಳುತ್ತೇನೆ ನನಗೆ ಕೇಳಿಸದಂತೆ, ಕಣ್ಣೀರು ಮಾರುವ ಮಾರುಕಟ್ಟೆ ಎಂಬ ಸಾಲುಗಳು ಈ ಸಮಕಾಲೀನ ಸಮಸ್ಯೆಗಳನ್ನು ತಿಳಿಸುತ್ತದೆ. ಕವಿಯೊಬ್ಬ ಕಣ್ಣೀರು ಹಾಕುತ್ತಾನೆ, ಅಂದರೆ ಆತನಿಗೆ ಇರುವ ಸಾಮಾಜಿಕ ಜವಾಬ್ದಾರಿ ಗೊತ್ತಾಗುತ್ತದೆ. ಈ ಸಮಸ್ಯೆಯನ್ನು ಕಂಡು ಬದಲಿಸುವ ಕನಸು ಹೊಂದಿ, ಬದಲಿಸಲಾದ ಸ್ಥಿತಿಗೆ ಕಣ್ಣೀರಿಡುವ ಅಸಹಾಯಕತೆಯನ್ನು ವ್ಯಕ್ತಪಡಿಸಿರುವುದು ಕಂಡುಬಂದಿದೆ. ಸಮಾಜದಲ್ಲಿ ನಡೆಯುವ ಅಸಮಾನತೆ, ಜಾತೀಯತೆ, ಅಸ್ಪೃಶ್ಯತೆ, ಮಹಿಳೆಯ ಮೇಲೆ ಹಗಲಲ್ಲೇ ಅತ್ಯಾಚಾರ ಮಾಡುವ ಕ್ರೂರ ಚಿತ್ರಣಕ್ಕೆ ಕವಿ ನೊಂದು ಕಣ್ಣೀರು ಹಾಕುವುದು ಕಾವ್ಯದಲ್ಲಿ ಕಂಡುಬಂದಿದೆ. ಕವಿಯು ಒಂದೊಂದು ಸಾರಿ, ಸಿಟ್ಟು, ವಿಷಾದ, ಅಳು, ಮೌನ ವಹಿಸುತ್ತಾನೆ. ಸಮಾಜದ ಜವಾಬ್ದಾರಿಯಿಂದ ಸಿಟ್ಟಾಗುತ್ತಾನೆ. ವಿಷಾದ ವ್ಯಕ್ತಪಡಿಸುತ್ತಾನೆ. ಅಸಹಾಯಕನಾಗಿ ಮೌನ ವಹಿಸುತ್ತಾನೆ. ಕೊನೆಗೆ ಕಣ್ಣೀರು ಹಾಕುತ್ತಾನೆ. ಅದರಂತೆ, ಸಮಕಾಲೀನ ಕಾವ್ಯದಲ್ಲಿಯೂ ಸಹ

ವಿಷಾದದ ನೆರಳು ಕಂಡು ಬಂದಿದೆ. ಈ ವಿಷಾದದ ನೆಲೆ ಎಂಬ ಅಧ್ಯಯನದಲ್ಲಿ ನೋವಿನ ಸಂಕಥನ, ಪ್ರೀತಿಯ ಹುಡುಕಾಟ, ಮನುಷ್ಯತ್ವ ತುಡಿತ ಬದುಕಿನ ಅಸ್ಥಿರತೆ ಈ ಎಂಬ ನಾಲ್ಕು ಉಪಶೀರ್ಷಿಕೆಯಲ್ಲಿ ಕಾವ್ಯದ ನೆಲೆಯನ್ನು ಅಧ್ಯಯನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೧೭.

೨. ಲಕ್ಕೂರ ಆನಂದ, **ಉರಿವ ಏಕಾಂತ ದೀಪ,** ಪುಟ ೩೦.

೩. ಲಕ್ಷ್ಮೀನಾರಾಯಣಭಟ್ಟ, **ಪರಸ್ಪರ,** ಪುಟ ೨೦೦.

೪. ವಿಠ್ಠಲ ದಳವಾಯಿ, **ಭೋದಿ ನೆರಳಿನ ಹಾದಿ,** ಪುಟ ೧೨.

೫. ಮಮ್ತಾಜ್ ಬೇಗಂ, **ಕಬಂಧ ಬಾಹುಗಳು ಬೇಕಿಲ್ಲ,** ಪುಟ ೪.

೬. ಆರೀಫ್ ರಾಜಾ, **ಬೆಂಕಿಗೆ ತೊಡಿಸಿದ ಬಟ್ಟೆ,** ಪುಟ ೬೪.

೭. ಎನ್ಕೆ. ಹನುಮಂತಯ್ಯ, **ಮಾಂಸದಂಗಡಿಯ ನವಿಲು,** ಪುಟ ೨೨.

೮. ವಿಭಾ, **ಜೀವ ಮಿಡಿತದ ಸದ್ದು,** ಪುಟ ೧೬.

೯. ಬಸವರಾಜ ಕಲ್ಗುಡಿ(ಸಂ), **ಕಂಬಾರ ಸಾಹಿತ್ಯ ನೆಲೆ-ಬೆಲೆ,** ಪುಟ ೪.

೧೦. ಶಿವರಾಜ ಬೆಟ್ಟದೂರು, **ಈ ಲೋಕದ ಇನ್ನೊಂದು ಗಿಡ,** ಪುಟ ೫೪.

೧೧. ಡಿ.ಆರ್. ನಾಗರಾಜ., **ಶಕ್ತಿ ಶಾರದ ಮೇಳ,** ಪುಟ ೫೪.

೧೨. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೪೭.

೧೩. ಮಂಜುನಾಥ ಎಸ್., **ಬೊಗಸೆ ಜಲ ಒಂದು ಜೀವಕ್ಕಾಗಿ,** ಪುಟ ೨೯.

೧೪. ನಾಗಣ್ಣ ಕಿಲಾರಿ, **ತಪಸ್ಸಿಗಿಳಿದ ಮಳೆ,** ಪುಟ ೧೬.

೧೫. ರಮೇಶ ಅರೋಲಿ, **ಜುಲುಮೆ,** ಪುಟ ೧೯.



ಅಧ್ಯಾಯ : ಐದು

# ಇತ್ತೀಚಿನ ಕನ್ನಡ ಕಾವ್ಯ : ಬಹುಕೇಂದ್ರಿಯ ನೆಲೆಗಳು

೫.೧. ಸಾಮಾಜಿಕ ಸಮನ್ವಯತೆ
೫.೨. ದಮನಿತ ಸಮುದಾಯದ ಧ್ವನಿಯಾಗಿ ಕಾವ್ಯ
೫.೩. ಅಖಂಡತೆ
೫.೪. ದೈವಕೇಂದ್ರಿಯ ನೆಲೆ
೫.೫. ಕಾವ್ಯದ ಇತರ ಪ್ರಕಾರಗಳು
೫.೫.೧. ಗಜಲ್
೫.೫.೨. ಹೋರಾಟದ ಹಾಡುಗಳು

ಅಧ್ಯಾಯ : ಐದು

# ಇತ್ತೀಚಿನ ಕನ್ನಡ ಕಾವ್ಯ : ಬಹುಕೇಂದ್ರಿಯ ನೆಲೆಗಳು

ಕನ್ನಡ ಕಾವ್ಯ ಪರಂಪರೆಯು ಒಂದು ವಿಶಿಷ್ಟ ರೀತಿಯಲ್ಲಿ ಸಾಗಿ ಬಂದಿದೆ. ಹೊಸ ಹೊಸ ಸ್ವರೂಪವನ್ನು ಪಡೆಯುತ್ತಾ, ಒಳಬಂಡಾಯ ಧೋರಣೆಯನ್ನು ತಾಳುತ್ತ ಸಾಗಿ ಬಂದಿದೆ. ಪ್ರಾರಂಭದಲ್ಲಿ ಒಂದು ಕೇಂದ್ರಿತವಾದ ಆಶಯದ ನೆಲೆಯಲ್ಲಿ ರಚಿತಗೊಂಡರು. ಹಲವು ಅಂಶಗಳ ಕುರಿತಾಗಿ ಧ್ವನಿ ಎತ್ತುತ್ತಿರುವುದು ಕಂಡುಬಂದಿದೆ. ಆಶಯದ ಪ್ರಧಾನತೆಯಲ್ಲೇ ಭಾಗ ಮಾಡಿದ ಬಗೆಯೂ ಒಂದಾಗಿದೆ. ಭಕ್ತಿ, ಶೌರ್ಯ, ಲೌಕಿಕ ಆಗಮಿಕ ಈ ತರನಾದ ಆಶಯ ಕೇಂದ್ರಿತದ ಮುಂದುವರಿಕೆಯಂತೆ ಸ್ವರೂಪದ ಹಿನ್ನೆಲೆಯೂ, ಚಳವಳಿಯ ಹಿನ್ನೆಲೆಯೂ ಕಾವ್ಯ ಸಾಗಿ ಬಂದಿದೆ. ಒಂದು ಕೇಂದ್ರಿತ ಆಶಯಕ್ಕೆ ಸಂಬಂಧಿಸಿದಂತೆ ಎಲ್ಲಾ ಸಾಹಿತಿಗಳು, ಕವಿಗಳು ಕಾವ್ಯ ರಚಿಸುವುದಾಗಿದೆ. ನವೋದಯ ಪ್ರಗತಿಶೀಲ ನವ್ಯ, ಬಂಡಾಯ, ದಲಿತ ಹೀಗೆ ಈ ಪಂಥಗಳಿಗೆ ಒಂದು ಕೇಂದ್ರ ಆಶಯವನ್ನು ಗಮನಿಸಬಹುದು. ಆದರೆ ಪ್ರಸ್ತುತ ಸಮಕಾಲೀನ ಕಾವ್ಯಕ್ಕೆ ಗುರುತಿಸಬಹುದಾದ ಒಂದು ಕೇಂದ್ರ ಇಲ್ಲ. ಇದು ಬಹುಕೇಂದ್ರಿಯ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಪರಂಪರೆಯಲ್ಲಿ ತಮಗೆ ಬೇಕಾದ ಅಂಶವನ್ನು ಪಡೆಯುತ್ತ, ಸಮ್ಮತಿಸುತ್ತ, ಪ್ರತಿಭಟಿಸುತ್ತ ತಮ್ಮ ಕಾವ್ಯ ಅಭಿವ್ಯಕ್ತಿಸುತ್ತಿದ್ದಾರೆ. ಕೆಲವೊಬ್ಬ ಕವಿಗಳಿಗೆ ಸೌಹಾರ್ದತೆಯು ಮುಖ್ಯವಾದರೆ, ಇನ್ನೊಬ್ಬರಿಗೆ ಜಾಗತೀಕರಣ, ಮತ್ತೊಬ್ಬರಿಗೆ ಸ್ಲಮ್ ಬದುಕು ಮತ್ತೊಬ್ಬರಿಗೆ ಸಮುದಾಯದ ಸಂಕಟ ಇನ್ನೊಬ್ಬರಿಗೆ ಆಹಾರ ರಾಜಕಾರಣ ಹೀಗೆ ಒಂದೇ ನೆಲೆಯಲ್ಲಿ ನಿಲ್ಲದೆ ಹಲವು ನೆಲೆಯಲ್ಲಿ ಆಶಯವನ್ನು ವ್ಯಕ್ತಪಡಿಸುತ್ತಿರುವುದು ಕಂಡುಬಂದಿದೆ. ಹಳಗನ್ನಡದಿಂದ, ವಚನಸಾಹಿತ್ಯದಿಂದ, ದಾಸಸಾಹಿತ್ಯದಿಂದ, ಆಧುನಿಕ ಸಾಹಿತ್ಯದಿಂದ, ಪಾಶ್ಚಾತ್ಯ ಸಾಹಿತ್ಯದಿಂದ ತಮಗೆ ಬೇಕಾದ ಅಂಶಗಳನ್ನು ಪಡೆಯುತ್ತ ಹೊಸ ರೂಪ ಕೊಟ್ಟ ಮರುಸೃಷ್ಟಿ ಮಾಡುವುದು ಒಂದು ವಿಶಿಷ್ಟತೆಯಾಗಿದೆ. ಹೀಗೆ ಸಮಕಾಲೀನಕ್ಕೂ ಬಹುಕೇಂದ್ರಿಯ ನೆಲೆಯಲ್ಲಿ ಕಾವ್ಯ ಪರಂಪರೆಯನ್ನು ಮುಂದುವರೆಸುತ್ತಿರುವುದು ಕಂಡುಬಂದಿದೆ.

ಕುವೆಂಪು ಹೇಳಿದ ಮಾತಲ್ಲಿ ಇಂದಿನ ಕಾವ್ಯದ ಆಶಯ ಗ್ರಹಿಸಬಹುದಾಗಿದೆ.

ಯಾವ ಮತದವನಲ್ಲ  
ಎಲ್ಲ ಮತದವನು

ಯಾವ ಪಂಥವು ಇಲ್ಲ
ಬಹುಪಂಥದವನು
ಎಲ್ಲ ಬಿಡುವವನಲ್ಲ
ಎಲ್ಲ ಹಿಡಿಯುವವನಲ್ಲ[೧]

ಈ ಮಾತುಗಳನ್ನು ಕುವೆಂಪು ಅವರು ಹೇಳಿದ್ದಾರೆ. ಇದರಂತೆ ಸಮಕಾಲೀನ ಕಾವ್ಯ ಒಂದೇ ಪಂಥಕ್ಕೆ, ಮತಕ್ಕೆ ಸೀಮಿತವಾಗದೆ ಬಹುಪಂಥದವರು ಹಾಗೇ ಎಲ್ಲವನ್ನು ಹಿಡಿಯುವುದಿಲ್ಲ ಹಾಗೇ ಎಲ್ಲವನ್ನು ಬಿಡುವುದಿಲ್ಲ ತಮಗೆ ಒಪ್ಪಿಗೆಯಾದ ಅಂಶಗಳನ್ನು ಮಾತ್ರ ಹಿಡಿಯುತ್ತೇವೆ ಎಂದು ಸಾರಿದಂತಿದೆ. ಇದು ಸಮಕಾಲೀನ ಕಾವ್ಯದ ಆಶಯವನ್ನು ಗ್ರಹಿಸುವ ಸಾಲುಗಳೆಂದರೆ ತಪ್ಪಾಗದು.

**೫.೧. ಸಾಮಾಜಿಕ ಸಮನ್ವಯತೆ**

ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ, ನವ್ಯೋತ್ತರ ಹೀಗೆ ಎಲ್ಲಾ ಕಾಲಘಟ್ಟವನ್ನು ದಾಟಿ ಬಂದು ಇಂದು ನಿಂತಿರುವ ಕನ್ನಡಕಾವ್ಯ ಪರಂಪರೆಯ ಕೊಂಡಿ ಸಮಕಾಲೀನ ಕಾವ್ಯವಾಗಿದೆ. ಹಲವಾರು ಪ್ರೇರಣೆ, ಪ್ರಭಾವಗಳಿಂದ, ಸ್ವಂತಿಕೆಯ ಸೃಜನಶೀಲತೆಯಿದ ಇಂದಿನ ಕಾವ್ಯ ಹೊಸ ಹೊಸ ಸಂವೇದನೆಗಳನ್ನು, ನುಡಿಗಟ್ಟು, ರೂಪಕಗಳನ್ನು ಸೃಷ್ಟಿಸುತ್ತಿದೆ. ಸಾಹಿತ್ಯ ಸಮಾಜದ ಶಿಶುವಾಗಿದೆ. ಸಾಹಿತ್ಯದಲ್ಲಿ ಭಾಗವಾದ ಕಾವ್ಯವು ಸಮಾಜವನ್ನು ಪ್ರತಿನಿಧಿಸುತ್ತದೆ ಹಾಗೂ ಸಮಾಜದಲ್ಲಿನ ಚಿತ್ರಣವನ್ನು ಚಿತ್ರಿಸುವುದರ ಜೊತೆಗೆ ನಾಳೆಯ ಕನಸಿನ ಆಶಯವನ್ನು ಒಳಗೊಂಡಿದೆ. ನಮ್ಮ ಸಮಾಜ ಬಹುಸಂಸ್ಕೃತಿಯ ಕಲೆ. ಇಂತಹ ನೆಲದಲ್ಲಿ ಸಾಮರಸ್ಯ, ಸೌಹಾರ್ದದ ಕೊರತೆಯಾಗುತ್ತಿರುವುದಕ್ಕೆ ಮರುಗಿ ಸಾಮಾಜಿಕ ಸಮನ್ವಯತೆಗಾಗಿ ಮಿಡಿಯುವುದು ಕಂಡುಬಂದಿದೆ. ಹೊಸ ಹೊಸ ಮನೋಧರ್ಮವನ್ನು ವ್ಯಕ್ತಪಡಿಸಲು ಹೊಸ ನಾಲಿಗೆ, ಹೊಸ ನುಡಿಗಟ್ಟು ರೂಪಗೊಳ್ಳುತ್ತಿವೆ. ಈ ಬಗೆಯಲ್ಲಿ ಇಂದಿನ ಕವಿಗಳು ವಿಶಿಷ್ಟ ನೆಲೆಯಲ್ಲಿ, ಯೋಚನೆಯಲ್ಲಿ ಹೊಸತನಕ್ಕಾಗಿ ಹಂಬಲಿಸುತ್ತಿರುವುದು ತಮ್ಮ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಈ ರೀತಿಯ ಹೊಸತನದ ಆಶಯದಲ್ಲಿ ಒಂದಾದ ಸಾಮಾಜಿಕ ಸಮನ್ವಯತೆಗಾಗಿ ಮಿಡಿಯುತ್ತಿರುವುದು, ಧ್ವನಿಸುತ್ತಿರುವುದು ಸಮಕಾಲೀನ ಕಾವ್ಯದಲ್ಲಿ ಕಂಡುಬಂದಿದೆ. ಕಳೆದ ಎರಡು ದಶಕಗಳಿಂದ ಕನ್ನಡ ಸಮಾಜವು ಅನುಭವಿಸುತ್ತಿರುವ ಬಿಕ್ಕಟ್ಟುಗಳು ಗಂಭೀರ ಸ್ವರೂಪದ್ದವು. ಜಾಗತೀಕರಣದ ಹೆಸರಲ್ಲಿ ಅಂತಾರಾಷ್ಟ್ರೀಯ ಬಂಡವಾಳಶಾಹಿ ನೆಲಸಂಸ್ಕೃತಿಯನ್ನು ನಾಶ ಮಾಡುತ್ತಿರುವುದು ನೋವಿನ ಸಂಗತಿ. ಇದರ ಭಾಗವಾಗಿ ಈ ನೆಲ ಮೂಲ ಸಂಸ್ಕೃತಿಯೊಂದಾದ ಸೌಹಾರ್ದ, ಸಹಬಾಳ್ವೆ ಸಾಮರಸ್ಯದಿಂದ ಬದುಕುತ್ತಿದ್ದ ಜನಸಮುದಾಯಗಳು ಗಂಭೀರ ಸ್ಥಿತಿಗೆ ಹೊರಳಿರುವುದು ಕಂಡು ಮತ್ತು ಸಾಮರಸ್ಯ ಸಮಕಾಲೀನ ಕಾವ್ಯ ಹಂಬಲಿಸಿರುವುದು ವ್ಯಕ್ತಗೊಂಡಿದೆ.

ಸಮಾಜದಲ್ಲಿ ಜನರ ಜೀವನ ಕ್ರಮ, ಆಲೋಚನಾ ವಿಧಾನ ಎಲ್ಲವೂ ಬದಲಾಗಿದೆ. ಬದಲಾದ ಸನ್ನಿವೇಶವನ್ನು ಹಿಡಿಯಲು ಹೊಸ ಸಾಹಿತ್ಯಿಕ ನೆಲೆಗಳು/ಆಶಯಗಳು ಅಗತ್ಯವಿದೆ.

ಇಂಥ ಸಂದರ್ಭದಲ್ಲಿ ಹೊಸ ಭಾಷೆಯ ಅಗತ್ಯ ಎದ್ದು ಕಾಣುತ್ತಿದೆ. ಪ್ರಕಾರದ ಆಯಾಯ ಭಾಷೆಯ ಬಳಕೆ ಮತ್ತು ಜೀವನದೃಷ್ಟಿ ಕುರಿತು ಬಿಕ್ಕಟ್ಟುಗಳನ್ನು ಎದುರಿಸುತ್ತಾರೆ. ತಮ್ಮ ಅನುಭವವನ್ನು ಎಷ್ಟು ಹೊಸದಾಗಿದೆ ಎಂದು ಪ್ರಶ್ನಿಸಿಕೊಳ್ಳುತ್ತಾ ತನ್ನ ಅಸ್ತಿತ್ವವನ್ನು ಕಾಪಿಟ್ಟುಕೊಂಡಿದೆ ಸಮಕಾಲೀನ ಕಾವ್ಯ.

ಸಮಾಜದಲ್ಲಿ ಬಹು ಜನಸಂಸ್ಕೃತಿ, ಬಹು ಜನಸಮುದಾಯದ ಜನರು ಬದುಕುತ್ತದೆ. ಈ ಬಹುಸಂಸ್ಕೃತಿಯ ಜನರನ್ನು ನ್ಯಾಯ ರೀತಿಯಲ್ಲಿ ಹೊಂದಾಣಿಕೆಯ ನೆಲೆಯಲ್ಲಿ ಒಗ್ಗೂಡಿಸುವ ಆಶಯವನ್ನು ಕವಿ ಪೀರಭಾಷಾ ಅವರು ತಮ್ಮ ಕವಿತೆಯಲ್ಲಿ ಈ ರೀತಿ ವ್ಯಕ್ತಪಡಿಸಿರುವುದು ಗಮನಿಸಬಹುದಾಗಿದೆ.

ನಮ್ಮ ದೇಹದ ಒಳಗಡೆ ಹರಿಯುವ ರಕ್ತ
ನರನಾಡಿಗಳ ಸಂಕೇತ
ಇಲ್ಲಿ ಬೀಸುವ ಈ ತಂಗಾಳಿ
ನಮ್ಮ ಬದುಕಿನ ಭಾವದ ಚಿಲುಮೆ
ಬೆಳಗಿನ ಸೂರ್ಯನ ಬಿಂಬ
ನಮ್ಮ ಶ್ರಮದ ಸ್ಫೂರ್ತಿಯ ಪ್ರತಿಮೆ
ನಾವೇ ಈ ದೇಶ
ನಾವೇ ಈ ವಿಶ್ವ
ನಾವೆಲ್ಲರೂ ಒಂದೇ ಹೂವಿನ ದಳಗಳು
ಒಂದೇ ಸಾಗರದಲೆಗಳು[3]

ದೇಹ ದೇಶ ಒಂದೇ ನೆಲೆಯಲ್ಲಿ ನೋಡುವ ಕ್ರಮವಾಗಿದೆ. ದೇಹದಲ್ಲಿ ಹಲವು ಭಾಗಗಳಿದ್ದರೂ ಒಂದೇ ಸಂಪೂರ್ಣ ದೇಹವಾದ ಸ್ವರೂಪ ಪಡೆದಿದೆ. ಸರ್ವಸಮಾನತೆಯ ಗೌರವ ದೇಹದ ಭಾಗಗಳಿಗೆ ಸಲ್ಲುವ ರೀತಿಯಲ್ಲಿ ಈ ನೆಲದ ಜನತೆಗೆ ಸರ್ವಸಮಾನತೆಯ ಗೌರವವು ಧಕ್ಕಬೇಕಾದದ್ದು. ದೇಶವೆಂದಾಕ್ಷಣ ಗಡಿರೇಖೆ ಅಲ್ಲ. ಜನ ಜನರೇ ದೇಶ ಎನ್ನುವ ಆಶಯ ಸಾಗುತ್ತವೆ. ಮೇಲಿನ ಕವಿತೆಯ ಸಾಲುಗಳು ನಮ್ಮದು ಶ್ರಮ ಸಂಸ್ಕೃತಿಯ ನೆಲವಾಗಿದೆ. ನಿಸರ್ಗ ಯಾವ ತಾರತಮ್ಯ ಮಾಡದೇ ಸಮಾನ ರೀತಿಯಲ್ಲಿ ಗಾಳಿ, ಬೆಳಕು ನೀರನ್ನು ನೀಡುತ್ತದೆ. ಇಂಥ ಮನೋಧರ್ಮ ಪ್ರತಿಯೊಬ್ಬ ಮನುಷ್ಯ ಪಡೆಯಬೇಕಿದೆ. ಜಾತಿಯಾಧಾರದ ಮೇಲೆ, ಧರ್ಮದ ಆಧಾರದ ಮೇಲೆ, ವರ್ಣ ಆಧಾರದ ಮೇಲೆ ಗಾಳಿ, ಬೆಳಕು ಹರಿಯುವುದಿಲ್ಲ. ಅದು ಸರ್ವ ಸಮಾನತೆಯಲ್ಲಿ ತಲುಪುತ್ತವೆ. ಅಂತ ಇಂಥ ಮನಸ್ಥಿತಿಯು ಮನುಷ್ಯನಲ್ಲಿ ಬಂದಾಗ ಸರ್ವರೂ ಒಂದಾಗಿ ಹೊಂದಾಣಿಕೆಯಿಂದ ಸಾಮರಸ್ಯದಿಂದ ಬಾಳಬಹುದೆಂಬ ಸಾಮರಸ್ಯದ ಆಶಯ ಸಮಕಾಲೀನ ಕಾವ್ಯ ಒಳಗೊಂಡಿದೆ. ನಾವೇ ಈ ದೇಶ, ನಾವೇ ಈ ವಿಶ್ವ, ನಾವೆಲ್ಲ ಒಂದೇ ಹೂವಿನದಳಗಳಾಗಿ ಬದುಕೋಣ. ಪ್ರೀತಿ, ಪ್ರೇಮ ಸ್ನೇಹದಿಂದ ಬಾಳಿ

ಸಾಮರಸ್ಯದ ಬೆಳಕು ಹಂಚೋಣ ಎನ್ನುವ ಆಶಯ ಹೊತ್ತು ನಿಂತಂತಿದೆ. ಆ ತಾತ್ವಿಕ ನೆಲೆಯಲ್ಲಿ ಇಂದಿನ ಕಾವ್ಯ ರಚಿತಗೊಳ್ಳುತ್ತಿರುವುದು ಕಂಡುಬಂದಿದೆ.

ಇದೇ ರೀತಿಯ ಆಶಯವನ್ನು ಒಳಗೊಂಡಿರುವ ಕವಿಗಳಾದ ಆರೀಫ್ ರಾಜಾ, ವೀರಣ್ಣ ಮಡಿವಾಳರ, ಲಕ್ಕೂರ ಆನಂದ, ನಾಗಣ್ಣ ಕಿಲಾರಿ, ಎಸ್. ಮಂಜುನಾಥ, ವಿಭಾ, ಅನುಪಮಾ ಎಚ್.ಎಸ್., ಬಿ. ಶ್ರೀನಿವಾಸ, ಸೈಫ್ ಜಾನ್ಸಿ ಕೊಟ್ಟೂರು, ಕಾವ್ಯ ಕಡೆಮೆ, ತಾರಿಣಿ ಶುಭಾದಾಯಿಣಿ, ಜ.ನ. ತೇಜಶ್ರೀ, ಕಾರ್ಪೇಂಟರ್ ಇನ್ನು ಮುಂತಾದ ಕವಿಗಳು ತಮ್ಮ ಕಾವ್ಯದಲ್ಲಿ ಸಾಮಾಜಿಕ ಸಮನ್ವಯತೆಯ ಆಶಯವನ್ನು ಅಭಿವ್ಯಕ್ತಿಸಿ ಕಾವ್ಯ ರಚಿಸುತ್ತಿರುವುದು ಕಂಡು ಬಂದಿದೆ. ಸಮಕಾಲೀನ ಕನ್ನಡ ಕಾವ್ಯಕ್ಕೆ ಮೂಲ ಭಾಗದಿಂದಲೂ ಪ್ರೇರಣೆ ಪಡೆದಂತೆ. ಜನಪದದ ಪ್ರೇರಣೆಯ ಭಾಗವಾಗಿಯೇ ಸಾಮರಸ್ಯದ, ಸಮನ್ವತೆಯನ್ನು ನೆಚ್ಚಿಕೊಂಡಿರುವುದಾಗಿದೆ. ಜನಪದ ಕಾವ್ಯ ವಿಶಿಷ್ಟ ಸಂಸ್ಕೃತಿಯಲ್ಲಿ ಹುಟ್ಟಿಕೊಂಡಿದ್ದು. ಅದು ಒಬ್ಬರನೊಬ್ಬರು ಒಳಗೊಂಡು ಹೊಂದಾಣಿಕೆಯಿಂದ ಬೆರೆತು ಒಂದು ಸಮುದಾಯವಾಗಿ ಜೀವನ ನಡೆಸಿರುವುದು. ಜನಪದ ಕಾವ್ಯಕ್ಕೂ ಮೌಲ್ಯಗಳಿಗೂ ಇರುವ ಸಂಬಂಧ ವಿಶಿಷ್ಟ ಬಗೆಯದಾಗಿದೆ. ಜನಪದ ಕವಿಗಳೆಲ್ಲ ತಮ್ಮ ಸಾಮಾಜಿಕ ವ್ಯವಸ್ಥೆಗೆ ಒಪ್ಪಿತವಾಗಿದ್ದ ಮೌಲ್ಯಗಳನ್ನು ತಾವೂ ಒಪ್ಪಿಕೊಂಡು ಜೀವಪರ ಕಾಳಜಿಯನ್ನು ಹೊಂದಿರುವುದು ಕಾಣಬಹುದು. ಇದನ್ನು ಹಳ್ಳಿಗಾಡಿನಲ್ಲಿ ಹೆಚ್ಚಾಗಿ ಕಾಣುತ್ತೇವೆ. ಇದರ ಪ್ರೇರಣೆ ಸಮಕಾಲೀನ ಕಾವ್ಯದ ಮೇಲಿದೆ. ಆದ್ದರಿಂದ ಮೌಲ್ಯಗಳ ಜೀವಂತಿಕೆಯ ಉಸಿರಾಟವನ್ನು ಇಂದಿನ ಕಾವ್ಯ ಉಸಿರಾಡುತ್ತಿದೆ. ಸಮಕಾಲೀನ ಕವಿಗಳು ಬಹುತೇಕ ಹಳ್ಳಿಗಾಡಿನಿಂದ ಹೊರಹೊಮ್ಮುತ್ತಿರುವ ಕವಿಗಳಾಗಿದ್ದಾರೆ. ಹೀಗಾಗಿ ಅವರಿಗೆ ಹಳ್ಳಿಗಾಡಿನ ಜಾನಪದ ಸಂಸ್ಕೃತಿಯು ಪ್ರಭಾವ ಬರುವುದರಲ್ಲಿ ಯಾವ ಅನುಮಾನವಿಲ್ಲ.

ಸಮನ್ವಯತೆ ಕೇವಲ ಜನರ ಮಧ್ಯ ಮಾತ್ರವಲ್ಲಿ ತನ್ನ ಸುತ್ತಮುತ್ತಲಿನ ಪರಿಸರದೊಂದಿಗೂ ಸಮನ್ವಯತೆಯನ್ನು ಹೊಂದಬೇಕೆಂಬ ಆಶಯ ಕಾಣಬಹುದು. ಜಾತಿ ಜಾತಿಯ ಮಧ್ಯ ಧರ್ಮ ಧರ್ಮದ ಮಧ್ಯ ಗಡಿ ಭಾಗಗಳನ್ನು ಭಾಷಿಕ ಭಾಗಗಳನ್ನು ಸಮುದಾಯದ ಭಾಗಗಳನ್ನು ಮೀರಿ ಐಕ್ಯತೆಯಿಂದ ಬದುಕನ್ನು ಸಾಗಿಸುವುದು ಹೇಗೆ ಅದರ ಪರಿಣಾಮ ಯಾವ ರೀತಿಯಾಗಿರುತ್ತವೆ ಎಂಬುದನ್ನು ಕಾವ್ಯ ಹೇಳುತ್ತಿದೆ. ವ್ಯಕ್ತಿ ಗೌರವದ ಜೊತೆಗೆ ವೃತ್ತಿ ಗೌರವ, ಕಾಯದ ಗೌರವ, ಮುಖ್ಯ ಕಾಯಕ ಅಂದರೆ ಕೆಲಸ ಮಾಡುವಲ್ಲಿ ತೋರುವ ಅಸಮಾನತೆಯನ್ನು ಧಿಕ್ಕರಿಸಿ ಸರ್ವ ಕಾಯಕವು ಮೌಲ್ಯಯುತವಾದದ್ದು ಎನ್ನುವ ಸಾರ ಸಾರುತ್ತಿದೆ ಸಮಕಾಲೀನ ಕಾವ್ಯ. ಆಧುನಿಕತೆಯನ್ನು ಒಪ್ಪಿಕೊಳ್ಳುವುದರ ಜೊತೆ ಜೊತೆಯಲ್ಲಿ ಪರಂಪರೆಯನ್ನು ಸ್ಮರಿಸುತ್ತದೆ, ಉಳಿಸುತ್ತದೆ ಹಾಗೂ ವೈಚಾರಿಕ ನೆಲೆಯತ್ತ ಸಾಗುವುದನ್ನು ಸಹ ಮರೆಯುವುದಿಲ್ಲ. ಸಮಕಾಲೀನ ಕಾವ್ಯದಲ್ಲಿ ವೈಚಾರಿಕತೆಯ ಶೋಧ ಇರುವುದಾಗಿದೆ. ಈ ವೈಚಾರಿಕತೆಯು ಮೂಡಬೇಕಾದರೆ ಸಾಮಾಜಿಕ ಸಮನ್ವಯತೆ ಮುಖ್ಯವಾದದ್ದು ಎಂಬ ನೆಲೆಯನ್ನು ಸಹ ಕಾವ್ಯ ತನ್ನ ಗಮನದಲ್ಲಿಟ್ಟುಕೊಂಡಿದೆ.

ಸಮಾಜದಲ್ಲಿ ಹಲವು ಸಮುದಾಯದ ಜನರು ಹಾಗೂ ಹಲವು ಧರ್ಮದ ಜನರ ಇರುವುದು ನಾವು ಕಾಣುತ್ತೇವೆ. ಜೊತೆಗೆ ಬಹುಸಂಸ್ಕೃತಿಯ ಆಚರಣೆಯೂ ವಿಶಿಷ್ಟ ಐಕ್ಯತೆಯಲ್ಲಿ ಇದ್ದರೂ ಪರಸ್ಪರ ಕಲಹ ವೈಷಮ್ಯಗಳಿಂದಾಗಿ ಅನೇಕ ಅಪಾಯಕಾರಿ ಘಟನೆಗಳ ಸಂಬಂಧಿಸಿದಂತೆ ವರ್ತಮಾನದ ದುಸ್ಥಿತಿಯನ್ನು ಚಿತ್ರಿಸುತ್ತ, ತಡೆಯುತ್ತ ಮುಂದಿನ ಸೌಹಾರ್ದತೆ ಇದು ಸಂಭವಿಸದಂತೆ ಕನಸು ಕಾಣುವ ಸಮಕಾಲೀನ ಕಾವ್ಯದ ಆಶಯವನ್ನು ಗುರುತಿಸಲು ಸಹಾಯವಾದ ಸಾಲುಗಳನ್ನು ಗಮನಿಸಬಹುದಾಗಿದೆ.

ಒಂದು ಕೈಯಲ್ಲಿ ಕತ್ತರಿ
ಮುಖವಾಡ ಒಡೆದು ಬಯಲಾಗಲು
ಮತ್ತೊಂದು ಕೈಯಲ್ಲಿ ಸೂಜಿ
ಲೋಕದ ಮಾನ ಕಾಪಾಡಲು
ಕಾಲಿನಿಂದ ಪಡೆಲು ತುಳಿಯುವ ಅಮ್ಮಿ
ಚಕ್ರ ತಿರುಗಿಸಿದಂತೆಲ್ಲಾ ಇತಿಹಾಸ
ಒಂದು ಸುತ್ತ ಉರುಳುತ್ತದೆ.[೩]

ಈ ಮೇಲಿನ ಕವಿತೆಯ ಆಶಯ ಸೌಹಾರ್ದ, ಸಾಮರಸ್ಯ, ಸಮನ್ವಯತೆಯ ಸೂಚಕವಾಗಿದೆ. ಕತ್ತರಿಯ ಮನುಷ್ಯನಲ್ಲಿರುವ ಧರ್ಮಾಂಧತೆಯನ್ನು ಕತ್ತರಿಸಿ ಹಾಕಿ, ಅವನಲ್ಲಿ ಮನುಷ್ಯತ್ವ ಗುಣ ತುಂಬಿ ಮತ್ತೊಂದು ಕೈಯಲ್ಲಿ ಪ್ರೀತಿ, ಪ್ರೇಮದ ಆಶಯವನ್ನು ನೀಡಿ ಇನ್ನೊಂದು ಭಾಗವನ್ನು ಜೋಡಿಸುವುದು ಇನ್ನೊಂದು ಭಾಗ ಇಲ್ಲಿ ಬೇಕೆಂದು ಸಮುದಾಯದ ಜನರ ಪ್ರತೀಕವಾಗಿದೆ. ಇಲ್ಲಿ ಎರಡು ಜೀವನ ಸಮುದಾಯಗಳು ತಮ್ಮ ಕಟ್ಟಳೆಯನ್ನು, ಕಂದಕಗಳನ್ನು ಮೀರಿ ಒಂದಾಗಲು ಕರೆ ಕೊಟ್ಟಂತಿದೆ. ಇದಕ್ಕೆ ಪ್ರೇರಣೆ ಎನ್ನುವಂತೆ ಬಸವಣ್ಣ ವಚನವನ್ನು ನೋಡಬಹುದಾಗಿದೆ. ಇವನಾರವ ಇವನಾರವ ಎಂದು ನೋಡದೆ ಇವ ನಮ್ಮವ ಇವ ನಮ್ಮವ ಎಂದು ಒಂದು ಸೌಹಾರ್ದತೆಯಲ್ಲಿ ಒಳಗೊಳ್ಳುವಿಕೆಯನ್ನು ಬಯಸಿರುವಂತಿದೆ.

ಪ್ರಜಾಪ್ರಭುತ್ವದ ನಾಡಲ್ಲಿ ಪರಸ್ಪರ ಒಳಗೊಳ್ಳುವಿಕೆಯು ಮುಖ್ಯವಾದ ಅಂಶ. ಒಬ್ಬರು ಇನ್ನೊಬ್ಬರನ್ನು ಗೌರವಿಸಿ ಒಳಗೊಳ್ಳುವಿಕೆ ಪ್ರಕ್ರಿಯೆಗೆ ಮುಂದಾಗಬೇಕು. ನಮ್ಮ ಪ್ರಜಾಪ್ರಭುತ್ವದ ದೇಶವಾದ ಭಾರತದಲ್ಲಿ ಹಲವು ಸಮುದಾಯದ ಜನರಿದ್ದಾರೆ. ಅವರು ಎಲ್ಲರೂ ಪರಸ್ಪರ ಒಳಗೊಳ್ಳುವಿಕೆ ಪಾಲ್ಗೊಳ್ಳುವುದು ಮುಖ್ಯವಾದ ಅಂಶ. ಇದಕ್ಕೆ ಬಸವಣ್ಣ ಜಾತಿ ಸಂಕರ ವ್ಯವಸ್ಥೆಯನ್ನು ತರುವಲ್ಲಿ ವ್ಯಕ್ತಿಯ ಹೆಸರಲ್ಲೂ ಜಾತಿ ಸೂಚಕವನ್ನು ನೋಡುವ ದುರಂತ ಸ್ಥಿತಿ ತಲುಪಿದ್ದೇವೆ. ಕೆಲವು ಸಮುದಾಯವನ್ನು ಅನುಮಾನದಿಂದ ನೋಡಿ ಮನೆ ಬಾಡಿಗೆ ನೀಡದೆ ಅವರನ್ನು ಆಗಮಿಸುವವರನ್ನು ನಾವು ನೋಡುತ್ತಿದ್ದೇವೆ. ಇದಕ್ಕೆ ಪ್ರತಿಭಟನಾ ರೂಪದಲ್ಲಿ ಕಾವ್ಯ ಜೀವಪರ ಕಾಳಜಿಯನ್ನು ಹೊಂದಿ ಸಾಮಾಜಿಕ ಸಮನ್ವಯತೆಯನ್ನು ಬಯಸಿದೆ.

ಸಮಾಜದಲ್ಲಿ ಎಲ್ಲಾ ಸಮುದಾಯದ ಜನರು ಪರಸ್ಪರ ಒಳಗೊಳ್ಳಬೇಕಾದ ಅಗತ್ಯತೆಯನ್ನು ಸಮಕಾಲೀನ ಕಾವ್ಯ ಒತ್ತಿ ಹೇಳಿದೆ. ಈ ಸಮನ್ವಯತೆಯ ಭಾಗವಾದ ಜಾತಿ ಸಂಕರ ಸಂಸ್ಕೃತಿಯ ಆಶಯವನ್ನು ಅಭಿವ್ಯಕ್ತಿಸಿದಂತೆ ಕಂಡುಬಂದಿದೆ. ನಮ್ಮ ಸಾಮಾಜಿಕ ಪರಿಸರ ಬಹಳಷ್ಟು ಬದಲಾಗಿದೆ. ಇಲ್ಲಿಯ ಆಗುಹೋಗುಗಳು, ಮೌಲ್ಯಗಳು ಬದಲಾಗಿವೆ. ಕಾಲಕ್ಕೆ ಗಡಿಯಾರದ ಮುಳ್ಳನ್ನು ಮೀರಿದ ಓಟ ಬಂದಿದೆ ಇದಕ್ಕೆ ತಕ್ಕ ಹಾಗೆ ನಮ್ಮ ನಡೆ-ನುಡಿಗಳು ಬದಲಾಗಿದೆ. ಭಾಷೆ ಬದಲಾಗಿದೆ. ಈ ಅತಿವೇಗದ ಓಟಕ್ಕೆ ಕಾವ್ಯ ತನ್ನ ವ್ಯಾಪ್ತಿಯೊಳಗೆ ಆ ಓಟವನ್ನು ಮೌಲ್ಯಯುತ ನೆಲೆಯಲ್ಲಿ ಸಾಗಲು ಬಯಸಿದೆ. ಅತಿವೇಗದಲ್ಲಿ ಮೌಲ್ಯಗಳ ನಾಶವಾಗಿಸಿಕೊಂಡು, ಸಂಬಂಧಗಳನ್ನು ವ್ಯವಹಾರಿಕ ನೆಲೆಯಲ್ಲಿ ಕಂಡು ಸಾಮಾಜಿಕ ಸಂಬಂಧವನ್ನು ಆಳು ಮಾಡಿಕೊಳ್ಳುವ ಪ್ರಯತ್ನದಲ್ಲಿರುವ ಈ ಓಟಕ್ಕೆ ತಡೆ ಹಾಕುವ ರೀತಿಯಲ್ಲಿ. ಕಾವ್ಯ ತನ್ನ ಮೌಲ್ಯಗಳನ್ನು ಸಾರಿದೆ. ಒಂದು ಕಾಲದ ಸತ್ವ ಸಾಹಿತ್ಯದ ಸಂವೇದನೆಯಾಗದಿದ್ದರೆ ಸಾಹಿತ್ಯ ಕ್ರಿಯೆ ಮಾತ್ರವಾಗಿ ಬಿಡಬಹುದು. ಅದಕ್ಕಾಗಿ ಕಾಲದ ಗತಿಗೆ ತಕ್ಕಂತೆ ಕಾಲವು ಅನುಭವಿಸಿದ ದುರಂತಗಳನ್ನು ಎಚ್ಚರಿಕೆಯಿಂದ ತಿಳಿಸಿ ಅದಕ್ಕೆ ಮುಂದಾಗುವ ಅಪಾಯವನ್ನು ಸಹ ಅರಿವು ಮೂಡಿಸಿ ಅದರಿಂದ ಹೊರತರುವ ಪ್ರಯತ್ನ ಸಾಹಿತ್ಯದ್ದಾಗಬೇಕು. ಅಂತಹ ಕಾರ್ಯ ಕಾವ್ಯದ್ದಾದರೆ ಇನ್ನೂ ಬೇಗ ಆ ಸಮಾಜದ ರೋಗದಿಂದ ಈ ವ್ಯವಸ್ಥೆ ಗುಣಮುಖವಾಗುತ್ತದೆ ಎಂಬ ನಂಬಿಕೆ ನಮ್ಮದು. ಪರಂಪರೆಯ ಜೊತೆಗೆ ಶ್ರಾದ್ಧ ಮತ್ತು ವಿಮರ್ಶಾತ್ಮಕವಾದ ಸಂಬಂಧವಿದ್ದರೆ ಹೊಸ ಕವಿಗಳಿಗೆ ಹೊಸ ದೃಷ್ಟಿಕೋನ ರೂಪಿಸಿಕೊಳ್ಳಲು ಸಹಾಯಕವಾಗುತ್ತದೆ. ಆದ್ದರಿಂದಲೇ ಈ ಸಾಮಾಜಿಕ ಸಮನ್ವಯತೆಯ ಆಶಯವನ್ನು ಹೊಸ ದೃಷ್ಟಿಕೋನದಲ್ಲಿ, ಹೊಸ ನುಡಿಗಟ್ಟಿನಲ್ಲಿ ಸೂಕ್ಷ್ಮವಾದ ಸಂವೇದನೆಯಲ್ಲಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

### ೫.೨. ದಮನಿತ ಸಮುದಾಯದ ಧ್ವನಿಯಾಗಿ ಕಾವ್ಯ

ಕಾವ್ಯ ಸೃಜನಶೀಲ ಸಾಹಿತ್ಯ ಪ್ರಕಾರದಲ್ಲಿ ವಿಶೇಷವಾದ ಸ್ಥಾನ ಹೊಂದಿದೆ ಕಾರಣ ಇದಕ್ಕಿರುವ ರೂಪರೇಷೆ, ಭಾಷೆ, ನುಡಿಗಟ್ಟು, ಲಯ, ಒಂದು ಬಗೆಯ ಮುಕ್ತ ಛಂದಸ್ಸು ಇವುಗಳಿಂದಾಗಿ ವಿಶೇಷತೆಯೊಂದಿದೆ. ಪರಂಪರೆಯುದ್ಧಕ್ಕೂ ಕಾವ್ಯದಲ್ಲಿ ಸಾಮಾಜಿಕ ಮಟ್ಟುಗಳನ್ನು ನೋಡಬಹುದು. ಲೌಖಿಕ ಅಲೌಖಿಕ, ಸಾಮಾಜಿಕ ಜೀವನ, ದೈವಕೇಂದ್ರಿತ ಜೀವನ, ಹಿಂಸೆ ಅಹಿಂಸೆ, ದಾಂಪತ್ಯ, ಶೀಲ, ಶಿಷ್ಟ ಹೀಗೆ ನಾನಾ ರೀತಿಯ ಅಂಶಗಳನ್ನು ಕಾಲಮಾನದಿಂದ ಕಾಲಮಾನಕ್ಕೆ ತಕ್ಕದಾದ ರೀತಿಯಲ್ಲಿ ತನ್ನೊಳಗಾಗಿಸಿಕೊಂಡು ಸಾಗುತ್ತಾ ಬರುತ್ತಿದೆ. ಅದರ ಜೊತೆ ಜೊತೆಯಲ್ಲೇ ವ್ಯಕ್ತಿಯ ಸಾಂಸಾರಿಕ ಜೀವನ, ಆಪ್ತ ಜೀವನ, ಸುಖ ದುಃಖ ಒಂಟಿತನ, ರಾಷ್ಟ್ರಪ್ರೇಮ, ಆಯ್ಕೆ ಭಾಷಾ ಪ್ರೇಮ, ಏಕಾಂಗಿತನ, ಸಾರ್ವತ್ರಿಕ ನಿಲುವುಗಳ ಸಂವಿಧಾನ ಹಕ್ಕುದಾರಿಕೆಯನ್ನು ಆಧುನಿಕ ಕನ್ನಡ ಕಾವ್ಯದಲ್ಲಿ ಕಾಣಬಹುದು. ಇದರೊಂದಿಗೆ ಎಪ್ಪತ್ತರ ದಶಕದಿಂದ ಬಂಡಾಯ ಸಾಹಿತ್ಯದ ಪ್ರೇರಣೆಯಿಂದ ಒಂದು ಸಮುದಾಯದ

ಸಂಕಟಗಳನ್ನು ಹೊರಚೆಲ್ಲುವ, ಆ ಸಮುದಾಯದ ಸಂವೇದನೆಗಳನ್ನು ಅಭಿವ್ಯಕ್ತಿಸಿ ಸಾಮಾಜಿಕ ನ್ಯಾಯ ಕೇಳುವ, ಸಮಾಜದ ಮುನ್ನೆಲೆಗೆ ಬಂದು ಸರ್ವಸಮಾನವಾಗಿ ನಿಲ್ಲುವ ಆಶಯವನ್ನು ಅಭಿವ್ಯಕ್ತಿಸುತ್ತಿರುವುದು ಕಂಡು ಬಂದಿದೆ. ತಳ ಸಮುದಾಯಗಳು ಪ್ರಬಲ ಸಮುದಾಯದಿಂದ ತುಳಿತಕ್ಕೊಳಪಟ್ಟ, ಇನ್ನು ಅಂಥದೊಂದು ಒಂದು ಸಮುದಾಯ ಇದೆಯೇ ಎಂದು ಗಾಬರಿಯಿಂದ ನೋಡುವ ರೀತಿಯ ವಾತವರಣವಿದೆ. ಇಂಥ ವಾತಾವರಣವನ್ನು ಸೃಷ್ಟಿಸುವುದು ವೈದಿಕಶಾಹಿ ಮನೋಧೋರಣೆಯ ಪ್ರಬಲ ಸಮುದಾಯಗಳು, ಸಂವಿಧಾನದ ಸರ್ವ ಸಮಾನತೆಯ ಕಾಯಿದೆ ಇದ್ದಾಗಲೂ ಈ ಅಸಮಾನತೆ ಮನೋಭಾವಕ್ಕೆ ತಾವು ಮನುಷ್ಯರೆಂದು ಕೂಗಿ ಹೇಳುವ ದುಸ್ಥಿತಿ ಬಂದೊಂದಗಿರುವುದು ದುರಂತ. ಕಾವ್ಯ ವ್ಯಕ್ತಿಯ ಆಪ್ತತೆಯನ್ನು ಸಂಕಟವನ್ನು ಅಭಿವ್ಯಕ್ತಿಸುವುದರ ಜೊತೆ ಜೊತೆಯಲ್ಲೋ ಇಡೀ ಸಮುದಾಯದ ಸಂಕಟಗಳನ್ನು ಅಭಿವ್ಯಕ್ತಿಸುತ್ತಿರುವುದು ಕಂಡು ಬಂದಿದೆ. ಈ ಸಮಾಜದಲ್ಲಿ ಅನೇಕ ತಳಸಮುದಾಯದ ಇನ್ನೂ ಅಕ್ಷರ ಲೋಕಕ್ಕೆ ಬಿಚ್ಚಿಕೊಳ್ಳದ ದುರಂತದಲ್ಲಿ ಅಂತ ಸಮುದಾಯದಿಂದ ಬಂದ ಕವಿಗಳು ತಮ್ಮ ಇಡೀ ಸಮುದಾಯದ ಬದುಕಿನ ಚಿತ್ರಣವನ್ನು ಜೀವನ ಮೌಲ್ಯಗಳನ್ನು, ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿ ಆ ಸಂವೇದನೆಗೆ ಒಂದು ಧ್ವನಿಯನ್ನು ನೀಡಿದಂತಿದೆ. ಅವರ ಸಂಕಟಗಳನ್ನು ಲೋಕಕ್ಕೆ ಪರಿಚಯಿಸಿವ ಮುಖ್ಯ ಕೆಲಸವಾಗಿದೆ. ದಲಿತ ಸಮುದಾಯ, ಮಡಿವಾಳ ಸಮುದಾಯ, ಪಿಂಜಾರ ಸಮುದಾಯ, ದಕ್ಕಲಿಗ, ವಿಶ್ವಕರ್ಮ, ಕುರುಬಸಮುದಾಯ, ಮುಸ್ಲಿಂ ಸಮುದಾಯ ಹಾಗೂ ಹಗಲು ವೇಷಗಾರರು ಬುಡಕಟ್ಟು ಸಮುದಾಯ ಇನ್ನು ಮುಖ್ಯ ವಾಹಿನಿಗೆ ಬರದೆ ಇರುವ ಅನೇಕ ಸಮುದಾಯಗಳ ಪರಿಚಯ ಈ ಸಮಕಾಲೀನ ಕಾವ್ಯದ ಮೂಲಕ ನೋಡಬಹುದು.

ಇದು ಅಷ್ಟೇ ಅಲ್ಲದೆ ನಗರಕೇಂದ್ರಿತದಲ್ಲಿರುವ ಸ್ಲಮ್‌ಗಳಲ್ಲಿ ಜೀವನ ನಡೆಸುತ್ತಿರುವವರ ಬದುಕಿನ ಚಿತ್ರಣವು ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವುದು ಕಾಣಬಹುದು. ದಲಿತ ಸಮುದಾಯವು ಅನುಭವಿಸುವ ಸಂಕಟಗಳನ್ನು ಅಸಮಾನಗಳನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿದ ಕವಿ ಎನ್. ಹನುಮಂತಯ್ಯರವರು ಇವರ ಕವಿತೆಯ ಧ್ವನಿ ಹೊಸ ಸಂವೇದನೆಯನ್ನು ಹೇಳುತ್ತದೆ. ಹೊಸ ರೂಪಕ ಶಕ್ತಿಯನ್ನು ಹೊಂದಿದೆ. ಗೋವು ತಿಂದು ಗೋವಿನಂತಾದವರು ಎಂಬ ಪದ್ಯ ಇಡೀ ಸಮುದಾಯದ ಆಹಾರ ಸಂಸ್ಕೃತಿಯ ಜೊತೆಗೆ ಅವರ ಸಂಕಟವನ್ನು ಸಹ ಹೇಳುತ್ತದೆ. ಇದು ಈ ಸಮಕಾಲೀನ ಕಾಲಘಟ್ಟದ ದೊಡ್ಡ ರೂಪಕವಾಗಿದೆ. ಅವರ ಕವಿತೆಯನ್ನು ಗಮನಿಸುವುದಾದರೆ,

ಹರಿಯುತ್ತಲಿವೆ ಇರುವೆ
ರಕ್ತ ಮೆತ್ತಿದ ಕೋಲು ಯಂತ್ರದ ಚಕ್ರಗಳ ಮೇಲೆ
ಖಾಲಿಯಾಗದ ಉರಿದ ಸ್ಮಶಾನಗಳ ಮೇಲೆ
ಹರಿಯುತ್ತಲಿವೆ ಇರುವೆ

ಈ ಮಹಾ ಬೆಳಗಿನ ಮಾಂಸದಂಗಡಿಯಲ್ಲಿ ತಲೆಕೆಳಗಾಗಿ
ತೂಗುತ್ತಿರುವ ನನ್ನ ಮೇಲೆ.[೪]

ಇಲ್ಲಿ ಕವಿ ತನ್ನ ಸಮುದಾಯವನ್ನು ಶತಶತಮಾನದಿಂದ ತುಳಿಯುತ್ತಿರುವ ನೋವಿನ ಆಕ್ರಂದನವಿದೆ. ತನ್ನ ಸಮುದಾಯಕ್ಕೆ ಆದ ಅನ್ಯಾಯ ಅಪಮಾನ, ಶೋಷಣೆಯನ್ನು ಚಿತ್ರಿಸುತ್ತಿದೆ. ಸಮಾಜದಲ್ಲಿ ದಲಿತ ಸಮುದಾಯವು ಯಾವ ರೀತಿಯಲ್ಲಿ ಶೋಷಣೆಗೆ ತುತ್ತಾಗಿದೆ. ಒಂದು ಪ್ರಬಲ ಸಮುದಾಯ, ವೈದಿಕಶಾಹಿ ಮನೋಬಲದಲ್ಲಿ ದಲಿತ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಸಮಾನತೆಯ ಶೋಷಣೆಯನ್ನು ಹೇಗೆ ಮಾಡುತ್ತಿದೆ ಎನ್ನುವ ಆಶಯ ವ್ಯಕ್ತಪಡಿಸುತ್ತದೆ. ಒಂದು ಸಮುದಾಯ ತನ್ನದೇ ಆದ ಜೀವಂತಿಕೆಯ ಸಾಂಸ್ಕೃತಿಕ ಈ ಪರಂಪರೆಯನ್ನು ಹೊಂದಿರುತ್ತದೆ. ಅದನ್ನು ಸಂವಿಧಾನ ನೆಲೆಯಲ್ಲಿ ಗೌರವಿಸುವುದು ಎಲ್ಲರ ಕರ್ತವ್ಯ ಅದೇ ಮನುಷ್ಯ ಪ್ರೀತಿ ಆದರೆ ಸಮಕಾಲೀನ ಸಂದರ್ಭದಲ್ಲಿ ಆಗುತ್ತಿರುವ ಜಾತಿ ಶೋಷಣೆಗಳ ಅಪಮಾನಗಳು, ಜೀವ ತಿನ್ನುವ ದುರಂತ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಇಷ್ಟೇ ಅಲ್ಲದೆ ಅಕ್ಷರ ಜ್ಞಾನ ಪ್ರಕಾರ ಅನೇಕ ತಳ ಸಮುದಾಯದ ವಿದ್ಯಾರ್ಥಿಗಳ ಇಂದು ಈ ಸಾಮಾಜಿಕ ಅಸಮಾನತೆಯ ಕ್ರೂರತೆಗೆ ನೇಣಿಗೆ ಶರಣಾಗುತ್ತಿರುವ ಘಟನೆ ನಮ್ಮ ಕಣ್ಣ ಮುಂದೆ ಇದೆ. ಇದು ವ್ಯವಸ್ಥೆಯ ಪರೋಕ್ಷವಾಗಿ ಮಾಡುವ ಹಿಂಸಾತ್ಮಕ ಕೆಲಸ. ಇಂದು ರೈತರಷ್ಟೇ ನೇಣಿಗೆ ಶರಣಾಗುತ್ತಿಲ್ಲ ಈ ವ್ಯವಸ್ಥೆಯು ತಂದೊಡ್ಡಿದ ಅಮಾನವೀಯ ಶೋಷಣೆಗೆ ಅನೇಕ ಸಮುದಾಯದ ಅಕ್ಷರಸ್ಥ ಮನಸ್ಸುಗಳು ಬದುಕುವ ಭಯಗೊಂಡು ದುರಂತ ಚಿತ್ರಣ ನಮ್ಮ ಕಣ್ಣಿನಲ್ಲಿದೆ.

ಎನ್ಕೆ ಹನುಮಂತಯ್ಯನವರು ತಮ್ಮ ಕಾವ್ಯದಲ್ಲಿ ಹೊಸ ಪ್ರತಿಗಳ ಮೂಲಕ ತಮ್ಮ ಸಮುದಾಯವು ಹೊಂದಿದೆ ಸೂಕ್ಷ್ಮ ಸಂವೇದನೆಯನ್ನು ಅಪಮಾನಗಳನ್ನು ಕಾವ್ಯದಲ್ಲಿ ಸೂಕ್ತವಾಗಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಇದರಂತೆ ಇನ್ನೊಬ್ಬ ಕವಿಯಾದ ಆರೀಫ ರಾಜ ಅವರು ತಮ್ಮ ಕವಿತೆಯಲ್ಲಿ ಸಮಕಾಲೀನ ಸಂದರ್ಭದಲ್ಲಿ ತಮ್ಮ ಸಮುದಾಯ ಯಾವ ರೀತಿಯಾಗಿ ಈ ಸಾಮಾಜಿಕ ಅನ್ಯಾಯಕ್ಕೆ ತುತ್ತಾಗಿದೆ ಯಾವ ರೀತಿಯ ಅನುಮಾನಾಸ್ಪದದ ದೃಷ್ಟಿಯನ್ನು ಹೊಂದಿದೆ ಎಂಬುದನ್ನು ತಮ್ಮ ಕಾವ್ಯದಲ್ಲಿ ಸೂಕ್ಷ್ಮವಾಗಿ ಕೆಲವೊಂದು ಕವಿತೆಯಲ್ಲಿ ಸಮುದಾಯದ ಧ್ವನಿಯಾಗಿ ಪ್ರತಿಭಟಿಸಿ ಸಾಮಾಜಿಕ ಅನ್ಯಾಯಕ್ಕೆ ಧಿಕ್ಕಾರ ಹೇಳಿರುವುದು ನೋಡಬಹುದು. ತಮ್ಮ ಸಮುದಾಯವನ್ನು ಅನುಮಾನದಿಂದ ನೋಡುತ್ತಿರುವ ಕೋಮುವಾದ ವ್ಯವಸ್ಥೆಯ ಕ್ರೂರತೆಯನ್ನು ಚಿತ್ರಿಸಿದ್ದಾರೆ. ನಗರಕೇಂದ್ರದಲ್ಲಿ ಗಡ್ಡಾ ಬಿಟ್ಟರಿಗೆ, ಮಾಂಸ ತಿನ್ನುವವರಿಗೆ ಮನೆ ಬಾಡಿಗೆ ಕೊಡಲಾರದ ಸ್ಥಿತಿ ಹಾಗೂ ಅಕ್ಕಪಕ್ಕದಲ್ಲಿ ಸೇರಿಸಿಕೊಳ್ಳದ ದುರಂತ ಸ್ಥಿತಿಯು ಬಂದಿದೆ ಎಂದು ನೋವಿನಿಂದ ಹೇಳಿದ್ದಾರೆ. ತಮ್ಮನ್ನು ಮನುಷ್ಯರೆಂದು ಭಾವಿಸಲು ಕರೆ ನೀಡಿ ಸೌಹಾರ್ದ ಸಾಮರಸ್ಯದ ಬದುಕನ್ನು ನಡೆಸುವ ಆಶಯ ವ್ಯಕ್ತಪಡಿಸಿದ್ದಾರೆ. ಕೆಲವೊಂದು ಸಾರಿ ಅತಿಯಾದ ಅಪಮಾನಕ್ಕೆ ಒಳಗಾದಾಗ ಉಳಿ ಮಂತ್ರವೊಂದು ಇದ್ದಿದ್ದರೆ ಇಡೀ ಈ

ಅಸಮಾನತೆ, ಜಾತಿ ಶೋಷಣೆ ಅನ್ಯಾಯಗಳನ್ನು ಸರಿ ಮಾಡುತ್ತಿದ್ದೆ, ಸತ್ಯ ಮುಚ್ಚಿಟ್ಟು ಸುಳ್ಳು ಚರಿತ್ರೆಯನ್ನು ಹೇಳಿ ಮನುಷ್ಯ ಮನುಷ್ಯರ ಮಧ್ಯೆ ಕಂದಕ ಉಂಟುಮಾಡುವ ಕ್ರೂರತೆಯನ್ನು ನಾಶ ಮಾಡುತ್ತಿದೆ. ಕನಿಕರವನ್ನು ತರುವ ವ್ಯವಸ್ಥೆಯನ್ನು ಸರಿ ಮಾಡುತ್ತಿದೆ. ಎಂದು ತಮ್ಮ ಕಾವ್ಯದಲ್ಲಿ ಹೇಳಿದ್ದಾರೆ. ಅದೇ ರೀತಿ ಕವಿ ವೀರಣ್ಣ ಮಡಿವಾಳರ ತಮ್ಮ ಕವಿತೆಯಲ್ಲಿ ತಮ್ಮ ಮಡಿವಾಳ ಸಮುದಾಯ ಅನುಭವಿಸುವ ಅವಮಾನಗಳನ್ನು ಈ ಸಮಾಜಕ್ಕೆ ಪರಿಚಯಿಸಿದ್ದಾರೆ. ಆ ಕವಿತೆಗಳಲ್ಲಿ ಒಂದು ತಳ ಸಮುದಾಯ ಯಾವ ನೆಲೆಯಲ್ಲಿ ಈ ಸಾಮಾಜಿಕ ವ್ಯವಸ್ಥೆಯ ಅಪಮಾನಕ್ಕೆ ಗುರಿಯಾಗಿದೆ ಯಾವ ನೆಲೆಯಲ್ಲಿ ಶೋಷಣೆ ಅನುಭವಿಸುತ್ತದೆ ಎಂಬುದನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿರುವುದು ಕಂಡು ಬಂದಿದೆ. ಅವರ ಕವನ ಸಂಕಲನವಾದ ನೆಲ ಕರುಣೆಯ ದನಿ ಎಂಬ ಪುಸ್ತಕದಲ್ಲಿ ಈ ನೆಲದಲ್ಲಿ ಅನೇಕ ತಳ ಸಮುದಾಯಗಳ ದನಿಯು ಯಾವ ರೀತಿಯಾಗಿದೆ ಎಂದು ಪ್ರತಿನಿಧಿಸಿದಂತಿದೆ.

ಕಾವ್ಯ, ಪ್ರೀತಿ, ಪ್ರೇಮ, ರಮಣೀಯತೆ ಆಪ್ತತೆಯ ಜೊತೆಯಲ್ಲಿ ಸಾಮಾಜಿಕ ಕಳಕಳಿಯನ್ನು ಸಹ ಹೇಳುತ್ತಿದೆ. ಪ್ರತಿಭಾವಂತ ಸೃಜನಶೀಲ ಕವಿಯಾದವನು ತಾನು ಬದುಕುವ ಯುಗದ ಸಾಂಸ್ಕೃತಿಕ ಪ್ರತಿನಿಧಿಯ ಆಗಿರುತ್ತಾನೆ. ಜೊತಗೆ ತನ್ನ ಸಮುದಾಯವು ಪ್ರತಿಧ್ವನಿಯೂ ಆಗಿರುತ್ತಾನೆ. ಸಮಕಾಲೀನ ಯುಗಧರ್ಮದ ಜನಸಮಷ್ಟಿ ಪ್ರಜ್ಞೆಯ ಪ್ರಕೃತಿಯ ಜೀವನ ಸಂಸ್ಕೃತಿಯ ನಿರ್ವಹಣೆ ಹೊಣೆಯನ್ನು ಹೊತ್ತಿರುತ್ತಾನೆ. ಯುಗದ ಮುಖವಾಣಿಯಾಗಿ ಮುಂಬರುವ ಕಾವ್ಯ ಪರಂಪರೆಗೆ ಚಿಂತನೆ ಕ್ರಮಕ್ಕೆ ತನ್ನ ಕಾಲದ ಜೀವನ ದೃಷ್ಟಿ ದರ್ಶನ ತತ್ವ ಚಿಂತನೆಗಳನ್ನು ಕಾಣ್ಕೆಯಾಗಿ ನೀಡಿತ್ತಾನೆ. ತನ್ನ ಕಾವ್ಯದ ಮೂಲಕ ಇದರಂತೆ ಕವಿ ವೀರಣ್ಣ ಮಡಿವಾಳರ ಕವಿತೆಯ ಸಾಲುಗಳನ್ನು ಗಮನಿಸಿದಾಗ.

ಊರ ದೇವ ದಿಬ್ಬಣ
ಬೀದಿಯಲ್ಲಿ ಬರುವಾಗ
ನಾವೇ ಹಡದಿ ಹಾಸಿಗೆಯಾಗಿ ಬಿದ್ದಕೊಂಡೆವು
ಮಣ್ಣನಪ್ಪಿದ ಮಡಿಬಟ್ಟೆಯನು
ಪಲ್ಲಕ್ಕಿ ಹೊತ್ತು ನೀವು ತುಳಿದಿರಿ
ನಾವು ಎಷ್ಟೇ ನಲುಗಿದರೂ
ದೇವರು ನಮ್ಮನು ಮುಟ್ಟಾನೇ ಇಲ್ಲ.[೫]

ಈ ಕವಿತೆಯ ಶೀರ್ಷಿಕೆಯೇ ಇಡೀ ಸಮುದಾಯದ ಸಂವೇದನೆಯನ್ನು ಧ್ವನಿಸುತ್ತದೆ. ಅವರ ಕೆಲಸ ಕುಲ-ಕಸುಬು ಎಂದು ನಂಬಿಕೊಂಡು ನಂಬಿಸಿ ಮುನ್ನೆಡೆಯಲ್ಲೊಂದು ಕೆಲಸ ಬಿಟ್ಟ ಕೆಲಸ, ಯಾವ ರೀತಿಯು ಫಲ ಕಾಣದೆ ಇರುವುದು ಇದು ಅಲ್ಲಿ ಅವರನ್ನು ಮನುಷ್ಯರೆಂದು ಮಟ್ಟದೆ ಅಸ್ಪೃಶ್ಯತೆಯ ಧೋರಣೆ ಸಾರಮ್ಯದಿಂದ ವ್ಯವಸ್ಥೆಯು ಕಣ್ಣ ಮುಂದೆ

ಕಟ್ಟಿದಂತಿದೆ ಅವರ ಬಟ್ಟೆ ತೊಳೆದು ಅವರು ಹಾಸಿದ ಮಡಿಬಟ್ಟೆಯಲ್ಲಿ ಪಲ್ಲಕ್ಕಿ ಹೊತ್ತ ದೇವರನ್ನು ಹೊತ್ತು ಸಾಗುತ್ತಲೇ ಆ ಜನ ಸಮುದಾಯವನ್ನು ಮುಟ್ಟಿಸಿಕೊಳ್ಳಲು ಹಿಂದೆತಾಕುವರೆಂದು ನೋವಿನಿಂದ ಕವಿ ನುಡಿದಂತಿದೆ. ನಾವು ಎಷ್ಟೆ ಸಂಕಟ ಪಟ್ಟಿಕೊಂಡರೂ ದೇವರು ನಮ್ಮನ್ನು ಮಟ್ಟನೇ ಇಲ್ಲ ಎಂದು ವಿಷಾದ ವ್ಯಕ್ತಪಡಿಸಿತ್ತಾರೆ. ಅವರ ಕಾಯಕ ವಿವರಣೆ ಸೊಗಸಾಗಿದೆ. ಅದ್ಭುತವಾದ ರೂಪಕಗಳ ಮೂಲಕ ಇಡೀ ಸಮುದಾಯ ಅನುಭವಿಸುವ ಸಂಕಟವನ್ನು ಅಭಿವ್ಯಕ್ತಿಸಿದ್ದಾರೆ.

ಬೇರೆಯವರು ಮಕ್ಕಳ ಹೆಲುಚ್ಚಿ ಬಟ್ಟಯನೊಪತ್ತಿ ಬೇರೆಯವರ ಹೊಲಸನ್ನು ತನ್ಮಯತೆಯಿಂದ ತೊಳೆದು ಮಾಂಸ ಮಡ್ಯ ಕೀವು ರಗತು ಅಚ್ಚಿದ ಅರಿಬೆಯನ್ನಲ್ಲಿ ಹೊತ್ತ ಸಾಗಿ ಸ್ವಚ್ಚಗೊಳಿಸಿಕೊಟ್ಟಾರೆ ದೂರದಿಂದ ಎಸೆಯುವ ತಪ್ಪ ಸವರಿದ ಎರಡು ತಂಗುಳ ರೊಟ್ಟಿಗೆ ಸಮಾಧಾನ ಮಾಡಿಕೊಳ್ಳುವ ದುರಂತವನ್ನು ಕವಿ ಹೃದಯ ತಟ್ಟುವ ರೀತಿಯಲ್ಲಿ ಅಭಿವ್ಯಕ್ತಿಸುತ್ತಾನೆ ಅವೆಲ್ಲವೂ ಆ ಸಮುದಾಯದ ಕೂಗುಗಳಾಗಿ ಸಂಕಟಗಳಿಗೆ ಮುಕ್ತಿಗೆ ಆ ತೊರೆಯುವ ಧ್ವನಿಗಳಾಗಿ ನಿಂತಿವೆ ಈ ಕವಿತೆಯಲ್ಲಿ ಮುಂದುವರೆದು ತಾವೇ ಹಾಸದ ಹಾಸಿಗೆಯಲ್ಲಿ ಉದ್ದಕ ಮಲುಗುವ ನಿಮಗೆ ಇವರ ಉಸಿರು ಗಾಳಿ ತಾಕಬಾರದೆಂಬ ಈ ಮನೋಧರ್ಮವನ್ನು ಖಂಡಿಸುತ್ತಾರೆ. ತಮ್ಮ ಕವಿತೆಯಲ್ಲಿ ಕೊನೆಗೆ ತಾವೂ ಇವೆಲ್ಲಗಳಿಗೆ ಅಂತ್ಯ ಕಾಣಿಸಲು ತಾವು ಇತರರಂತೆ ಬಾಳಲು ಸಮಾನವಾಗಿ ಜೀವಿಸಲು ಪಂಜು ಹಿಡಿದು ನಿಂತಿದ್ದೇವೆ ಎಚ್ಚರಿಕೆಯಿಂದಾಗಿ ತಮಗಾಗಿ ಎಂಬ ಪೋಷಣೆ ಕೂಗಿದಂತೆದೆ ಕವಿತೆಯಲ್ಲಿದೆ.

ಜಾತಿ ಅಪಮಾನಗಳು, ಶೋಷಣೆಗಳ ಹಳ್ಳಿಯಲ್ಲಿ ಒಂದು ಬಗೆಯಲ್ಲಿದ್ದರೆ ನಗರದಲ್ಲಿ ಸ್ಲಮ್‌ಗಳಲ್ಲಿ ಇನ್ನೊಂದು ಬಗೆಯದ್ದಾಗಿದೆ. ವಿ.ಎಮ್.ಮಂಜುನಾಥ, ವಿ.ಎಲ್. ಕಾರ್ಪೆಂಟರ್ ಪಠ್ಯದಲ್ಲಿ ಇಂತಹ ಸಂವೇದನೆಗಳು ಕಂಡು ಬರುತ್ತವೆ. ಸಮುದಾಯದ ಸಾಮೂಹಿಕ ದಹನ ವಿಧಾನಗಳಿಗೆ ಕಾವ್ಯ ಕೂಸು ಆಗಿದೆ. ವ್ಯಕ್ತಿಕೇಂದ್ರಿತ ಅಪಮಾನಗಳು ಸಮುದಾಯದ ಭಾಗವಾಗಿ ವ್ಯಕ್ತಗೊಂಡಿವೆ. ವ್ಯಕ್ತಿ ಸಮುದಾಯದ ಭಾಗದಲ್ಲಿವೇ ಬದುಕುತ್ತಿರುವಾಗ ಸೂಕ್ಷ್ಮ ಗ್ರಹಿಕೆಯ ವ್ಯಕ್ತಿ ತನಗಾದ ಸಂಕಟವನ್ನು ಇತರ ಸಂಕಟದಂತೆ ಇತರರ ಸಂಕಟವನ್ನು ತನ್ನ ಸಂಕಟದಂತೆ ಭಾವಿಸಿ ಇಡೀ ಸಮುದಾಯದ ಧ್ವನಿಯಾಗಿ ನಿಲ್ಲಲು ಸಹಕಾರಿಯಾಗಿದೆ. ವಿ.ಆರ್.ಕಾರ್ಪೆಂಟರ್ ಪದ್ಯದಲ್ಲಿ ತಮ್ಮ ವೃತ್ತಿಯ ರೀತಿ ನೋವುಗಳ ಜೊತೆ ಜೊತೆಯಲ್ಲಿ ನಗರದಲ್ಲಿ ಕಾಣೆಯಾದ ಪ್ರೀತಿ, ಪ್ರೇಮ, ಮನುಷ್ಯತ್ವದ ಬಗ್ಗೆ ಮಾತನಾಡುತ್ತಾರೆ ನಗರದಲ್ಲಿ ಬಂಗಲೆಗಳಿವೆ ಹೊರತು ಸಂಬಂಧಗಳು ಇಲ್ಲ ಎಂಬ ಆಶಯವನ್ನು ಅವರ ಕವಿತೆಯೊಂದಾದ ಧ್ಯಾನಸ್ಥಾ ಬಂಗಲೆಗಳು ಎಂಬ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ನಗರಕೇಂದ್ರಿತ ಬಂಗಲೆಗಳಲ್ಲಿ ಹಾವು, ಚೇಳು, ಕ್ರೂರ ಮನಸ್ಥಿತಿಯ ವಿಷಕಾರಿ ಮನೋಧೋರಣೆ ತಾಳಿದ ಮನಸ್ಥಿತಿಗಳ ವಾಸವಾಗಿವೆ ಅವುಗಳಲ್ಲಿ ಪ್ರೀತಿ, ಪ್ರೇಮ, ತುಂಬುವು ಜೀವಪರ ಚಿಂತನೆಯನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಹಾಗೇ ತಮ್ಮ ವೃತ್ತಿಯಲ್ಲಿ ಬಳಸುವ ಉಪಕರಣಗಳೇ ರೂಪಕಗಳಾಗಿರುವುದು ಕಂಡುಬಂದಿವೆ.

ಆ ಮರಗಳನ್ನು ಎರವಲು ಪಡೆದು
ಅವಳ ದುರ್ಬಲ ಕನಸುಗಳನ್ನು ವಿಸರ್ಜಿಸಿ
ಅವಳದೇ ಪ್ರತಿಮೆ ಕೆತ್ತಿ ಕಡೆಯುವೆನು
ನನ್ನ ಉಳಿಗಳು
ಸುತ್ತಿಗೆಯ ನಚ್ಚಿನ ವಟುಗಳು
ಅವಳ ಕಾಲ ಬೆರಳಿನಿಂದ
ಪ್ರಾರಂಭಿಸಿ, ಒಂದೊಂದಾಗಿ ಸಾಲುಗಂಬಗಳಂತೆ
ಅವಳ ಎತ್ತರ ನಿಲುವು ಬಿಡಿಸುತ್ತವೆ.[೬]

ಕಾವ್ಯ ಪರಂಪರೆಯನ್ನು ಗಮನಿಸಿದಾಗ ಒಂದು ಪ್ರತಿಮಾ ಮಾದರಿ ರೂಪಕದ ಮಾದರಿ ತೆಳೆಯುತ್ತವೆ ಇಲ್ಲಿಯವರೆಗಿದ್ದ ಒಂದು ರೂಪಕ ಸಂವಿಧಾನವನ್ನು ಹೊಸ ನೆಲೆಯಲ್ಲಿ ಅಭಿವ್ಯಕ್ತಿಸುವುದು ಕಂಡು ಬಂದಿದೆ. ಕಾವ್ಯರೂಪಕ ಎಂದಾಕ್ಷಣ ಒಂದು ಅಮೂರ್ತ ಲೋಕಕ್ಕೆ ಕಾವ್ಯ ಕೊಂಡ್ಯಯುತ್ತಿತ್ತು ಆದರೆ ಅದು ಇಂದು ಬದಲಾಗಿದೆ ಸಮಕಾಲೀನ ರೂಪಕಗಳು ವರ್ತಮಾನಕ್ಕೆ ತಂದು ಹೀಗೂ ಹೇಳಬಹುದಾ ಎಂದು ಹೇಳುವಾಗೆ ಅಭಿವ್ಯಕ್ತಗೊಳ್ಳುತ್ತಿವೆ. ಈ ಮೇಲಿನ ಕಾರ್ಪೇಂಟರ ಕವಿತೆಯಲ್ಲಿ ಒಂದು ಸಮುದಾಯವು ತನ್ನ ವೃತ್ತಿಯಲ್ಲಿ ಬಳಸುವ ಉಪಕರಣಗಳನ್ನು ಕಾವ್ಯ ರೂಪಕಗಳಾಗಿಸಿ ಕಾವ್ಯ ಸೃಷ್ಟಿ ಮಾಡಿದ್ದ ಈ ಸಮಕಾಲೀನ ಕಾವ್ಯದ ವಿಶೇಷವಾಗಿದೆ. ಜೊತೆಗೆ ಆ ಸಮುದಾಯದ ಯುವಶಕ್ತಿಯ ಪ್ರೀತಿಯನ್ನು ವ್ಯಕ್ತಪಡಿಸಿದೆ. ಕವಿತೆಯಲ್ಲಿ ವ್ಯಕ್ತವಾದ ರೂಪಕಗಳನ್ನು ಕೆತ್ತುವುದು, ಉಳಿಗಳು, ಸುತ್ತಿಗೆಗಳು, ಮರದ ಕೊರಡು, ಮೊಲಗಳು ಹೀಗೆ ಮೂರ್ತಿ ರೂಪದ ರೂಪಕಗಳ ಮೂಲಕ ಸುಂದರವಾದ ಕವಿತೆಯನ್ನು ಕಟ್ಟಬಹುದೆಂದು ತೋರಿಸಿಕೊಟ್ಟಿದು ಸಮಕಾಲೀನ ಕಾವ್ಯದ ಶಕ್ತಿಯಾಗಿದೆ. ಇದರ ಜೊತೆಗೆ ನಗರದ ಕೇಂದ್ರಿತ ಸಂಬಂಧಗಳ ಕುರಿತಾಗಿಯೂ ಈ ಕವಿ ತನ್ನ ಕವನ ಸಂಕಲನದಲ್ಲಿ ಅಭಿವ್ಯಕ್ತಿಸಿರುವುದು ನೋಡಬಹುದಾಗಿ, ಹೊಸ ಪ್ರಯೋಗಗಳು ಮಾಡುತ್ತಿದೆ. ಇತ್ತೀಚಿನ ಕಾವ್ಯದಲ್ಲಿ ಎನ್ನುವದಕ್ಕೆ ಮಾಡುತ್ತಿವೆ ಇತ್ತೀಚೆಗೆ ಇದು ಸಾಕ್ಷಿಯಾಗಿ ಇದರಂತೆ ಜಂಗಮ ಫಕೀರನ ಜೋಳಿಗೆ ಮಾಂಸದಂಗಡಿಯ ನವಿಲು, ಬಾಳೆಯಲ್ಲಿ ಬಿರಿಯಾನಿ ಅಕ್ಕ ಸೀತಾ ನಿನ್ನಂತೆ ನಾನು ಶಂಕಿತ ಇವು ಕೇವಲ ರೂಪಕಗಳಲ್ಲಿ ಹೊಸ ಪ್ರಯೋಗಗಳು ಆಗುವುದರ ಜೊತೆಗೆ ಸಮಕಾಲೀನ ಸಂದರ್ಭದಲ್ಲಿ ತಳಸಮುದಾಯದ ಧ್ವನಿಗಳಾಗಿವೆ. ಈ ರೂಪಕಗಳ ಮೂಲಕ ಒಂದು ಇಡೀ ಸಮುದಾಯದ ಚಿತ್ರಣವನ್ನು ಬಿಚ್ಚಿ ಹೇಳುವ ಶಕ್ತಿಯನ್ನು ಹೊಂದಿರುವುದು ಕಂಡುಬಂದಿದೆ. ಇದರಂತೆ ಮುಮ್ತಾಜ್ ಬೇಗಂರವರ ಕವನ ಸಂಕಲನವಾದ ಕಂಬಂಧ ಬಾಹುಗಲು ಬೇಕಿಲ್ಲಿ ಎಂಬ ಸಂಕಲನದಲ್ಲಿ ತಮ್ಮ ಸಮುದಾಯದ ಸಂಕಟಗಳನ್ನು ವಿಭಿನ್ನವಾಗಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ ಜೊತೆಗೆ ಹೆಣ್ಣನ್ನು ಪರಂಪರೆಯಿಂದ ನೋಡುವ ಕ್ರಮವನ್ನು ವಿಶೇಷವಾಗಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

ಕೊಡತಿ ಹೊತ್ತು ಬೆಸಿ ಹಿಡಿದು
ಅರಳೆ ಹಿಂಜಿ ಅರೆ ಗಂಜಿಗಾಗಿ
ನೋವುನುಂಡವರು
ಊರೂರು ಅಲೆದು ತುತ್ತು
ಬಾನಕ್ಕಾಗಿ ತಿರುತಿರುಗಿ
ಸೋತವರು
ಕೇಳರಮೆಯ ನೋವು
ಕಿತ್ತು ತಿನ್ನುತಿಹುದು
ಕೋಮು ಸೌಹಾರ್ದತೆ ಪ್ರತೀಕ
ನಾವೆಲ್ಲ ಆದರೂ ಶೋಷಣೆ ತಪ್ಪಿಲ್ಲ.[೬]

ಮುಸ್ಲಿಂ ಧರ್ಮದಲ್ಲಿ ಉಪಜಾತಿಯಾದ ಪಿಂಜಾರ ಸಮುದಾಯದ ಬದುಕಿನ ಚಿತ್ರಣ ವ್ಯಕ್ತಪಡಿಸುವ ಕವಿತೆಯಾಗಿದೆ ಆ ಸಮುದಾಯದ ಬದುಕಿನ ಕ್ರಮ ಅಲೆಮಾರಿತನ ಕಾಯಕದ ಸಂಕಟ, ತುತ್ತು ತುತ್ತಿಗಾಗಿ ಅಲೆಯುವುದು ಮುಸ್ಲಿಯಂ ಇವರನ್ನು ಮುಸ್ಲಿಂರೆಂದು ನೋಡದೆ ಇತ್ತು. ಹಿಂದೂಗಳ ಅವರನ್ನು ಹಿಂದುಯೆಂದೊಡನೆ ಒಂದು ರೀತಿಯ ಅತಂತ್ರ ಸ್ಥಿತಿಯಲ್ಲಿ ಬದುಕನ್ನು ಸಾಗಿಸುತ್ತಿರುವುದನ್ನು ಸೊಗಸಾಗಿ ಅಭಿವ್ಯಕ್ತಿಸಿದ್ದಾರೆ ಇವರುಗಳಿಗೆ ಇತಿಹಾಸವಿಲ್ಲಿ ಶಾಸನಗಳಲ್ಲಿ ಸರಿಯಾದ ನೆಲೆಯಿಲ್ಲ ಎಂದು ನೋವಿನಿಂದ ನುಡಿದಂತಿದೆ ಇದೆಲ್ಲವನ್ನು ಮೀರಿ ಸೌಹಾರ್ದತೆಯಿಂದ ಬದುಕನ್ನು ಸಾಗಿಸಿದಾಗಲೂ ಶೋಷಣೆ ತಪ್ಪಿದ್ದಲ್ಲ ಅನುಮಾನದಿಂದ ನೋಡುವ ಕ್ರಮದಿಂದ ದೂರವಾಗಲಿಲ್ಲ ತಮ್ಮ ಕಾರ್ಯದಲ್ಲಿ ಕೈಲಾಸವನ್ನು ಕಾಣುತ್ತಾ ಪಂಪನ ವಾಕ್ಯ 'ಮನುಷ್ಯ ಜಾತಿ ತಾನೊಂದೇ ವಲಂ' ಎನ್ನುವ ಆಶಯವನ್ನು ತನ್ನ ಸಮುದಾಯದ ಆಶನದಂತೆ ನಂಬಿ ಬದುಕುತ್ತಿರುವ ಸಮುದಾಯಕ್ಕೆ ಅನುಮಾನ, ಶೋಷಣೆ ತಪ್ಪಿಲ್ಲ ಎಂದು ಕವಯಿತ್ರಿ ನೋವಿನಿಂದ ನುಡಿದಂತಿದೆ. ಈ ಕೋಮುವಾದದ ಸ್ಥಿತಿಯುಳ್ಳ ಮನಸ್ಸುಗಳ ತಮ್ಮನ್ನು ಯಾವ ನೆಲೆಯಲ್ಲಿ ನೋಡುತ್ತಿವೆ ಎಂದು ಭಯದಿಂದ ನುಡಿದು ಸೌಹಾರ್ದವಾಗಿ ನಗರ ಬದುಕುವ ಸಮುದಾಯ ತಮ್ಮ ಸಮುದಾಯ ಎಂದು ಹೇಳಿದಂತಿದೆ. ಮಹಿಳೆಯ ಕುರಿತಾಗಿ ಶತ ಶತಮಾನದಿಂದ ಶೋಷಣೆ ಅನುಭವಿಸಿ ಹೆಣ್ಣನ್ನು ಪ್ರೇಮದ ಚೌಕಟ್ಟಿನಲ್ಲಿ ಇಟ್ಟು ಪೂಜಿಸಿದರೆ ಆಕೆ ದೇವತೆಯಾಗುವುದಿಲ್ಲ. ಹೆಣ್ಣನ್ನು ದೇವತೆ ಎಂದು ನಂಬಿಸುವ ಹುನ್ನಾರಿದ ಕವಯಿತ್ರಿ ನೀವು ನಮ್ಮನ್ನು ದೇವತೆಯಾಗಿ ನೋಡುವುದು ಬೇಡ ಒಳ್ಳೆ ಜೀವವಾಗಿ ಹೆಣ್ಣಾಗಿ ನೋಡಿ ಅದು ಸಾಕು ಎಂದು ಹೇಳಿರುವುದು ಇವರ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಇದರಂತೆ ದು. ಸರಸ್ವತಿಯವರು ಕಾವ್ಯದಲ್ಲಿ ಹೆಣ್ಣಜೀವಿಗೆ ನೀಡಿದ ಅಪಚಾರಗಳು, ಹಿಂಸೆಗಳು ಶೋಷಣೆಯನ್ನು ಸ್ವರೂಪ ಯಾವ ರೀತಿಯಿದೆ ಎಂಬುದು ಅಭಿವ್ಯಕ್ತಿಸುವುದು ಕಂಡುಬಂದಿದೆ. ಸಮಕಾಲೀನ ಸಂದರ್ಭದಲ್ಲಿ ಹೆಣ್ಣಿಗೆ ನೀಡುತ್ತಿರುವ ಕಿರುಕುಳದ ಕಾವ್ಯದಲ್ಲಿ ಬೇರೆಯಾಗಿ ಅವುಗಳನ್ನು ಸಮಕಾಲೀನ ಕಾವ್ಯ ತಕ್ಕದಾದ ನೆಲೆಯಲ್ಲಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

ಸಮಕಾಲೀನ ಕಾವ್ಯ ವರ್ತಮಾನಕ್ಕೆ ಹಿಡಿದ ಕನ್ನಡಿಯಾಗಿದೆ. ಸಾಧ್ಯದ ಪರಿಸ್ಥಿತಿಯಲ್ಲಿ ನಡೆಯುತ್ತಿರುವ ದುರಂತಗಳ ಬಗ್ಗೆ ಬದುಕಿನ ಬಗ್ಗೆ ವ್ಯಾಪರೀಕರಣಗಳ ಬಗ್ಗೆ ಧರ್ಮ ತಾಳಿದ ನಿಲುಲುಗಳ ಬಗ್ಗೆ ಸಾಮಾಜಿಕ ನ್ಯಾಯದ ಜೊತೆಗೂ ಧಾರ್ಮಿಕ ಅನ್ಯಾಯದ ಬಗ್ಗೆ ಕಾವ್ಯ ಮಾತಾಡುತ್ತಿದೆ. ಕವಿ ಪೀರಬಾಷಾ ಕವಿತೆಯ ಸಾಲಿನಲ್ಲಿ ಅಕ್ಕ ಸೀತ ನಿನ್ನಂತೆ ನಾನು ಶಂಕಿತ ಎಂಬ ಸಾಲ, ತಮ್ಮ ಇಡೀ ಸಮುದಾಯವು ಅನುಭವಿಸುವ ಅವಮಾನವಾದ ಸ್ಥಿತಿಯನ್ನು ಶಂಕಿತ ಮನಸ್ಥಿತಿಯನ್ನು ಹೇಳುತ್ತದೆ. ಯಾರೋ ಮಾಡಿದ ತಪ್ಪಿಗೆ ಇಡೀ ಸಮುದಾಯವನ್ನು ಅನುಮಾನದಿಂದ ನೋಡುತ್ತಿದೆ. ಎಂದು ನೋವಿನಿಂದ ನುಡಿದಂತಿದೆ ಸಮಕಾಲೀನ ಕಾವ್ಯ ಇತ್ತೀಚಿನ ಅನೇಕ ತಳಸಮುದಾಯದ ಧ್ವನಿಯಾಗಿ ಕಾವ್ಯ ನಿಂತಿದೆ.

ಹೊಸ ತಲೆಮಾರಿನ ಕವಿಗಳಲ್ಲಿ ಟಿ. ಯಲ್ಲಪ್ಪರವರು ಸಹ ಒಬ್ಬರು. ಇವರು ತಮ್ಮ ವಿಭಿನ್ನ ಭಾಷಾಶೈಲಿಯಿಂದ ಹೊಸ ರೂಪಗಳ ಮೂಲಕ ಸಮಕಾಲೀನ ಸಂವೇದನೆಯನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಇವರ 'ಚಿಟ್ಟೆ ಮತ್ತು ಜೀವಯಾನ' ಎಂಬ ಕವನ ಸಂಕಲನದಲ್ಲಿ ವ್ಯಕ್ತವಾದ ಅಂತರಾಳ, ತಳಮಳ ಸಂಕಟ, ಒಲವು ಮತ್ತು ಬಯಕೆ, ಎಲ್ಲವೂ ವಿಶೇಷವಾಗಿದೆ. ಯಾವುದೇ ಕಾಲದ ಕಾವ್ಯ ತನ್ನ ಆಂತರ್ಯದಲ್ಲಿ ಸಮಕಾಲೀನ ಸಂಕಟಗಳನ್ನು ಧ್ವನಿಸುತ್ತಲೆ ಭೂತ ಮತ್ತು ಭವಿಷ್ಯತ್ತಿನ ಧ್ಯಾನದಲ್ಲಿರುತ್ತದೆ. ಅದರಂತೆ ಸಮಕಾಲೀನ ಕಾವ್ಯವು ಸಹ ಇಂದಿನ ಸುಡು ವಾಸ್ತವಗಳನ್ನು ಅಂತರಂಗ ಮತ್ತು ಬಹಿರಂಗದಲ್ಲಿ ಧ್ವನಿಸುವುದು ಕಂಡುಬಂದಿದೆ. ವಸ್ತುವಿನ ಆಯ್ಕೆ ಮತ್ತು ಅಭಿವ್ಯಕ್ತಿಯಲ್ಲಿ ವೈವಿಧ್ಯತೆ ಕಂಡುಬಂದಿದೆ. ಕವಿತೆ ಓದಿದ ನಂತರ ನಮ್ಮನ್ನು ಕಲಕುವ ಮತ್ತು ಚಿಂತನೆಗೆ ಹಚ್ಚುವ ಕೆಲಸ ಮಾಡುತ್ತಿದೆ. ವರ್ತಮಾನದಲ್ಲಿ ಮಾರುಕಟ್ಟೆಯ ಪ್ರಭಾವ ಹೆಚ್ಚಾಗಿ ಮೌಲ್ಯಗಳು ಎಲ್ಲವೂ ವ್ಯವಹಾರಿಕ ದೃಷ್ಟಿಯನ್ನು ಹೊಂದಿರುವುದಕ್ಕೆ ಕಾವ್ಯ ಬೇಸರ ವ್ಯಕ್ತಪಡಿಸಿರುವುದು ಕಂಡುಬಂದಿದೆ. ಹಾಗೆ ಖಾರವಾಗಿಯೂ ಪ್ರತಿಕ್ರಿಯಿಸಿರುವುದು ನೋಡಬಹುದು. ಕವಿ ಟಿ. ಯಲ್ಲಪ್ಪ ಸಮಕಾಲೀನ ಸಂಕಟಗಳನ್ನು ತನ್ನ ಉಡಿಯೊಳಗೆ ಕಟ್ಟಿಕೊಂಡು ಸಾಗುತ್ತ ಬಂದಿದ್ದಾರೆ. ಕಾವ್ಯ ಪಯಣದ ಹಾದಿಗೆ ಹೊಸ ಬಗೆಯ ಅಡಿಗಲ್ಲನ್ನು ಹಾಕುವ ಕನಸು ಇವರ ಕಾವ್ಯದಲ್ಲಿ ವ್ಯಕ್ತವಾಗಿದೆ. ಅಪ್ಪ, ತಮ್ಮ, ಅಮ್ಮ, ಅಕ್ಕಂದಿರ ಬಗೆಗೆ ವಿಶಿಷ್ಟವಾದ ಕಾಳಜಿ ವ್ಯಕ್ತಪಡಿಸಿದ ಪದ್ಯಗಳು ರಚಿಸಿದ್ದಾರೆ. ಬಡತನ, ಜಾತಿ ಮತ್ತು ಧರ್ಮದ ನಡುವೆಯೋ ಆಪ್ತವಾಗಿ ನಿರ್ಮಾಣವಾಗುವ ಜಗತ್ತನ್ನು ಬಿಚ್ಚಿಟ್ಟಿದ್ದಾರೆ.

### ೫.೩. ಅಖಂಡತೆ

ಕಾವ್ಯ ವರ್ತಮಾನದ ತಲ್ಲಣಗಳನ್ನು ಧ್ವನಿಸುವುದರ ಜೊತೆಯಲ್ಲಿ ಸಾಮಾಜಿಕ ಕಾಳಜಿ ಜೀವಪರ ಚಿಂತನೆ. ವಿಸ್ಮಯ, ತತ್ವಗಳು, ವಿಚಾರಗಳ ಮೌಲ್ಯಗಳನ್ನು ಸಹ ಅಭಿವ್ಯಕ್ತಿಸುತ್ತದೆ.ಖೂ ಸಣ್ಣ-ಸಣ್ಣ ತಳಸಮುದಾಯಗಳು ಸಾಂವಿಧಾನಿಕ ನೆಲೆಯಲ್ಲಿ ಒಂದಾಗಲಿರುವ ಜೊತೆಯಲ್ಲಿ ಒಂದು ಸಾಂಸ್ಕೃತಿಕ ಅಖಂಡತೆ ಏಕತೆಯನ್ನು ಹೇಗೆ ಹೊಂದಬೇಕು ಎಂಬುದನ್ನು ಸಮಕಾಲೀನ

ಕಾವ್ಯ ಸಾರುತ್ತಿದೆ. ಪ್ರಾದೇಶಿಕತೆ, ಜಾತಿ, ಮತ, ಲಿಂಗ, ಭಾಷೆ ಹೀಗೆ ಇಂತಹ ಅನೇಕ ಅಸಮಾನತೆಗಳನ್ನು ಮೀರಿ ಅಖಂಡತೆಯ ಬದುಕನ್ನು ಸಾಗಿಸುವ ಬಗೆಯನ್ನು ಕಾವ್ಯ ಹೇಳುತ್ತಿದೆ. ಕುವೆಂಪುರವರ ವಿಶ್ವಮಾನವ ಸಂದೇಶದಂತೆ ಮನುಷ್ಯ ಜೀವರಾಶಿಯ ಅಖಂಡತೆಯ ಆಶಯವನ್ನು ಕಾವ್ಯ ಒಳಗೊಂಡಿದೆ. ಇಂಥ ಅಖಂಡತೆಯ ಜೀವ ನೆಲೆಯಲ್ಲಿ ಹೊಸ ಹೊಸ ನುಡಿಗಟ್ಟಗೆ ಮತ್ತು ಪ್ರಯೋಗಗಳನ್ನು ಕಾಣಬಹುದು. ಎನ್ಕೆ ಹನುಮಂತಯ್ಯರವರ ಕವಿತೆಯು ಸಾರದಲ್ಲಿ ದಲಿತ ಸಮುದಾಯ ಒಗ್ಗೂಡುವ ಜೊತೆಯಲ್ಲಿ ಅಖಂಡತೆಗಳಾಗಿ ಹಂಬಲಿಸುವುದು ಕಂಡು ಬಂದಿದೆ ಆರೀಫರಾಜಾರ ಕವಿತೆಯ ಸಾಲುಗಳಲ್ಲಿ ಮುಸ್ಲಿಂ ಸಮುದಾಯವನ್ನು ಈ ನೆಲದಲ್ಲಿ ಅನುಮಾನದಿಂದ ನೋಡುವ ದೃಷ್ಟಿದೂರವಾಗಿ ಸರ್ವಧರ್ಮದ ಜನರು ಸಮಾನತೆಯಲ್ಲಿ ಒಂದಾಗಿ ಅಖಂಡತೆಯ ಆಶಯದಲ್ಲಿ ಜೀವಿಸುವಂತೆ ಕರೆ ನೀಡಿದಂತಿದೆ. ಮಹಿಳಾ ಕಾವ್ಯದಲ್ಲಿಯೂ ಇದೇ ತೆರನಾಗಿರುವ ಧೋರಣೆಯನ್ನು ಕಾಣಬಹುದು. ಕವಿ ಪೀರಬಾಷಾ ಅವರ ಕವಿತೆಯ ಸಾಲುಗಳಲ್ಲಿ 'ನಾವೆಲ್ಲ ಭಾರತೀಯರ ಮಕ್ಕಳು' ಎಂಬ ಅಖಂಡತೆಯನ್ನು ಅಭಿವ್ಯಕ್ತಿಸುವದು ಕಾಣಬಹುದು. ಬೇಂದ್ರೆ ಹೇಳುವಂತೆ ತಮಗೆ ಐದು ಮಂದಿ ತಾಯಂದಿರು ಎಂದು ಹೇಳುತ್ತಾರೆ. ವಿಶ್ವಮಾತೆ, ಭೂಮಾತೆ, ಭಾರತಾಂಬೆ, ಕನ್ನಡತಾಯಿ, ಹೆತ್ತತಾಯಿ ಹೀಗೆ ಒಂದೊಂದು ನೆಲೆಯಲ್ಲಿ ಅಸ್ಮಿತೆಯೊಂದಿ ಕೊನೆಗೆ ಎಲ್ಲವೂ ಸೇರಿ ಒಂದಾಗಿ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಪಂಪನ ವಾಣಿಯನ್ನು ಸಾರ್ಥಕ ಪಡಿಸುವುದಾಗಿದೆ. ಸಣ್ಣಪುಟ್ಟ ಸಮುದಾಯಗಳು ತಮ್ಮ ತಮ್ಮ ಸಾಂಸ್ಕೃತಿಕ ನೆಲೆಯೂ ಭಾಷಿಕ ನೆಲೆಯಲ್ಲಿ ಒಗ್ಗೂಡಿದರೂ ಕೊನೆಗೆ ಅದರಿಂದ ಸಾಮಾಜಿಕ ತೊಂದರೆಗೆ ಕಾರಣವಾಗದಂತೆ ಪರಸ್ಪರ ಐಕ್ಯತೆಯಿಂದ ಒಂದು ಅಖಂಡತೆಗೆ ಜೀವನಕ್ಕೆ ಮೊರೆ ಹೋಗಬೇಕಾದ ಅನಿವಾರ್ಯತೆ ಇದೆ ಎಂದು ಕಾವ್ಯ ಧ್ವನಿಸುತ್ತವೆ. ಹಾಗೇ ಅಖಂಡತೆಗಾಗಿ ಹಂಬಲಿಸುತ್ತಿರುವುದು ಕಂಡುಬಂದಿದೆ. ಎಲ್ಲಾ ಸಿದ್ಧಾಂತಗಳ ತತ್ವಗಳು, ಚಿಂತನೆಗಳು, ಸಂಘಟನೆಗಳು ಜೀವಪರ ಕಾಳಜಿಯಲ್ಲಿ ತಮ್ಮ ತಮ್ಮ ಪಡಿರೇಖೆಗಳನ್ನು ಮುರಿದು ಎಲ್ಲರೂ ಒಳತಿಗಾಗಿ, ಜೀವಕ್ಕಾಗಿ, ಸೌಹಾರ್ದಕ್ಕಾಗಿ, ಸಾಮರಸ್ಯಕ್ಕಾಗಿ ಬದುಕಬೇಕೆಂಬ ಮೌಲ್ಯಯುತವಾದ ಆಶಯವನ್ನು ಸಮಕಾಲೀನ ಕಾವ್ಯ ಅಭಿವ್ಯಕ್ತಿಸುವುದು ಕಂಡುಬಂದಿದೆ. ಎನ್ಕೆ ಹನುಮಂತಯ್ಯ ಅವರ ತಮ್ಮ ಕವಿತೆಯಲ್ಲಿ ಬಳಸುವ ಪ್ರತಿಮೆಗಳು ಸರ್ವವನ್ನು ಒಳಗೊಳ್ಳುವ ನೀರು, ಮರ, ಆಕಾಶ, ನೆಲ, ಮಣ್ಣು ಹೀಗೆ ಮುಂತಾದ ರೂಪಕಗಳು ಬಳಸುವುದರ ಹಿನ್ನೆಲೆ ಅಖಂಡತೆಯ ಆಶಯವನ್ನು ಹೊಂದಿರುವುದಾಗಿದೆ. ನೀರು ಹರಿಯುವುದು ಸಮಾನವಾಗಿ ಹೀಗೇ ನೀರಲ್ಲಿ ಏನೇ ಹಾಕಿದರೂ ಒಳಗೊಳ್ಳುತ್ತದೆ. ಅದರಂತೆ ಮರವು ಸಹ ಸರ್ವರಿಗೂ ನೆರಳು ನೀಡುತ್ತದೆ. ಯಾವುದೇ ಜಾತಿ ಹಕ್ಕಿಗಳು ಒಂದು ಗೂಡು ಕಟ್ಟಿದರೂ ಸಮ್ಮತಿಸುತ್ತದೆ. ಹಾಗೂ ಯಾವುದೇ ಪ್ರಾಣಿ ಬಂದೂ ಮೈ ಹುಜ್ಜಿ ನೆರಳ ಪಡೆದರೂ ಸುಮ್ಮನಿರುತ್ತದೆ. ಇದು ಅಖಂಡತೆಯ ಸೂಚಕವಾಗಿದೆ. ಪ್ರಸ್ತುತ ಸಮಕಾಲೀನ ಕವಿಗಳು ತಾವು ಬಳಸುವ ಅಭಿವ್ಯಕ್ತಿಸುವ ರೂಪಕ ಮತ್ತು ಆಶಯದ ನೆಲೆ ಅಖಂಡತೆಯ ನೆಲೆಯಾಗಿದೆ. ಎನ್ಕೆ ಹನುಮಂತಯ್ಯ ಅವರ ಕವಿತೆಯ ಸಾಲುಗಳನ್ನು ಗಮನಿಸಿದಾಗ.

ಆಗ ನಾನು
ಮರವಾಗುತ್ತೇನೆ.
ಗೂಡು ಕಟ್ಟುತ್ತವೆ
ನಾನು
ಬೂದಿಯಾಗುತ್ತೇನೆ
ಮಳೆ ಸುರಿಸುತ್ತವೆ
ನಾನು ಮತ್ತೆ ಮರವಾಗಿ
ಚಿಗುರುತ್ತೇನೆ.[೮]

ಕವಿ ಇಲ್ಲಿ ಅಭಿವ್ಯಕ್ತಿಸಿದ ಪ್ರತಿಮೆಗಳ ಮರ, ನೀರು, ನೆರಳು, ಗೂಡು ಹೀಗೆ ಸರ್ವವನ್ನು ಒಳಗೊಳ್ಳುವ ಅಖಂಡತೆಯನ್ನು ಸಾರುವ ಆಶಯ ವ್ಯಕ್ತಪಡಿಸುವ ರೂಪಕಗಳಾಗಿವೆ. ಮುಡ್ನಾಕೋಡು ಚಿನ್ನಸ್ವಾಮಿ ಅವರ ಕವಿತೆಯೊಂದನ್ನು ನೋಡವುದಾದರೆ ನಾನೊಂದು ಮರವಾಗಿದ್ದರೆ ಕೇಳುತ್ತಿರಲಿಲ್ಲ ಯಾವ ಹಕ್ಕಿಯನ್ನು ನೀವು ಯಾವ ಜಾತಿ ಎಂದು ಯಾವ ಪ್ರಾಣಿ ಬಂದು ನಿಲ್ಲುವಂತೆ ಅದರ ಕುಲ ಕೇಳುತ್ತಿರಲಿಲ್ಲ ಎಂಬ ಅಖಂಡತೆಯ ಆಶಯವನ್ನು ಕಾಣಬಹುದು. ಇವರ ಇನ್ನೊಂದು ಕವನದಲ್ಲಿ ಬಾ ಗೆಳತಿ ಚೂರಾದ ಮುಖಗಳ ಆಯೋಣ ಎನ್ನುವಂತಹದ್ದು ಸಹ ಅಖಂಡತೆಯ ಸಂಕೇತವಾಗಿದೆ ಇಲ್ಲಿ ಯಾವ ಮುಖ ಇಂಥ ಜಾತಿಯದ್ದ, ಧರ್ಮದ್ದ, ಭಾಷಯದ್ದು, ದೇಶದ್ದ, ರಾಜದ್ದ ಎಂದು ಪ್ರತ್ಯೇಕಿಸದೆ ನೊಂದವರ, ಅಸಹಾಯಕರ ಮುಖ, ಚೂರು ಚೂರಾದ ಮುಖವನ್ನು ಆಯೋಣ ಬಾ ಎಂದ ಕರೆದಿರುವುದು ಅಖಂಡ ಮನುಷ್ಯತ್ವ ಸೂಚಕವಾಗಿದೆ. ಸಮಕಾಲೀನ ಪದ್ಯಗಳಲ್ಲಿ ಗಾಂಭೀರ್ಯದ, ವಿಚಾರ ಹಾಗೂ ವಿಸ್ತಾರದ ಸ್ವರೂಪವನ್ನು ಕಾಣಬಹುದಾಗಿದೆ. ಏಕಾಂಗಿತನ, ಹೋರಾಟ, ವಿಚಾರ ಕಹಿ, ಬದುಕು, ಬಯಕೆ, ಹಿಂಸೆ, ಪ್ರಶಂಸೆ ಎಲ್ಲವನ್ನು ಒಳಗೊಳ್ಳುವುದರ ಜೊತೆಯಲ್ಲಿ ಆಶಯ ಪೂರಕವಾದ ಏಕತೆಯ ಅಖಂಡತೆಯನ್ನು ಬಯಸಿದ ಕಾವ್ಯ ಸಮಕಾಲೀನ ಕಾವ್ಯವಾಗಿದೆ.

ಕವಿ ಪೀರ್‌ಬಾಷಾರ ಕವಿತೆಯಲ್ಲಿ ವ್ಯಕ್ತವಾಗುವ ಅಖಂಡತೆಯನ್ನು ಈ ರೀತಿಯಾಗಿ ನೋಡಬಹುದು. ಇವರ ಕಾವ್ಯದಲ್ಲಿ ಬಳಕೆಯಾಗುವ ಕವಿತೆಯ ಸಾಲುಗಳು ಸೌಹಾರ್ದತೆಗೆ ಹಂಬಲಿಸುವುದರ ಜೊತೆಯಲ್ಲಿ ಸಮಾಜ ತನ್ನ ಸಮುದಾಯವನ್ನು ಶಂಕಿತದಿಂದ ಅನುಮಾನದಿಂದ ನೋಡುತ್ತಿರುವ ಭಯವು ಸಹ ಕಾಣಬಹುದಾಗಿದೆ. ಇದೆಲ್ಲದರ ಮಧ್ಯಯೂ ತಾವೂ ಯಾರೆಂದು ತಮ್ಮ ರಾಷ್ಟ್ರಪ್ರೇಮ, ವಿಶ್ವಪ್ರೇಮ ಎಂತಹದ್ದು ಎಂಬುದನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಗೊಳಪಟ್ಟ ಬಗ್ಗೆ ಈ ರೀತಿಯಾಗಿದೆ.

ಈ ನೆಲವೇ ನನ್ನ ಸೃಷ್ಟಿಯ ಮೂಲ
ಈ ನೆಲವೇ ನನ್ನ ಅನ್ನದ ಮೂಲ
ಈ ನೆಲಕ್ಕೇ ನನ್ನ ಬದುಕು ಅರ್ಪಿತ

ಈ ನೆಲಕ್ಕೇ ನನ್ನ ಸಾವೂ ಬದ್ಧ
ಈ ಅಖಂಡ ನೆಲವೇ ನನ್ನ ತಾಯಿ
ಈ ಅಖಂಡ ನೆಲವೇ ನನ್ನ ಮಾತೃಭೂಮಿ'

ಕವಿ ತನ್ನ ಕವಿತೆಯಲ್ಲಿ ತನ್ನ ದೃಢನಿರ್ಧಾರವನ್ನು ವ್ಯಕ್ತಪಡಿಸಿದ್ದಾರೆ. ತನ್ನ ಸಮುದಾಯವನ್ನು ಅನುಮಾನದಿಂದ ನೋಡುವ ವೈದಿಕಶಾಹಿ ಮನೋಭಾವಗಳಿಗೆ, ತಮ್ಮನ್ನು ಪಂಕ್ತಿಯರೆಂದು ಕಾಣುವ ಮನಸ್ಸುಗಳಿಗೆ ಈ ನೆಲದ ವಾರಸುದಾರಿಕೆಯ ಜವಾಬ್ದಾರಿ ಹೊತ್ತು ನಿಂತು ಪ್ರಶ್ನಿಸುವ ಮನಸ್ಸುಗಳಾಗಿ ಕವಿ ತನ್ನ ಕಾವ್ಯದ ಮೂಲಕ ಉತ್ತರಿಸಿದ ರೀತಿ ಸೊಗಸಾಗಿದೆ. ತಾನೂ ಈ ನೆಲಕ್ಕೆ ತನ್ನ ಜೀವ ಅರ್ಪಿತ. ತಾನೂ ತನ್ನ ಸಮುದಾಯ ಈ ನೆಲದವರೆ, ಇಲ್ಲಿಯ ಗಾಳಿ, ನೆಲ, ಜಲ, ಆಹಾರ ತಮ್ಮದಾಗಿರುವುದಾಗಿ ಅದು ಹೇಗೆ ಪರಕೀಯರಾಗುತ್ತೇವೆ. ನಿಸರ್ಗದತ್ತವಾದ ಸಂಪತ್ತು ಯಾಗ ಒಬ್ಬ ವ್ಯಕ್ತಿಯ ಯಾವ ಒಂದು ಸಮುದಾಯದ ಪುಟದಲ್ಲಿ ಸಕಲ ಜೀವರಾಶಿಯ ಸ್ವತ್ತು ಎನ್ನುವ ಅಖಂಡತೆಯನ್ನು ಸಾರಿದ್ದಾರೆ. ಈ ನೆಲಕ್ಕೆ ತನ್ನ ಬದುಕನ್ನು ಅರ್ಪಿಸಿರುವುದು. ಈ ನೆಲದಲ್ಲೆ ತನ್ನ ಅನ್ನ ಮತ್ತು ನೆರಳು, ಸಾವು ಇಲ್ಲಿಯೇ ಎಂದು ದೃಢಪಡಿಸಿ ಈ ಅಖಂಡ ಭೂಮಿತಾಯಿಯೇ ನಮ್ಮೆಲ್ಲರ ತಾಯಿ, ನಾವೆಲ್ಲ ಒಂದೇ ತಾಯಿಯ ಮಕ್ಕಳು ಭೂತಾಯಿಯ ಮಕ್ಕಳು ಇದಕ್ಕೆ ದೇಶ, ಭಾವ, ಲಿಂಗ, ಬಣ್ಣ, ಯಾವುದು ಗಡಿರೇಖೆಗಳಲ್ಲಿದೆ ಏಕವಾಗಿ ಜೀವಿಸುವ ಅಖಂಡತೆಯ ಆಶಯವನ್ನು ಕಾಣುಹುದಾಗಿದೆ ಇವರ ಕಾವ್ಯದಲ್ಲಿ ಸರ್ವ ಮನುಷ್ಯ ಕುಲವು ಮೂಲ ಒಂದೇ ಆಗಿದೆ. ತನ್ನ ಅನ್ನದ ನೆಲ ಈ ನೆಲದ ಮೂಲದಲ್ಲೇ ಇರುವೆವೆಂದು ತಾನೂ ಈ ನೆಲದ ವಾಸಿ ಎಂದು ಕೂಗಿ ಹೇಳಿದಂತಿದೆ.

ಸಮಕಾಲೀನ ಕಾವ್ಯ ತನ್ನ ನೆಲೆಯನ್ನು ಗಟ್ಟಿಗೊಳಿಸುವ ಆಶಯದಲ್ಲೇ ಇಡೀ ಭೂಮಿಯು ಜೀವಿಗಳೆಲ್ಲ ಒಂದೇ ಎಂಬ ಅಖಂಡತೆಯನ್ನು ಮಹತ್ತರ ಆಶಯವನ್ನು ಸಹ ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಹಾಗೇ ಒಂದು ತಾತ್ವಿಕ ನೆಲೆಯಾಗಿಸಿಕೊಂಡು ಸಮಕಾಲೀನ ಕವಿಗಳು ಕಾವ್ಯ ರಚನೆಯಲ್ಲಿ ತೊಡಗಿದ್ದಾರೆ. ಸಮಕಾಲೀನ ಕಾವ್ಯದಲ್ಲಿ ಅನೇಕ ಕವಿಗಳು ಯುವಕ ಯುವತಿಯರಿದ್ದಾರೆ. ಆದ್ದರಿಂದ ಈ ಯುವ ಪಡೆ ಹೊಸ ಪ್ರಯೋಗಕ್ಕೆ ಹೊಸತನಕ್ಕೆ ಹೆಚ್ಚಿನ ರೀತಿಯಲ್ಲಿ ಪ್ರಯತ್ನಿಸುತ್ತಿರುವುದು ಕಂಡು ಬಂದಿದೆ. ಪ್ರೀತಿಯ ಮೂಲಕ ಎಲ್ಲವನ್ನು ಪ್ರೇಯಸಿಯ ಮೂಲಕ ತಮ್ಮ ಆಶಯವನ್ನು ಅಭಿವ್ಯಕ್ತಿಸುವ ನೂತನ ಪ್ರಯೋಗ ಮಾಡುವುದು ಕಂಡುಬಂದಿದೆ. ಮನುಷ್ಯ ಪ್ರೀತಿಯ ಮೂಲಕ ಅಖಂಡತೆಯನ್ನು ಸಾರುವುದು ಗಮನಿಸಬಹುದಾಗಿದೆ. ಅಖಂಡತೆಯ ಆಶಯವನ್ನು ನಮ್ಮ ದೇಹದ ಒಳಗಡೆ ಹರಿಯುವ ರಕ್ತದ ಮೂಲಕ ಮೈಮೇಲೆ ಹೊದಿಕೆಯಾಗಿರುವ ಚರ್ಮದ ಮೂಲಕ, ಮನುಷ್ಯನ ನರನಾಡಿಗಳ ಸರ್ವಸಮಾನತೆಯ ಮೂಲಕ ಅಖಂಡತ್ವವನ್ನು ಕಾವ್ಯದಲ್ಲಿ ಅಭಿವ್ಯಕ್ತಿಸಲಾಗಿದೆ. ಬೀಸುವ ಗಾಳಿ, ಚೆಲ್ಲುವ ಬಿಸಿಲು, ಕತ್ತಲು ಎಲ್ಲವೂ ಸಮವಾಗಿ ಹರಿದಾಡುವುದರ ಸೂಚಕವನ್ನು ಅಖಂಡತೆಯಾಗಿ ಸ್ಫೂರ್ತಿಗಾಗಿ

ಒಳಪಡಿಸಿರುವುದು ಗಮನಿಸಬಹುದು. ನಾವೆಲ್ಲರೂ ಒಂದೇ ಹೂವಿನ ದಳಗಳು ಒಂದೇ ಸಾಗರದ ಅಲೆಗಳು ಒಂದೇ ಮರದ ಎಲೆಗಳು ಎಂಬ ಆಶಯವನ್ನು ಅಭಿವ್ಯಕ್ತಿಸಿರುವುದು ಅಖಂಡತೆಯ ಸೂಚಕವಾಗಿದೆ. ನಾನು ಅತ್ತಾಗ ಬಿದ್ದಾ ಕಣ್ಣೀರಲ್ಲಿ ಜೀವವಿದೆ ಎನ್ನುವ ರೂಪಕ ಜೀವ ಸರ್ವ ಜೀವದ ಸಂಕೇತವಾಗಿದೆ ಅದೇ ಅಖಂಡತೆಯಾಗಿದೆ.

ವಿಠಲ ದಳವಾಯಿ ಅವರ ಕವಿತೆಯ ಆಶಯವೂ ಇದೇ ಆಗಿದೆ ಅವರ ಕಾವ್ಯದಲ್ಲಿ ವ್ಯಕ್ತಗೊಳಿಸುವ ಬಗೆಯು ಈ ರೀತಿಯಾಗಿದೆ.

ನಮ್ಮ ಬದುಕಿನ ಭಿತ್ತಿಯಲಿ
ನೀವು ಅಡ್ಡಾದಿಡ್ಡಿ ನೀತಿದ ನೀರು
ಲಾಂಛನಗಳ ಒರೆಸಿ ಹಾಕಬೇಕಿದೆ
ನಮಗೆ ಬೇಕಾದ ಹಾಡನ್ನು
ನಾವೇ ಬರೆದುಕೊಳ್ಳುತ್ತೇವೆ.[೧೧]

ಬಲವಂತವಾಗಿ ಏರಿರುವ ನಿರ್ಧರಿತ ನಿಯಮಗಳನ್ನು ಮುರಿದು ಕಂದಕಗಳನ್ನು ಕಟ್ಟಿಹಾಕಿ ತಮಗೆ ಬೇಕಾದ ರೀತಿಯಲ್ಲಿ ತಾನೇ ಬದುಕನ್ನು ಕಟ್ಟಿಕೊಳ್ಳುವ ಆಶಯವನ್ನು ಹೊಂದಿರುವುದು ಗಮನಿಸಬಹುದಾಗಿದೆ

ನಮಗೆ ಬೇಕಾದ ಹಾಡನ್ನು ನಾವೇ ಬರೆದುಕೊಳ್ಳುತ್ತೇವೆ ಎಂಬುದರ ಸೂಚಕ ತಮಗೆ ಐಕ್ಯತೆಯ ಸಮಾನತೆಯ ಶೋಷಣೆ ಮುಕ್ತ ಬಂಧ ಮುಕ್ತವಾದ ದೇಶವನ್ನು ಅಖಂಡತೆಯನ್ನು ನಾವೇ ಬರೆದುಕೊಳ್ಳುತ್ತೇವೆ. ಅಲ್ಲಿ ಸಮಾನತೆ ಗಾಳಿ, ಬೆಳಕು, ಬದುಕು, ಎಲ್ಲವೂ ನಾವಂದುಕೊಂಡಂತೆ ಇರುವ ವ್ಯವಸ್ಥೆ ಮಾಡುತ್ತೇವೆ. ನಮ್ಮ ಸಂವಿಧಾನದ ಹಾಡನ್ನೇ ನಾವೇ ಬರೆದುಕೊಳ್ಳುತ್ತೇವೆ. ಯಾರ ಹಂಗು ನಮಗೆ ಬೇಡ ಎನ್ನುವುದರ ಸೂಚನೆಯ ಆಶಯವನ್ನು ಕಾವ್ಯ ಧ್ವನಿಸಿದೆ. ಪರಂಪರಾಗತವಾಗಿ ಬಂದಿರುವ ಸಿದ್ಧಮಾದರಿಯ ನೀತಿ ನಿಯಮಗಳ ಕಂದಾಚಾರಗಳು, ಸಂಪ್ರದಾಯಗಳು, ಕೆಲವೊಂದು ಹಿಂಸಾತ್ಮಕತೆಯನ್ನು ವಿಜೃಂಭಿಸುವ ಸಂಕೇತಗಳ ಲಾಂಛನಗಳನ್ನು ಧಿಕ್ಕರಿಸಿ ಪ್ರೀತಿ, ಪ್ರೇಮ, ಸೌಹಾರ್ದತೆಯ ಬೆಳಕಲ್ಲಿ ಬದುಕನ್ನು ಸಾಗಿಸಲು ಬಯಸುತ್ತೇವೆ. ಅದರಂತೆ ಬಾಳುತ್ತೇವೆ. ಎಂಬುದನ್ನು ಈ ಮೇಲಿನ ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಕಂಡು ಬಂದಿದೆ. ಬುದ್ಧಿ ಭಾವಗಳೆರಡು ವಾಣಿಜ್ಯೀಕರಣಗೊಂಡು ತಕ್ಕಡಿ ಹಿಡಿದುಕೊಂಡೇ ಸಂಬಂಧಗಳನ್ನು ಅಳೆಯುತ್ತಿರುವ ಈ ಕಾಲಘಟ್ಟದಲ್ಲಿ ಸಮಕಾಲೀನ ಕಾವ್ಯ ಅಖಂಡತೆಯ ಆಶಯವನ್ನು ಹೊತ್ತು ನಿಂತಿದೆ. ಇಂಥ ದುರ್ಗತಿಗೆ ಮುಲಾಮು ಹರಿಯಲು, ಸಾಂತ್ವನ ಹೇಳು ತನ್ನ ಸುತ್ತಮುತ್ತಲೂ ಆವರಿಸಿರುವ ಕತ್ತಲೆಗೆ ಪ್ರತಿರೋಧವನ್ನು ಒಡ್ಡುತ್ತ ತನ್ನೊಳಗೆ ಮತ್ತು ಹೊರಗೆ ಬೆಳಗುವ ಬೆಳದಿಂಗಳ ಬೆಳಕನ್ನು ಕವಿತೆ ಚೆಲ್ಲುತ್ತಿದೆ. ಅಖಂಡತೆಯು ಸಮಕಾಲೀನ ಕಾವ್ಯದ ಭಾವಕೋಶದ ಭಾಗವೇ ಆಗಿದೆ. ಮನುಷ್ಯ ಸಂಬಂಧಗಳು

ಯಾಂತ್ರೀಕೃತವಾದ ನೆಲೆಯಿಂದ ಬಿಡಿಸಿಕೊಂಡ ನಿಜವಾದ ಮನುಷ್ಯ ಪರಚಿಂತನೆ ತಾತ್ವಿಕತೆಯಲ್ಲಿ ಸಂಬಂಧ ಏರ್ಪಡಿಸುವ ಜವಾಬ್ದಾರಿಯನ್ನು ತನ್ನೊಡಲಿಗೆ ಹಾಕಿಕೊಂಡಂತಿದೆ. ಕಲಾತ್ಮಕವಾದ ಹೃದಯ ಕಾವ್ಯ ಹೊರ ಒಮ್ಮುಖಿಕೆಯಲ್ಲಿ ಸಾಮಾಜಿಕ ಜವಾಬ್ದಾರಿಯ ಬೆಳಕು ಸಹ ಇದೆ. ಹೊಸ ಪೀಳಿಗೆಯ ಒಂದಿಷ್ಟು ಹೊಸ ಅನುಭವಗಳಾಗಿ ಮುಖ್ಯ ವೇದಿಕೆಯನ್ನು ಕಟ್ಟಿಸಿರುವ ಕಾವ್ಯ ಸಮಕಾಲೀನ ಕಾವ್ಯವಾಗಿದೆ. ತಮ್ಮ ಅನುಭವಗಳಿಗೆ ಕಲಾತ್ಮಕ ಕಾವ್ಯರೂಪ ಕೊಡುವಂತೆ ಅದಕ್ಕೊಂದು ಸ್ವಂತಿಕೆಯ ಜೀವನ ದೃಷ್ಟಿ ಹಾಗೂ ಬದ್ಧತೆ ಇರುವ ಕಾವ್ಯ ಹೆಚ್ಚು ಸತ್ಯಯುತವಾಗಿರಲೂ ಸಾಧ್ಯ. ಅಂತಹ ಕಾವ್ಯ ಸಮಕಾಲೀನ ಕಾವ್ಯವಾಗಿದೆ. ಎಂದು ಹೇಳಬಹುದು. ಈ ವಿಧಾನಗಳ ಹೊಸ ನುಡಿಗಟ್ಟಿನ ಪ್ರಯೋಗಗಳೇ ಸಾಕ್ಷಿ.

ಅಖಂಡತೆಯ ಆಶಯವನ್ನು ಮತ್ತೊಬ್ಬ ಕವಿಯಾದ ಲಕ್ಕೂರ ಆನಂದರ ಕವಿತೆಯಲ್ಲಿ ಗಮನಿಸಬಹುದಾದರೆ

ಜಗದ ನೂಲಿಗೆ ಬಿಸಿದ ಇಷ್ಟೆಲ್ಲ ಎಳೆಗಳ ನಡುವೆ
ಬರೆಯದೆ ಬಿಟ್ಟ ಖಾಲಿ ಹಾಳೆಗಳೂ ಇವೆ.
ಭೂತದ ಭಾರವಿದೆ ವರ್ತಮಾನದ ದುಃಖ ವಿದೆ ಯಶೋಧರನಿಂದ
ದೂರವಾದ ಅಮೃತಮತಿಯ ಆಲಾಪದ ಬಿಕ್ಕಳಿಕೆಯಲ್ಲೂ
ಜಗದ ಸೂಲಿಗೆ ಬಂದು ಸೇರುತ್ತದೆ.[೧೧]

ಕಾವ್ಯವೆಂದರೆ ಓರೆಯಾಗಿ ತೆರೆದಿಟ್ಟ ಬಾಗಿಲು, ಈ ಬಾಗಿಲಿನ ಮೂಲಕ ಬದುಕು ಅದರ ಅಭಿವ್ಯಕ್ತಿಯ ನೆಲೆಯನ್ನು ಗ್ರಹಿಸುತ್ತದೆ. ಅದರ ಮೂಲಕ ಕವಿ ತನ್ನ ಆಶಯನ್ನು ಹೊರ ಹಾಕುತ್ತಾನೆ, ಕವಿ ಇಲ್ಲಿ ಜಗದ ನೂಲಿಗೆ ಬಿಗಿದ ಇಷ್ಟೆಲ್ಲ ಎಳಗಳು ಇದ್ದಾಗಲು ಆ ಎಲ್ಲಾ ಎಳೆಗಳೂ ಒಂದೇ ಯಾಗಿವೆ. ಅದರ ಬಂಧ ಸುಂದರರ ಚೌಕಟ್ಟಾಗಿದೆ ಎಂದು ಹೇಳಿದಂತಿದೆ, ಕವಿತೆಯ ಶೀರ್ಷಿಕೆಯೇ ಅಖಂಡತೆಯ ಅಶಯ ಬಿತ್ತರಿಸುತ್ತದೆ, 'ಜಗವೊಂದು ನೂಲಿನ ಎಳೆ' ಇಡೀ ಜಗತ್ತು ಒಂದೇ ಬಗೆಯದಾಗಿದೆ ಇಲ್ಲಿ ಬಹು ಸಮುದಾಯ ಸಂಸ್ಕೃತಿ ಇದ್ದರೂ ಅವುಗಳನ್ನು ಏಕೀಕರಿಸುವ ಜೀವಜಗತ್ತು ಮನುಷ್ಯ ಜಗತ್ತು ಒಂದೇ ಆಗಿದೆ ಆದ್ದರಿಂದ ಈ ಜಗತ್ತು ಒಂದೇ ನೂಲಿನ ಎಳೆಯ ಮೇಲೆ ನಿಂತಿದೆ ಎಂಬ ಅಖಂಡತ್ವನ್ನು ಸಾರಿದಂತಿದೆ. ಸಮಕಾಲೀನ ಕಾವ್ಯ ವರ್ತಮಾನದ ವರ್ತುಲದೊಳಗೆ ಭವಿಷ್ಯದ ಕುರಿತಾಗಿ ತುಂಬಾ ಭರವಸೆಯನ್ನು ಇಟ್ಟುಕೊಂಡಾಗ ಕಾವ್ಯ ಬೆಳೆಯುತ್ತಿದೆ, ವಿಕಾಸವಾದಿಯಾಗದೆ ಸ್ಫೂರ್ತಿಯನ್ನು ಪಡೆಯುತ್ತ, ತುಂಬಾತ್ತ ಮುಂದೊಂದು ಹೊಂಬೆಳಕು ಇದೇ ಇದೆ ಅದಕ್ಕಾಗಿ ನಮ್ಮ ಪಯಣ ಒಟ್ಟಾಗಿ ಸಾಗಬೇಕಿದೆ ಆ ಬೆಳಕಿನ ವೇಗನ್ನು ಸರ್ವಸಮಾನವಾಗಿ ಅನುಭವಿಸುವ ಭರವಸೆ ಕನಸನ್ನು ಸಮಕಾಲೀನ ಕಾವ್ಯ ಹೊಂದಿದೆ. ಅದರ ಅನುಭವಗಳನ್ನು ಸರಾಗವಾಗಿ ರೂಪಕವಾಗಿಸುವ ಕಾವ್ಯ ಮನೋಧರ್ಮ ಸಮಕಾಲೀನ ದಕ್ಕಿದ ಮರುವಿಶೇಷ ಸಂಗತಿ. ನಿಗೂಢವನ್ನು ಬಗೆಯುವ

ಬೇರಗನ್ನು ಉಳಿಸಿಕೊಂಡೇ ವಾಸ್ತವಕ್ಕೆ ಎದುರಾಗಿ, ಕಂಡ ಕನಸುಗಳಿಗೆ ಪ್ರಜ್ಞಾಪೂರ್ವಕವಾಗಿ ನಿಲುವಿನಿಂದ ಪ್ರತಿಕ್ರಿಯಿಸುವುದು ಸಮಕಾಲೀನ ಕಾವ್ಯದ ಶಕ್ತಿಯಾಗಿದೆ. ಕಾವ್ಯಭಾಷೆ ಮೇಲ್ನೋಟಕ್ಕೆ ಸರಳವಾಗಿ ಕಂಡರು ರೂಪಕ ನಿರ್ಮಾಣದಲ್ಲಿ ಅವು ಸಂಕೀರ್ಣಗೊಳ್ಳುತ್ತಾ ಹೋಗುತ್ತವೆ. ಸಮಾಜ ಕಾವ್ಯ ರಚನೆಯಲ್ಲಿ ಇಂದಿನ ಕಾವ್ಯ ತೊಡಗಿದೆ. ಸರ್ವರನ್ನು ಒಳಗೊಳಗಿರಬೇಕು.

### ೫.೪ ದೈವಕೇಂದ್ರಿಯ ನೆಲೆ

ಧರ್ಮ ದೇವರು ಮತ್ತು ಭಕ್ತರ ಕುರಿತಾಗಿ ಹಲವು ಸೊಗಸಾದ ಕವಿತೆಗಳನ್ನು ನಮ್ಮ ಕನ್ನಡ ಕಾವ್ಯ ಪರಂಪರೆಯಲ್ಲಿ ನೋಡಬಹುದು ಆದರೆ ಇಂದಿನ ಸಮಕಾಲೀನ ಕಾವ್ಯದಲ್ಲಿ ದೇವರೊಂದಿಗೆ ಸಂವಾದ ಮಾಡುತ್ತಿರುವುದು ವಿಷಯವಾಗಿದೆ. ಅಳುವಿಗೆ, ನಗುವಿಗೆ, ಪ್ರೇಯಸಿಯ ಒಲವಿಗೆ, ಏಕಾಂತ ವಿರಹಕ್ಕೆ, ಅರಿವು, ಅಪಮಾನಕ್ಕೆ ಮುಂತಾದ ಅಂಶಗಳಿಗೆ ದೇವರೊಂದಿಗೆ ಮಾತುಕತೆ ನಡೆಸುವುದು ಪ್ರಶ್ನಿಸುವುದು ಧಿಕ್ಕರಿಸುವುದು ಆಪ್ತ ಸಮಾಲೋಚನೆ ನಡೆಸುವುದನ್ನು ಕಾಣಬಹುದಾಗಿದೆ. ದೇವರೆಂದು ಮಾತ್ರಕ್ಕೆ ಗುಡಿ ಗುಂಡಾರದೊಳಗಿರುವ ದೇವರಲ್ಲ. ನೈಸರ್ಗಿಕ ದತ್ತವಾದ ಒಂದು ವಿಶಿಷ್ಟ ಶಕ್ತಿಯೊಂದಿಗೆ ಸಂವಾದ ನಡೆಸುವುದಾಗಿದೆ. ಆಸ್ತಿಕ ನಾಸ್ತಿಕತೆಯ ಪ್ರಶ್ನೆ ಇದಾಗದೆ ನವೋದಯ ಕಾಲದಲ್ಲಿ ಕುವೆಂಪು, ಬೇಂದ್ರೆ ಕಲ್ಪಿಸಿಕೊಳ್ಳುವ ದೈವತ್ವದ ನಿಸರ್ಗದ ಒಳಗಡೆ ದೈವ ನೋಡಿದ ಬಗೆಯನ್ನು ಇಂದಿನ ಸಮಕಾಲೀನ ಕಾವ್ಯದಲ್ಲಿಯೂ ಮುಂದುವರಿಕೆಯಾಗಿದೆ. "ಪ್ರಕೃತಿ ಎನ್ನುವುದು ಬರಿಯ ಗುಡ್ಡ ಬೆಟ್ಟದ ವಿಚಾರವಲ್ಲ, ಬದಲಿಗೆ ಒಂದು ಜೀವನ ಕ್ರಮದ ಸಂಪೂರ್ಣ ಸ್ಥಾನಾಂತರ. ಜನಸಂದಣಿ ತುಂಬಿದ ದೇವಸ್ಥಾನಕ್ಕೆ ಹೋಗಿ ಅಲ್ಲಿ ಕಾಲ ಕಳೆಯುವುದಕ್ಕಿಂತ ಸೂರ್ಯೋದಯ, ಸೂರ್ಯಾಸ್ತದ ದರ್ಶನದಲ್ಲೇ ವಿಶಿಷ್ಟವಾದ ಅನುಭವವಾಗುತ್ತದೆ ಎಂದು ನಂಬಿದ್ದರು."[೨] ಅಂತಹ ನಂಬಿಕೆಯ ಮುಂದುವರಿಕೆಯ ನೆಲೆ ಈ ಸಮಕಾಲೀನ ಕಾವ್ಯದಲ್ಲಿ ವ್ಯಕ್ತಗೊಂಡಿರುವುದು ಕಂಡುಬಂದಿದೆ.

ಸಮಕಾಲೀನ ಸಂದರ್ಭದಲ್ಲಿ ವರ್ತಮಾನದ ಸುಡುವಾಸ್ತವಗಳಿಗೆ, ಅಸಮಾನತೆ, ಜಾತೀಯತೆ, ಒಂಟಿತನ, ಮೌಲ್ಯಗಳ ಅಧಃಪತನ, ಕೋಮುವಾದ, ಭ್ರಷ್ಟಾಚಾರ ಇಂತಹ ಅನೇಕ ಕುಂದು ಕೊರತೆಗಳಿಗೆ ಮನನೊಂದು ದೇವರನ್ನು ಕರೆತರುವ ಹಾಗೂ ಪ್ರಶ್ನಿಸುವುದು ಗಮನಿಸಬಹುದಾಗಿದೆ. ಇಷ್ಟೆಲ್ಲಾ ಸಂಕಟಗಳಿದ್ದರೂ ದೇವರು ಸುಮ್ಮನೆ ಗುಡಿಯಲ್ಲಿ ಕುಳಿತದ್ದನ್ನು ಕಂಡು ಒಮ್ಮೆ ಮನುಷ್ಯನಾಗಿ ಅವತರಿಸಿ ಬಾ ಎಂದು ಹೇಳಿದ್ದಾರೆ. ಅಷ್ಟೇ ಅಲ್ಲ ಮುಗ್ಧ ಹಸು ಗೂಸು ಕಂದಮ್ಮಗಳ ಮೇಲೆ ಅತ್ಯಾಚಾರ ಮಾಡುವಂತಹ ದುರ್ಘಟನೆಯನ್ನು ಕಂಡು ಮೌನವಹಿಸಿದ ದೇವರುಗಳಿಗೆ ಧಿಕ್ಕಾರ ಕೂಗುವ ಧ್ವನಿ ಕಾವ್ಯದಲ್ಲಿದೆ. ಜನಸಾಮಾನ್ಯರು ತಮಗಿಲ್ಲದಿದ್ದರೂ ಹಬ್ಬ-ಹರಿದಿನಗಳನ್ನು ಪೂಜೆ ಪುನಸ್ಕಾರವನ್ನು ಮಾಡುತ್ತಿದ್ದಾರೆ ಆದರೆ ಕಲ್ಲಾದ ದೇವರು ಸಾಮಾನ್ಯ ಮನುಷ್ಯರೆಂದು ಸ್ಪಂದಿಸದೆ ಇರುವ ದುಸ್ಥಿತಿಯನ್ನು ಕಂಡು ದೇವರೊಂದಿಗೆ ಸಂವಾದ ನಡೆಸುವುದು ಕಾಣಬಹುದಾಗಿದೆ. ಬುದ್ಧ, ಬಸವ, ಅಂಬೇಡ್ಕರರ ಆಶಯಗಳನ್ನು

ಚಿಂತನೆಗಳನ್ನು ಜೀವಂತವಾಗಿಸಿಕೊಂಡು ವೈಚಾರಿಕ ನೆಲೆಯಲ್ಲಿ ದೈವ ಕೇಂದ್ರಿತ ಆಶಯ ತನ್ನ ಸಮಕಾಲೀನ ಕಾವ್ಯ ಹೊಂದಿದೆ. ಅಷ್ಟೇ ಅಲ್ಲದೆ ಚರಿತ್ರೆಕಾರರ ಪಾತ್ರಗಳನ್ನು ಪ್ರಶ್ನಿಸುವ ಹಾಗೂ ಅವರು ಸಾಮಿತತೆಯನ್ನು ಸಹ ಅರಿಯುವ ಪ್ರಯತ್ನ ಇಲ್ಲಿ ನಡೆದಿದೆ.

ಹಗಲಿನಲಿನಲ್ಲೇ ಕಣ್ಣೀಕೀಳುವ
ಹಿಮದ ಹೆಜ್ಜೆಗಳಡಿ ಸಿಲುಕಿ
ಇರುವೆಗಳೂ ಕೂಗುತ್ತವೆ;
ದೇವರೇ ನಮಗೆ
ನೆಲದಾಳದಲ್ಲೇ ಬಾಳುವುದು ಕಲಿಸು.....

ದಿಕ್ಕಿರದ ತೊಡೆ ಕಕ್ಕಿದ ಕೂಸು
ಕಂಗೆಟ್ಟು ಕೂಗುತ್ತಿವೆ;
ದೇವರೇ ನಮಗೆ
ತೂತು ಕಾಸಿದ್ದರೆ ತೇದು ಕುಡಿಸು[೧೨]

ಮನುಷ್ಯ ಅಸಹಾಯಕತೆಯಲ್ಲಿ ಬೇಕೆಂದಕ್ಕೆ ಶರಣಾಗುತ್ತಾನೆ ಅದು ದೇವರು, ದೈವ ಮತ್ತೊಂದಾಗಿರಬಹುದು. ಸಮಾನತೆಯ ಸಮಾಜದಲ್ಲಿ ಒಂದು ಪ್ರಬಲ ಸಮುದಾಯ ತನ್ನ ಪ್ರಭುತ್ವದಲ್ಲಿ ಅನೇಕ ದಮನಿತ ಸಮುದಾಯವನ್ನು ಶೋಷಣೆ ಮಾಡುತ್ತಿರುವ ವಾಸ್ತವದಲ್ಲಿ ಶೋಷಣೆಗೆ ಒಳಪಟ್ಟಿರುವ ಜನಸಮುದಾಯದ ಕೂಗು ಆಕ್ರಂದನ. ದೇವರಿಗೆ ಮೊರೆ ಹೋಗಿ ಬೇಡುವಂತಿದೆ. ಹಸಿವು, ಬಡತನ, ಅಪಮಾನ, ಹಿಂಸೆ ತಾಳಲಾರದೆ ದೇವರೆ ನಮಗ್ಯಾಕೆ ಈ ಶಿಕ್ಷೆ, ನಮ್ಮನ್ನು ನೆಮ್ಮದಿಯಿಂದ ಬದಕಲು ಅವಕಾಶ ಕಲ್ಪಿಸು ಎಂದು ಮೊರೆ ಇಡುವ ಚಿತ್ರಣವನ್ನು ಸಮಕಾಲೀನ ಕಾವ್ಯ ಚಿತ್ರಿಸಿದೆ. ಜೊತೆಗೆ ಆ ಕೂಗಿಗೆ ದನಿಗೂಡಿದೆ. ಬಡವರ ಗುಡಿಸಲುಗಳಿಗೆ ಬೆಂಕಿ ಹಚ್ಚಲಾಗಿದೆ. ದಲಿತರನ್ನು ಜೀವಂತ ಸುಡಲಾಗಿದೆ. ಅಲ್ಪಸಂಖ್ಯಾತರಿಗೆ ಅನುಮಾನದ ದೃಷ್ಟಿ ಬೀರಿದೆ. ಸಣ್ಣಪುಟ್ಟ ಬಾಲಕಿಯರ ಮೇಲೆ ಅತ್ಯಾಚಾರ ಸಾವಿರಾರು ಸಮಸ್ಯೆಗಳನ್ನು ಅನುಭವಿಸಿದವಗಳಿಗೂ ಈಗ ಒಂದೇ ಆಗದೆ ದೇವರೆ ನನಗೂ ನೆಮ್ಮದಿಯ ಬದುಕನ್ನು ಕಲ್ಪಿಸು ಎಂದು ಇದು ಒಂದು ರೀತಿಯ ಸಂವಾದದ ರೂಪದಲ್ಲಿದೆ ಕವಿಗಳು ತಮ್ಮ ಕಾವ್ಯದಲ್ಲಿ ಇಂತಹ ಮನಸ್ಥಿತಿಗೆ ಕಾರಣ ಯಾರು? ಇದಕ್ಕೆ ಪರಿಹಾರ ಏನು? ಎನ್ನುವ ಸಂವಾದ ರೂಪದಲ್ಲಿ ಕಾವ್ಯದಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಕೂಕ್ಕೆಯಲ್ಲಿ ಕೂತ ಮರಿ ಕೋಳಿ ಕೂಗುತ್ತಿದೆ. ಆ ದೇವರೇ ನಮಗೆ ಆಕಾಶಕ್ಕೆ ಹಾರುವುದು ಕಲಿಸು ಎಂದು. ಈ ಸಮಕಾಲೀನ ಹಿಂಸಾತ್ಮಕ ಬೆಳವಣಿಗೆಗೆ ದೊಡ್ಡ ರೂಪಕವಾಗಿದೆ. ಈ ನೆಲದಲ್ಲಿ ನನಗೆ ಬದುಕಲು ಅಸಾಧ್ಯವಾಗಿದೆ ನನಗೆ ಬಿಡುಗಡೆಬೇಕು ಇಲ್ಲಿಂದ ಮೇಲೆ ಹಾರುವುದನ್ನು ಕಲಿಸು ಎಂದು ಕೇಳಿದಂತಿದೆ. ನಿಚ್ಚಲ ಸ್ಥಿತಿಯಲ್ಲಿರುವ ಕಲ್ಪನೆಯನ್ನು ಕಂಡರು ಕಂಡರು ಶಿಲೆಯಾಗಿಸುವ ನೆಪದಲ್ಲಿ ಉಳಿಪೆಟ್ಟು

ತಾಳಲಾರೆ ನನಗೆ ಚಲಿಸುವುದು ಕಲಿಸು ಎಂದು ಬೇಡುತ್ತದೆ. ನಮಗೆ ಇಲ್ಲ ಸಲ್ಲದ ಭ್ರಮಾತ್ಮಾಕ ಚಿಂತನೆಗಳ ನೆಪದಲ್ಲಿ, ಪಾಪ ಪುಣ್ಯಗಳ ಕಡ್ಡಿಗಳು ಹೇಳಿ ಮುಕ್ತಿಯ ಮಾರ್ಗ ತೋರುತ್ತೇವೆ ಎಂದು ನೀಡುವ ಹಿಂಸೆ ಸಹಿಸುವುದು ಕರ್ಮದ ಫಲ ಎಂದು ನಂಬಿಸಿ ಹಿಂಸಿಸುತ್ತಿರುವುದನ್ನು ಕುರಿತು ಕವಿ ಅದ್ಭುತವಾದ ರೂಪದಲ್ಲಿ ಹಿಡಿದಿಟ್ಟಿದ್ದಾರೆ. ಶಿಲೆಯಾಗುವ ನೆಪದಲ್ಲಿ ಉಳಿಪೆಟ್ಟು ತಾಳಲಾರದೆ ಮುಕ್ತಿಯ ಹೆಸರಲ್ಲಿ ಹಿಂಸೆಯ ಸಹಿಸಲಾರೇ ಅದಕ್ಕಾಗಿ ದೇವರೇ ನಮಗೆ ಚಲಿಸುವುದನ್ನು ಕಲಿಸು ಎಂದು ಬೇಡುವುದನ್ನು ಕಾಣಬಹುದು. ನಿರ್ಜೀವಿಗಳ ಸ್ಥಿತಿಯೇ ಹೀಗಾದರೆ ಜೀವಂತ ದೇಹಗಳ ಗತಿ ಇನ್ನೆಷ್ಟೋ? ಓ ದೇವರೆ ಹಗಲಲ್ಲೆ ಕಣ್ಣು ಕೀಳುವ ಹಿಮದ ಹೆಜ್ಜೆಗಳಡಿ ಸಿಲುಕಿದ ಇರುವೆಗಳೂ ಸಹ ಕೂಗುತ್ತಿವೆ. ದೇವರೆ ತಮಗೆ ನಲದಾಳದಲ್ಲೆ ಬದುಕುವುದನ್ನು ಕಲಿಸು, ಒಂದು ಹೊಸ ಬದುಕಿನ ಕಲೆಯನ್ನು ಪ್ರಾರ್ಥಿಸುವುದು ಕಾವ್ಯದಲ್ಲಿ ಒಡ ಮೂಡಿದೆ. ಕೊನೆಗೆ ಇಂತಹ ಸಂಕಟಗಳ ಮಧ್ಯವು ತನುಮನ ದೇವರ ಧ್ಯಾನದಲ್ಲಿ ಹದಗೊಳ್ಳುವಷ್ಟು ಕೆಟ್ಟಿದ್ದರೆ ಅದಕ್ಕೊಂದು ಧಿಕ್ಕಾರವಿರಲಿ ಎಂದಿದ್ದಾರೆ. ದೇವರನ್ನು ಬೇರೊಂದು ಬಗೆಯಲ್ಲಿ ಅಭಿವ್ಯಕ್ತಿಸಿದ ಕವಿ ಬಸವರಾಜ ಹೃತ್ಸಾಕ್ಷಿ ಅವರು ದೇವರ ಹಾಡು ಎಂಬ ಕವಿತೆಯಲ್ಲಿ ಅಭಿವ್ಯಕ್ತಿಸಿರುವುದು ಈ ರೀತಿಯಾಗಿದೆ.

ಮನುಷ್ಯನಾದರೂ ಆಗಿದ್ದರೆ
ಮಾನ ಕಳೆಯಲು ಬೀದಿಗೆ ಎಳೆದು
ಬಾಯಲ್ಲಿ ಮಲದ ಮುದ್ದ ತುರುಕುವಾಗ
ಗೋಡೆಗೆ ನಿಲ್ಲಿಸಿ ಗುಂಡು ಹಾರಿಸುವಾಗ
ಶಿಲುಬೆಗೆ ಮೇಲೆ ಮಲಗಿಸಿ ಮೊಲೆ ಝುಡಿಯುವಾಗ
ಎದ್ದು ಬರಬಹುದಿತ್ತು. ದೇಶಾಂತರ

ಕಣೀರು ಮಾರುವ ದಲಾಲಿಯಾಗುವ ಬದಲು
ಮನುಷ್ಯರೇ ತುಂಬಿದ ಈ ಭೂಮಿಯಲಿ
ಒಂದು ಹಿಡಿ ಮನುಷ್ಯತ್ವ ಕಡೆ ಪಡೆಯಬಹುದಿತ್ತು
ದೇವರಾಗಿ ಬದುಕುವ ಪಾಡು ಯಾರಿಗೆ ಬೇಕಿತ್ತು?[೧೪]

ಕವಿ ಇಲ್ಲಿ ಮನುಷ್ಯರಾದ ಮೇಲೆ ದೇವರಾಗುವುದು ಯಾರಿಗೆ ಬೇಕು ಎಂದು ಪ್ರಶ್ನಿಸಿದ್ದಾರೆ. ದೇವರಾದರೆ ಅದಕ್ಕೆ ಚಲನ ಸ್ಥಿತಿ ಇಲ್ಲ ಎಂದು ವಾದಿಸುತ್ತ ಮನುಷ್ಯರಾಗಿದ್ದರೆ ಏನೆಲ್ಲ ಆಗುತ್ತಿತ್ತು ಎಂದು ಹೇಳುತ್ತಾ ಪಾರಂಪರಾಗತವಾದ ಶೋಷಣೆಯನ್ನು ವಿಡಂಬನಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ. ಅಷ್ಟೇ ಅಲ್ಲದೆ ನದಿಯಾಗಿದ್ದರೆ ಮೇರೆ ಮೀರಿ ಹರಿಯಬಹುದಿತ್ತು ಹಳ್ಳಾಗಿ ಛಿದ್ರ ಛಿದ್ರವಾಗಿ ನಿಲ್ಲಿಸಬಹುದಿತ್ತು ನೆಲದೊಳಗೆ ಹಿಂಗಿ ಮತ್ತೆ ಆಕಾಶದೊಳಗೆ ಸೇರಿ ಸುರಿಯಬಹುದಿತ್ತು ಆದರೆ ಈ ದೇವರಾದರೆ ಗುಡಿಯೊಳಗೆ, ಚರ್ಚುಗಳಿಗೆ ಗುಲಾಮನಾಗುವ ಕೊರತೆ ಯಾರಿಗೆ ಬೇಕು ಎಂದು ದೈತ್ಯವನ್ನು ಭಿನ್ನತೆಯ ನೆಲೆಯಲ್ಲಿ ಪ್ರಶ್ನಿಸಿದ್ದಾರೆ ಅಷ್ಟೇ

ಅಲ್ಲದೆ ಮರವಾಗಿದ್ದರೆ ಏನೆಲ್ಲ ಉಪಯೋಗಗಳಿದ್ದವು ನೆರಳು ನೀಡಬಹುದಿತ್ತು, ಗಾಳಿ ನೀಡಬಹುದಿತ್ತು, ಕಡಿಯಲು ಬಂದವನ ಬೆವರನ್ನು ಗಾಳಿ ಬೀಸಿ ಹೊರೆಸಬಹುದಿತ್ತು. ಕಾಡು ಕಡಿದಂತೆಲ್ಲಾ ಮತ್ತೆ ಚಿಗುರಬಹುದಿತ್ತು. ಮುಡಿಯುವವರ ಮುಡಿಗೆ ಹೂವಾಗಬಹುದಿತ್ತು ಕಾಯಿ ಹಣ್ಣು ನೀಡಬಹುದಿತ್ತು ಆದರೆ ದೇವರಾದರೆ? ಎಂದು ಪ್ರಶ್ನಿಸಿ ದೇವರ ಮನುಷ್ಯನಿಗೆ ನೋವಿಗೆ ಮಿಡಿಯಲಾರ, ನಮ್ಮ ನೋವಿಗೆ ನಾವೇ ಮಿಡಿಯಬೇಕು ಮನುಷ್ಯರ ನೋವಿಗೆ ಮನುಷ್ಯನೇ ಬೇಕು ಎಂದು ದೇವರನ್ನು ಧಿಕ್ಕರಿಸಿ ಸಮರ್ಥಿಸಿ ಬಗ್ಗೆ ವಿಶಿಷ್ಟವಾಗಿದೆ. ಕೊನೆಗೆ ತಾನೂ ಸತ್ತಮೇಲು ತನ್ನ ಗೋರಿಯ ಮೇಲೆ ಶಿಲುಬೆ ಇಡುವ ಬದಲು ತಟ್ಟೆಯನ್ನು ಇಡು ಎಂದು ಹೇಳುವವರು ಸಮಕಾಲೀನ ಕಾವ್ಯದ ಮೂಲ ತಾತ್ವಿಕತೆ, ಆಶಯವನ್ನು ಹೇಳಿದಂತಿದೆ. ದೇವರಾಗುವುದು ಮುಖ್ಯವಲ್ಲ ಹಸಿವನ್ನು ನಿಗಿಸುವ ತುತ್ತಾಗಬೇಕು. ನೋವಿಗೆ ಮಿಡಿಯುವ ಮನುಷ್ಯನಾಗಬೇಕು ಎಂಬ ಆಶಯ ವ್ಯಕ್ತಪಡಿಸಿರುವುದು ಕಾಣಬಹುದು. ದೇವರಿಂದ ಮಾಡಲಾಗದ ಕೆಲಸಗಳು ಮನುಷ್ಯನಾದವನ್ನು ಮಾಡುತ್ತಿದ್ದಾನೆ. ಮನುಷ್ಯನಿಗಿರುವ ಮಮತೆಯೂ ದೇವರ ಕಳೆದುಕೊಂಡಿದ್ದಾನೆ, ಹಾಗಾಗಿ ದೇವರ ಹಾಡು ಪದ್ಯದಲ್ಲಿ ದೇವರ ಮನುಷ್ಯನ ಸ್ಥಾನ ತುಂಬಲು ಅಸಾಧ್ಯವೆಂದು ನಿಲುವಿಗೆ ಬಂದಿರುವುದು ಕಂಡುಬಂದಿದೆ. ಇದೊಂದು ಭಿನ್ನಾ ದೃಷ್ಟಿಕೋನವಾಗಿದೆ ಇದರಂತೆ ಪೀರಬಾಷರವರು ದೇವರು ಮನುಷ್ಯರಾದ ದಿನ ಎಂಬ ಪ್ರಶ್ನೆವು ಸಹ ಇದನ್ನು ಧ್ವನಿಸುತ್ತಾರೆ. ಆದರಂತೆ ಭಾನುಮುಸ್ತಕರ ಒಮ್ಮೆ ಹೆಣ್ಣಾಗು ಪ್ರಭುವೆ ಎಂಬ ಕಥೆಯು ಸಹ ದೇವರಿಗೆ ಸವಾಲು ಹಾಕುವ ಬಗೆ ವಿಶಿಷ್ಟತೆಯಿಂದ ಕೂಡಿದೆ.

ಸಾಮಾಜಿಕ ಜೀವನದಲ್ಲಿ ದೇವರ ಬಗ್ಗೆ ಕಲ್ಪಿತ ನೆಲೆಗಳು ವಿಸ್ತರಿಸುತ್ತಿವೆ. ಇಂಥ ಮೂಢ ನೆಲೆಗಳನ್ನು ಬಳಸಿಕೊಂಡು ಮನುಷ್ಯ ತನ್ನ ಮನಸ್ಥಿತಿ ಮರೆತು ಅಮಾಯಕ ಮನಸ್ಸುಗಳನ್ನು ದಾರಿ ತಪ್ಪಿಸುವ ಕೆಲಸ ಮಾಡುತ್ತಿದ್ದಾನೆ. ದೇವರಾಗಲು ಹೊರಟವರಿಗೆ ಸಮಕಾಲೀನ ಕಾವ್ಯ ತಕ್ಕ ಉತ್ತರ ನೀಡಿದಂತಿದೆ. ದೇವರಾಗುವುದು ಬೇಡ ಮನುಷ್ಯ ಮನಷ್ಯತ್ವ ತುಂಬದ ಮನುಷ್ಯನಾದರೆ ಸಾಕು. ದೇವರೆ ಮನುಷ್ಯನಾಗಬೇಕೆಂಬ ಆಶಯ ಹುಟ್ಟುತ್ತದೆ ಎಂದು ಸಾರಿದಂತಿದೆ. ಪ್ರಕೃತಿಯಲ್ಲಿನ ಪ್ರತಿಯೊಂದು ಜೀವಿಯು ದೇವರನ್ನು ಬಯಸಿರುವ ಬಯಕೆಯಲ್ಲಿ ನೈಜತೆಯನ್ನು ಮರೆತಿರುವುದಕ್ಕೆ ಕಾವ್ಯ ವಿಷಾದತೆಯನ್ನು ವ್ಯಕ್ತಪಡಿಸುತ್ತದೆ. ಕಾವ್ಯದ ಹೊಸ ಹಾದಿಗಳು ಸೃಷ್ಟಿಯಾದಂತೆ ದೇವರನ್ನು ಅರಿಯುವ ಹೊಸ ಹೊಸ ನೆಲೆಗಳನ್ನು ಕಾವ್ಯದಲ್ಲಿ ಸೃಷ್ಟಿಸಿದೆ.

ಸಹಜ ಶೈಲಿಯ ಮೂಲಕ ಅನುಭವವನ್ನು ನೋಡುವ ಕ್ರಮ ಅಪರೂಪವಾಗಿದೆ. ಪ್ರೇಮ ಕಾಮಗಳ ವಿಷಯದೊಂದಿಗೆ ಸಾಮಾಜಿಕ ಎಚ್ಚರಿಕೆಯ ವಿಷಯಗಳನ್ನು ಅಭಿವ್ಯಕ್ತಗೊಂಡಿದೆ. ಹಾಗೇ ದೇವರ ಕುರಿತಾದ ವಿಚಾರ ಚಿಂತನೆಗಳು ಅನುಭವಗಳು ಸಹ ವಿಭಿನ್ನ ದೃಷ್ಟಿಕೋನ ತಾಳಿರುವುದು ಸಹ ಗೋಚರಗೊಂಡಿದೆ. ದೇವರನ್ನು ಪೂಜಿಸುವ ಕ್ರಮ, ಬೇಡುವ ಕ್ರಮ ಬದಲಾದ ರೀತಿಯನ್ನು ಸೊಗಸಾಗಿ ಚಿತ್ರಿತಗೊಂಡಿದೆ. ದೇವರನ್ನು ಧರೆಗೆ ಕರೆತಂದು ಸಂವಾದ

ಮಾಡುವ ರೀತಿಯಲ್ಲಿ ನಾಟಕೀಯ ಸ್ವರೂಪ ಕಾವ್ಯದಲ್ಲಿ ಸಾಗಿದೆ. ಕೆಲ ಕವಿತೆಗಳು ಗೇಯತೆಯನ್ನು ಒಳಗೊಂಡಿದ್ದರೂ ಕೆಲವು ಗದ್ಯದ ಸಾಲಿನಂತಿದ್ದರೂ ಕಾವ್ಯ ಲಯ ಹೊಂದಿದೆ. ಗ್ರಾಮೀಣ ಭಾಷೆಯ ಸೊಗಡು, ನಾಟಕೀಯ, ಅಮೂರ್ತ ಅಂಚಿನ ಸ್ವರೂಪ, ಮೂರ್ತ ರೂಪಕ ಬಳಸಿ ಒಂದು ಅಖಂಡ ಪ್ರತಿಮೆಯನ್ನು ಸೃಷ್ಟಿಸುವ ಕಲೆಗಾರಿಕೆ ಸಮಕಾಲೀನ ಕಾವ್ಯಕ್ಕೆ ಇದೆ. ಕಾಲವನ್ನು ಮೀರಿಯೂ ಬೆಳೆಯುವ ಶಕ್ತಿ ಸಮಕಾಲೀನ ಕಾವ್ಯದ ಹಲವು ಕವಿತೆಗಳಿಗೆ ಇದೆ. ಧೈರ್ಯ, ಭಾಷೆ ಸೂಕ್ಷ್ಮತೆಯಿಂದಾಗಿ ಹೊಸದೊಂದು ಸೌಂದರ್ಯ ಪ್ರಜ್ಞೆಯೂ, ಮೈತಾಳದೆ ನಾಗಣ್ಣ ಕಿಲಾರಿಯವರ ಕವಿತೆ ಐಕ್ಯ ಕವಿತೆ ಗಮನಿಸಬಹುದಾಗಿದೆ. ಎನ್ಕೆ ಹನುಮಂತಯ್ಯ ಅವರ 'ಜನವರಿಯರ ನಡರಾತ್ರಿ', ಅಂಕುರ ಬೆಟಗೇರಿ ಅವರ 'ಬೇಸಿಗೆಯ ತಿಂಗಳುಗಳ ಕಾವ್ಯ ಕಡೆಯ ರಚಿಸಿದ ವಸಂತಕ್ಕೊಂದು ಹುಲಿ 'ಕವಿತೆಗಳು ಹೊಸ ಆಶಯವನ್ನು ಹುಟ್ಟಿಸಿವೆ. ಹೊಸದಾದ ಸೌಂದರ್ಯ ಪ್ರಜ್ಞೆ ಮೂಡಿದೆ. ಜೀವ ಹಿಂಡುವ ಸಂಬಂಧಗಳನ್ನೆದುರಿಸಲು ನಮಗೆ ಬೇಕಾದ ಮಾನಸಿಕ ಸಿದ್ಧತೆ ಎಂತಹದ್ದು ಎಂಬುದನ್ನು ಕಾವ್ಯ ಹೇಳಿದಂತಿದೆ. ದೈವಿಕ ನೆಲೆಯಲ್ಲಿ, ದೇವರ ಹೆಸರಲ್ಲಿ ಮತ ಮಾನ್ಯಗಳು ಸಾಮಾನ್ಯ ಜನರನ್ನು ಹೇಗೆ ತನ್ನ ಇಚ್ಛಾಶಕ್ತಿಯಿಂದ ನಡೆಸುತ್ತದೆ. ಅದಕ್ಕೆ ಪ್ರತಿರೂಪವಾಗಿ ಅದರಿಂದ ಬಿಡುಗಡೆ ಬಯಸಲು ನಿಜ ಸ್ಥಿತಿಯನ್ನು ವೈಚಾರಿಕ ನೆಲೆಯಲ್ಲಿ ದೇವರನ್ನು ಚಿತ್ರಿಸಿದ ಪರಿ ಸೊಗಸಾಗಿದೆ. ಹಾಗೇ ದೇವರಿಗೆ ಸವಾಲು ಹಾಕಿ ಮನುಷ್ಯರಾಗಲು ನೀಡಿದ ಬಗೆ ಹೊಸತನಕ್ಕೆ ಸಾಕ್ಷಿಯಾಗಿದೆ.

ಸಮಕಾಲೀನ ಸಂದರ್ಭದಲ್ಲಿ ವ್ಯಾವಹಾರಿಕ ಸಂಭಾಷಣೆ, ವಿಶಿಷ್ಟತೆಯಿಂದ ಕೂಡಿದೆ ಅಂತಹ ಸಂಭಾಷಣೆಯಿಂದಲೆ ದೇವರನ್ನು ಕರೆಯುವ ಹಾಗೂ ದೇವರಿಗೆ ಸವಾಲೊಡ್ಡುವ ಬೇಡಿಕೆ ಸಲ್ಲಿಸುವ ಪರಿ ವಿಶಿಷ್ಟವಾಗಿದೆ. ಇಂದಿನ ದಿನಮಾನದಲ್ಲಿ ಯುವ ಪಡೆ ಉದ್ಯೋಗಕ್ಕಾಗಿ ಅರ್ಜಿಸಲ್ಲಿಸುವ ವ್ಯವಸ್ಥೆ ವಸಾಹತು ಶಾಹಿ ಶಿಕ್ಷಣದ ನೆರಳಾಗಿದೆ. ಇಂತಹ ನೆರಳನ್ನು ದೇವರೊಂದಿಗೆ ಸಂಬಂಧ ಕಲ್ಪಿಸಿ ಕಾವ್ಯ ಅಭಿವ್ಯಕ್ತಿಸಿರುವುದು ವಿಶಿಷ್ಟವಾಗಿದೆ. ಕಾರ್ಯಾಲಯ ಇನ್ನಿತರ ಕೆಲಸಗಳಿಗೆ ಅರ್ಜಿ ಸಾಗಿಸುವಂತೆ ಕವಿ 'ಲಕ್ಕೂರ ಆನಂದ' ಅವರು ದೇವರಿಗೊಂದು ಅರ್ಜಿ ಬರೆದಿದ್ದಾರೆ. ಇವರ ತಮ್ಮ ಕಾವ್ಯದಲ್ಲಿ ದೇವರಿಗೊಂದು ಆರ್ಜಿ ಯಾವ ಬಗೆಯದ್ದಾಗಿದೆ ಎಂದು ಅವರ ಕಾವ್ಯದ ಸಾಲುಗಳನ್ನು ಗಮನಿಸುವುದಾದರೆ;

ನನ್ನನ್ನೊಮ್ಮೆ ಕ್ಷಮಿಸು ಬಿಡು ದೇವರೆ
ಧರೆ ಮೇಲೆ ಉರಿಪಾದ ಉರಿನಡೆದಂತೆಲ್ಲಾ
ಯಾರೊ ನನ್ನ ತಲೆ ಮೇಲೂ ನಡೆದಂತಾಗುತ್ತಿದೆ
ಜಗದ ಆಗಲದ ನಡುವಿನಿಂದ ಯಾರೇ ಕರೆದರು
ಬಂದೂಕು ಬಾಂಬ್ ಎಂತಲೆ ಕೇಳಿಸುತ್ತಿವೆ ನನಗೆ
ಸುಮ್ಮನಿರಲಾರದೆ ಗುಲಾಬಿಗೆ ಮುತ್ತಿಡೋಣವೆಂದರೆ
ಎಚ್ಚೆತ್ತ ಗುಲಾಬಿ ಯಾವ ಕುಲ
ಯಾವ ಮತ? ಎಂದು ಪ್ರಶ್ನೆ ಕೇಳುತ್ತ ದಿಟ್ಟಿಸಿ ನೋಡುತ್ತಿದೆ.[೧೫]

ಸಮಕಾಲೀನ ಸಂದರ್ಭದಲ್ಲಿ ಪ್ರೀತಿ ಪ್ರೇಮಗಳೆಲ್ಲವೂ ಜಾತಿಯ ಸಂಕೋಲೆಯಲ್ಲಿ ಕಮರುತ್ತಿವೆ. ಅವು ಇನ್ನು ಜಾತಿಯಿಂದ ಹೊರಬರಲಾರೆ ಹಲವಾರು ಪ್ರಶ್ನೆಗಳನ್ನು ಕೇಳುತ್ತವೆ ಹಾಗೆ ಭಯದಿಂದ ನಲುಗುತ್ತೀವೆ ಎಂದು ದೇವರಿಗೆ ಮೊರೆ ಹೋದಂತಿದೆ ಇದೆಲ್ಲವನ್ನು ನೋಡಿ ಅಸಹಾಯಕ ಸ್ಥಿತಿಯಲ್ಲಿ ದೇವರಿಗೆ ಕವಿ ಅರ್ಜಿ ಬರೆದಿದ್ದಾನೆ. ನಮ್ಮನ್ನು ಮನುಷ್ಯರನ್ನಾಗಿ ಪರಿವರ್ತಿಸು ಈ ಮೃಗತ್ವರಿಂದ ಬಿಡುಗಡೆಗೊಳಿಸು ಎಂದು ಹಾಗೇ ಈ ಭೂಮಿಯ ಮೇಲೆ ತುಂಬಿರುವ ಉರಿ ಬೆಂಕಿಯಂತಹ ಅಸಮಾನತೆ, ಜಾತೀಯತೆ ಇಡೀ ಜಗತ್ತಿನ ತುಂಬೆಲ್ಲ ತುಂಬಿದೆ ಅಷ್ಟೇ ಅಲ್ಲದೆ ಜೀವನ ಹರಡುವ ದುರ್ಘಟನೆಗಳ ಬಾಂಬುಗಳ ಆಕ್ರಮಣದ ಭಯದ ವಾತಾವರಣ ಸೃಷ್ಟಿಯಾಗಿದೆ. ಇದಕ್ಕೆ ಪರಿಹಾರ ರೂಪ ಕಲ್ಪಿಸಲು ಕವಿ ದೇವರಿಗೆ ಅರ್ಜಿ ಬರೆದಿದ್ದಾನೆ ಇದೊಂದು ವಿಡಂಬನಾತ್ಮಕ ಕಲೆಯಾಗಿದೆ. ಮನುಷ್ಯ ಮನುಷ್ಯರ ಮಧ್ಯ ಪ್ರೀತಿ ಹುಟ್ಟಿದರೂ ಅಂತ್ಯದಲ್ಲಿ ಜಾತಿ, ಕುಲ, ಬಂದು ನೂರಾರು ಪ್ರಶ್ನೆ ಕೇಳಿ ದಿಟ್ಟಿಸಿ ನೋಡಿ ತನ್ನ ವೈದಿಕ ನೆಲೆ, ಕೋಮುವಾದ, ಮಲೇಯವಾದ ಹಿಡಿತವನ್ನು ಸಾಧಿಸುವಾಗ ಇದಕ್ಕೆಲ್ಲಾ ನೊಂದ ಕವಿ ಪವಿತ್ರಗೊಳಿಸಲು ಎಂದು ಕರೆದಿದ್ದಾರೆ ಇಲ್ಲಿ ಪಾವಿತ್ರವೆಂದರೆ ಈ ಮಾನವೀಯ ಮೌಲ್ಯಗಳನ್ನು ದೂರಮಾಡಿ ಜೀವಪರ ಮೌಲ್ಯ ತುಂಬಿ ಪವಿತ್ರಗೊಳಿಸು ಬಾ ಎಂದು ಕರೆದಿದ್ದಾನೆ.

ಇನ್ನೊಂದು ಬಗೆಯಲ್ಲಿ ವೀರಣ್ಣ ಮಡಿವಾಳರ ದೈವಕೇಂದ್ರಿತ ನೆಲೆ ವಿಶಿಷ್ಟವಾಗಿದೆ ತನ್ನ ಕುಲದೇವರನ್ನು ಮಾಚದೇವನ ಕಲಿದೇವರ ದೇವನನ್ನು ಕೊರಳ ಪಟ್ಟಿ ಹಿಡಿದು ಕೇಳುವ ಪ್ರಳಯ ಕಾಲವಿದು ಎಂದಿದ್ದಾನೆ. ವರ್ತಮಾನದ ಪರಿಸ್ಥಿತಿ ದೇವರಿಗೆ ಪೂಜೆ ಪುನಸ್ಕಾರ, ಹೂ ಹಣ್ಣು, ಕಾಯಿ, ಏಡೆ ಮಾಡುವರಲ್ಲಿ ಇಷ್ಟವಿಲ್ಲ ಜೀವ ಹರಡುವ ಕಳ್ಳು ಕತ್ತರಿಸುವ ಕ್ರೂರತೆ ಕಂಡರೂ, ಏನನ್ನೂ ಮಾಡದೆ ಸುಮ್ಮನಿರುವ ದೇವರನ್ನು ಕೊರಳಪಟ್ಟಿ ಹಿಡಿದು ಕೇಳುವ ಕಾಲವಿದು ಎಂದು ವಿಶಿಷ್ಟ ರೀತಿಯಲ್ಲಿ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

### ೫.೫ ಕಾವ್ಯದ ಇತರ ಪ್ರಕಾರಗಳು

ಕಾವ್ಯ ಆನಂದವನ್ನು ನೀಡುವುದರ ಜೊತೆಗೆ ದಾರ್ಶನಿಕತೆಯನ್ನು ಬದುಕಿನ ದಾರಿಗಳನ್ನು ಮೌಲ್ಯಗಳನ್ನು ಸಹ ನೀಡುತ್ತದೆ. ಕಾವ್ಯಕ್ಕೆ ಇರುವ ಇನ್ನೊಂದು ಆಕರ್ಷಕ ಶಕ್ತಿ ಎಂದರೆ, ಲಯ. ಈ ಲಯ ಕಾವ್ಯದ ಬಗ್ಗೆ ಹೆಚ್ಚಿನ ಒಲವನ್ನು ಉಂಟು ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇಂತಹ ಲಯ ಗಜಲ್‌ನಲ್ಲಿ ಸಹ ಕಾಣಬಹುದು. ಕಾವ್ಯದ ಕೊಂಬೆಗಳಿಂತಿರದ ಇನ್ನಿತರ ಪ್ರಕಾರಗಳನ್ನು ಸಹ ನೋಡಬಹುದಾಗಿದೆ. ಕಾವ್ಯದ ಸ್ವರೂಪವನ್ನು ಹೊಂದಿರುವ ಇನ್ನಿತರ ಪ್ರಕಾರಗಳೆಂದರೆ ಗಜಲ್ ಕಾವ್ಯಗಳು, ಖಂಡಕಾವ್ಯ ಹೋರಾಟ ಹಾಡುಗಳು, ಹಾಯ್ಕುಗಳು ಇವು ಕಾವ್ಯದ ಇತರ ಪ್ರಕಾರಗಳಿಂತಿವೆ. ಕಾವ್ಯದಂತೆ ಉಪಮೆ, ರೂಪಕ, ಸ್ವರೂಪ, ಆಶಯ, ಲಯವನ್ನು ಕಾಣಬಹುದಾಗಿದೆ. ಗಜಲ್‌ನ್ನು ಸಹ ಕಾವ್ಯ ಎಂದು ಕರೆಯಲು ಅನೇಕ ವಾಗ್ವಾದಗಳು ನಡೆದಿವೆ ಅದು ಏನೇ ಇದ್ದರೂ ಅದು ಕಾವ್ಯದ ಸ್ವರೂಪದಲ್ಲಿದೆ ಅಷ್ಟೇ

ಅಲ್ಲದೆ ಒಂದು ಛಂಧೋಬದ್ಧವಾಗಿ ನಿರ್ಮಾಣವಾಗುತ್ತದೆ. ಅದ್ದರಿಂದ ಕಾವ್ಯ ಎಂದು ಬರೆಯಬಹುದಾಗಿದೆ ಇದರಂತೆ ಹೋರಾಟದ ಹಾಡುಗಳನ್ನು ಸಹ ಇದೇ ರೀತಿ ಅನುಮಾನ ವ್ಯಕ್ತಪಡಿಸಿದ್ದಾರೆ. ಕಾವ್ಯ ಒಂದು ನೋವನ್ನು, ಮೌಲ್ಯವನ್ನು ಆಶಯವನ್ನು ಹೊರ ಚೆಲ್ಲುವಂತ ಜಾಗೃತೆಯನ್ನು ನೀಡುತ್ತದೆ. ಅನೇಕ ನೊಂದ ತಳಸಮುದಾಯಗಳನ್ನು ತಮ್ಮ ಬದುಕಿನ ಅಸ್ಮಿತೆಗಾಗಿ ಹೋರಾಟದಲ್ಲಿ ತಮ್ಮ ನೋವಿನ ಅಕ್ರಮವನ್ನು ಸ್ಥಿತಿಯನ್ನು ಬಯಕೆ ಬೇಡಿಕೆಯನ್ನು ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಆದ್ದರಿಂತ ಹೋರಾಟದ ಹಾಡುಗಳನ್ನು ಸಹ ತಾತ್ವಿಕತೆಯ ನೆಲೆಯಲ್ಲಿ ನೋಡಬಹುದು ಹಾಗೂ ಅವು ಆ ನೆಲೆಯಲ್ಲಿ ಅಭಿವ್ಯಕ್ತಗೊಳುತ್ತಿರುವುಂಟು.

### ೩.೩.೧. ಗಜಲ್

ಗಜಲ್ ಕಾವ್ಯ ಪ್ರಕಾರ ಉರ್ದು ಸಾಹಿತ್ಯದ ಜನಪ್ರಿಯ ಭಾಗ ಜೊತೆಗೆ ಗಂಭೀರ ಕಾವ್ಯವು ಹೌದು. ಶೃಂಗಾರ, ಪ್ರೇಮ ವಿರಹಗೀತೆಯೂ ಹೌದು. ಗಜಲ್ ಅಂದರೆ ಫಾರಸಿ ಭಾಷೆಯಲ್ಲಿ ಜಿಂಕೆ! ಸ್ವಚ್ಚಂದವಾಗಿ ಕಾಡಿನಲ್ಲಿ ಓಡಾಡುವ ಈ ಜಿಂಕೆ ಸೆರೆಸಿಕ್ಕಾಗ ಹೊರಡಿಸುವ ಆರ್ತನಾದವೇ ಕರುಣಾರಸವನ್ನೊಳಗೊಂಡ 'ಗಜಲ್' ಎಂದು ಅರ್ಥಸುತ್ತಾರೆ. ಜೊತೆಗೆ ಗಜಲ್ ಎಂಬುದು ಅರಬ್ಬೀ ಶಬ್ದ. ಹೆಸಂಗರೊಡನೆ ಮಾತನಾಡುವುದು, ಪ್ರೇಮ ಮೋಹ ಅನುರಾಗಗಳನ್ನು ವ್ಯಕ್ತಪಡಿಸುವುದು ಎಂದು ಈ ಪದದ ಅರ್ಥ ಗಜಲ್ ಅರಬ್ಬಿ ಶಬ್ದವಾದರೂ, ಪರ್ಸಿಯನ್ ಭಾಷೆಯಲ್ಲಿ ಒಂದು ಶ್ರೇಷ್ಠ ಕಾವ್ಯ ಪ್ರಕಾರವಾಗಿ ಬೆಳೆಯಿತು. ಹಾಗಾಗಿ ಗಜಲ್ ಎಂಬ ಪದ ಅರಬ್ಬಿಯಾದರೂ ಈ ಕಾವ್ಯ ಪ್ರಕಾರದ ಮೂಲ ಮಾತ್ರ ಪಾರ್ಸಿ ಭಾಷೆಯೇ. ಅಲ್ಲಿಂದ ಇದು ಭಾರತದ ಉರ್ದುವಿಗೆ ಬಂತು ಹಾಗೆ ಉರ್ದುವಿಗೆ ಬಂದ ಗಜಲ್ ಪ್ರಕಾರವು ಪಾರ್ಸಿಯ ಅನುಕರಣೆಯ ಮಾತ್ರವಾಗಿ ಉಳಿಯದೆ ಭಾರತೀಯತೆಯನ್ನು ಮೈಗೂಡಿಸಿಕೊಂಡು ಬಾರತೀಯರ ರಸಿಕರ ಮನ ಗೆದ್ದು ಉರ್ದು ಸಾಹಿತ್ಯದಲ್ಲೇ ಅತ್ಯಂತ ಪ್ರಖ್ಯಾತ ಪಡೆದ ಪ್ರಕರವಾಗಿ ಬೆಳೆಯಿತು. ಭಾರತದ ಅನೇಕ ಭಾಷೆಗಳಲ್ಲಿಯೂ ತನ್ನ ವ್ಯಪ್ತಿಯನ್ನು ವಿಸ್ತರಿಸಿ ಕನ್ನಡ ಭಾಷೆಯಲ್ಲಿ ಒಂದು ಶಕ್ತಿಯುತ ಕಾವ್ಯ ಪ್ರಕಾರವಾಗಿ ಬೆಳೆಯುತ್ತಿದೆ.

ಸಾಮಾನ್ಯವಾಗಿ ಗಜಲ್ ದ್ವಿಪದಿಗಳಲ್ಲಿರುತ್ತದೆ. ಒಂದು ಗಜಲ್‌ನಲ್ಲಿ ಕನಿಷ್ಟ ೫ರಿಂದ ೨೫ರ ದ್ವಿಪದಿಗಳಿರಬಹುದಾಗಿದೆ. ಎರಡೆರಡು ಸಾಲುಗಳ ಪ್ರತಿಯೊಂದು ನುಡಿಗೆ, ಅಂದರೆ ದ್ವಿಪದಿಗೆ 'ಶೇರ್' ಎಂದು ಕರೆಯಲಾಗುತ್ತದೆ. ಈ ಎರಡೂ ಸಾಲುಗಳ ಮಾತ್ರಗಣ ಅಥವಾ ಮಾತ್ರೆಗಳ ಮೊತ್ತ ಅಥವಾ ವೃತ್ತಗಳು ಒಂದೇ ಆಗಿರಬೇಕೆಂದು ನಿಯಮ ಹೇಳುತ್ತದೆ. ಯಾವುದೇ ಗಜಲ್‌ನಲ್ಲಿ ಮುಖ್ಯವಾಗಿ ಮತ್ಲಾ, ರದೀಫ್, ಕಾಫಿಯಾ ಮತ್ತು ಮಕ್ತಾ ಎಂಬ ೪ ಅಂಗಗಳಿರುತ್ತವೆ.

**ಮತ್ಲಾ:–**

ಗಜಲ್‌ನ ಮೊದಲ ದ್ವಿಪದಿಯೇ ಮತ್ಲಾ. ಈ ದ್ವಿಪದಿಯಲ್ಲಿ ಮೊದಲ ಸಾಲು ಎರಡನೇ ಸಾಲು ಎರಡೆರಲ್ಲಿಯೂ ಕಾಫಿಯಾ ಮತ್ತು ರದೀಫ್ ಇರುತ್ತವೆ. ನಂತರದ ದ್ವಿಪದಿಗಳಲ್ಲಿ ಎರಡನೆಯ ಸಾಲಿನ ಕೊನೆಯಲ್ಲಿ ಮಾತ್ರ ಕಾಫಿಯಾ ಮತ್ತು ರದೀಫ್ ಬರುತ್ತವೆ.[೧೬]

**ರದೀಫ್:-**

ಇದು ಗಜಲಿನುದ್ದಕ್ಕೂ ಬಳಕೆಯಾಗಿರುವ ಸಾಮಾನ್ಯ ಅಂತಪದ ಇದು ಒಂದು ಪದವಿರಬಹುದು ಇಲ್ಲವೇ ಪೂರ್ಣ ಅರ್ಥ ಕೊಡುವ ಹಲವು ಪದಗಳ ಸಮೂಹವಾಗಿರಬಹುದು. ಇದನ್ನು ಗಜಲಿನ ಸೌಂದರ್ಯ ವರ್ಧಕ ಎಂದು ಪರಿಗಣಿಸಲಾಗುತ್ತದೆ.[೧೭]

**ಕಾಫಿಯಾ:-**

ಇದು ಗಜಲಿನಲ್ಲಿ ರದೀಫ್‌ಗಿಂತ ಮುಂಚಿನ ಸ್ಥಳದಲ್ಲಿ ಸ್ಥಿತಗೊಂಡಿರುವ ಪ್ರಾಸಪದ. ಗಜಲಿನುದ್ಧಕ್ಕೂ ರಧೀಫ್ ಇರುವಲ್ಲೆಲ್ಲ ಅದಕ್ಕಿಂತಲೂ ಮೊದಲು ಇವು ಇರುತ್ತವೆ. ಆದರೆ ರದೀಫ್‌ನಂತೆ ಇವು ಗಜಲಿನುದ್ಧಕ್ಕೂ ಇರುವ 'ಒಂದೇ ಸಾಮಾನ್ಯ ಅಂತ್ಯಪದವಾಗಿರದೆ; ಬದಲಾಗುತ್ತಾ ಹೋಗಿರುವ ಬಲಪ್ರಾಸಗಳಾಗಿರುತ್ತವೆ. ಕಾಫಿಯಾವು ಗಜಲಿನ ಹೃದಯವೆಂದೇ ಪರಿಣಿತವಾಗಿದೆ. ರದೀಫ್ ಇಲ್ಲದ ಗಜಲ್‌ಗಳಿರಬಹುದು; ಆದರೆ ಕಾಫಿಯಾಗಳಿಲ್ಲದ ಗಜಲ್ ಇರಲು ಸಾಧ್ಯವೇ ಇಲ್ಲ.[೧೮]

ಉದಾ: ನೋವು, ಹೂವು, ಸಾವು ಕಾವು, ತಾವು, ಇತ್ಯಾದಿ ಎಲ್ಲಾ ಪ್ರಾಸಪದಗಳ ಕೊನೆ ಅಕ್ಷರ 'ಉ' ಆಗಿದೆ.

**ಮಕ್ತಾ:-**

ಗಜಲಿನ ಕೊನೆಯ ದ್ವಿಪದಿಗೆ ಮಕ್ತಾ ಎನ್ನುತ್ತಾರೆ. ಈ ದ್ವಿಪದಿಯ ಮೊದಲನೆ ಸಾಲಿನಲ್ಲಿ ಅಥವಾ ಎರಡನೇ ಸಾಲಿನಲ್ಲಿ ತನಗೆ ಅನುಕೂಲವಾಗಿರುವೆಡೆ ಕವಿ ತನ್ನ ಕಾವ್ಯ ನಾಮವನ್ನು ತರಲು ಅವಕಾಶವಿರುತ್ತದೆ. ಇದನ್ನು ಉರ್ದುವಿನಲ್ಲಿ ತಖಲ್ಲುಸ್ ಎನ್ನಲಾಗುತ್ತದೆ. ಈ ಕಾವ್ಯನಾಮ ಅಥವಾ ತಖಲ್ಲುಸ್ ಇಲ್ಲದೆಯೂ ಗಜಲ್ ಇರಬಹುದು. ಇದು ಕಡ್ಡಾಯವೇನಲ್ಲ.[೧೯]

**ರವಿ:-**

ಇದು ಗಜಲಿನಲ್ಲಿರುವ ಎಲ್ಲ ಕಾಫಿಯಾ (ಒಳಪ್ರಾಸ)ಗಳಲ್ಲಿ ಸಾಮಾನ್ಯವಾಗಿರುವ ಕೊನೆಯ ಅಕ್ಷರ. ಇದು ಕಾಫಿಯಾದ ಬೇರು. ಇದಿಲ್ಲದೆ ಕಾಫಿಯಾ ಇಲ್ಲ. ಉದಾಹರಣೆಗೆ ನೋವು, ಹೂವು, ಸಾವು ಕಾವು ತಾವು ಎಂಬ ಪ್ರಾಸಪದ (ಕಾಫಿಯಾ)ಗಲಲ್ಲಿ ಸಾಮಾನ್ಯವಾಗಿರುವ ಕೊನೆಯ ಅಕ್ಷರ 'ವು' ಆಗಿದೆ. ಇದೇ ರವಿ.[೨೦]

ಕನ್ನಡದಲ್ಲಿ ಗಜಲ್ ರಚನೆ ಪ್ರಾರಂಭವಾಗಿದ್ದ ಎಪ್ಪತ್ತರ ದಶಕದಲ್ಲಿ ಶಾಂತರಸರಿಂದ ರಚನಾ ದೃಷ್ಟಿಯಿಂದ ಈ ಕನ್ನಡದ ಗಜಲ್ ಪರಂಪರೆಗೆ ಅವರೇ ಆದ್ಯರಾದರೂ ಪೂರ್ಣ ಪ್ರಮಾಣದ ಗಜಲ್ ಸಂಕಲನವನ್ನು ಮೊದಲು ಪ್ರಕಟಿಸಿದವರು ಮಾತ್ರ ಅವರು ಮಗಳು ಎಚ್.ಎಸ್.ಮುಕ್ತಾಯಕ್ಕ. ನಂತರದಲ್ಲಿ ಶಾಂತರಸರ ಕೃತಿ 'ಗಜಲ್ ಮತ್ತು ದ್ವಿಪದಿ' ಎಂಬ ಪುಸ್ತಕ. ನಂತರದಲ್ಲಿ ಜಂಬಣ್ಣ ಅಮರಚಿಂತ, ಚಿದಾನಂದ ಸಾಲಿ, ರವಿ ಹಂಪಿ, ಪ್ರಭಾವತಿ ದೇಸಾಯಿ, ಶ್ರೀಕೃಷ್ಣ ನಾಗರಹಳ್ಳಿ, ಸಂಗು ಹುಂಡೇಕಾರ, ಡಾ. ಜಯದೇವ ಗಾಯಕವಾಜ,

ಸಿದ್ಧರಾಮ ಹಿರೇಮಠ, ಕೆ. ಸುನಂದಾ, ಎಂ.ಎಸ್. ವಾಲಿ, ಇದರಂತೆ ಇತ್ತೀಚಿನ ಸಮಕಾಲೀನ ಕಾಲಘಟ್ಟದಲ್ಲಿ ಅನೇಕ ಕವಿಗಳು ಗಜಲ್‌ನ್ನು ರಚಿಸುತ್ತಿದ್ದಾರೆ. ಅಂತವರಲ್ಲಿ ಆರೀಫ್‌ರಾಜಾ, ಅಲ್ಲಾರಿ ಗಿರಿರಾಜ್, ದಸ್ತಗಿರಿಸಾಬ್ ದಿನ್ನಿ, ಬಸವರಾಜ ಸುರದ, ನಂಜೀರ ಚಂದಾರವರು, ಪ್ರಹ್ಲಾದ್ ಅಗಸನ ಕಟ್ಟೆ, ಕೆ. ಪರೀಫ್, ರಾಮಚಂದ್ರ ಪೈ, ವೈ.ಬಿ.ಹಾಲಭಾವಿ, ಸಿದ್ಧರಾಮ ಹಿರೇಮಠ, ಬಸು ಬೇವಿನ ಗಿಡದ, ಜನ.ಸುಬಯ್ಯ ಭಟ್ ಬಕ್ಕಳ, ಮಲ್ಲಿಕಾರ್ಜುನ್ ಮೇತ್ರಿ, ಕೆ.ಸುನಂದ್, ಹರೀನಾಥ ಬಾಬು, ಚನ್ನಪ್ಪ ಅಂಗಡಿ, ಜಾಂಪಣ್ಣ ಆಶೀಹಾಳ್, ರೇಖಾ ಪಾಟೀಲ್, ಮಹಾಂತೇಶ ನವಲಕಲ್, ತರುವಿಹಾಳ್ ಚಂದ್ರ, ಆನಂದ ಇನುಗೇರಿ, ಚಿದಾನಂದ ಪಾಲಿ, ಗಣೇಶ ಹೊಸ್ಮನಿ, ರಮೇಶ ಆರೋಲಿ, ಬಸವರಾಜ್ ಹೃತ್ಸಾಕ್ಷಿ, ಶರೀಫ್ ಹಸಮುಕಲ್, ಪ್ರಕಾಶ ಶಾಲಿಹಾಳ್ ಇನ್ನೂ ಮುಂತಾದವರು ಗಜಲ್‌ನಲ್ಲಿ ಒಂದು ಕಾವ್ಯ ಪ್ರಕಾರವಾಗಿ ರಚಿಸುವಲ್ಲಿ ತೊಡಗಿರುವುದು ಕಂಡು ಬಂದಿದೆ.

ಭಾಷೆ ಯಾವುದೇ ಇರಲಿ ಗಜಲ್ ಒಂದು ಪ್ರೇಮಮಯ ಕಾವ್ಯ ಸಂಗೀತಮಯ ಪ್ರೇಮ. ಈ ಪ್ರಕಾರದ ಗೀತಾತ್ಮಕತೆ ಮತ್ತು ಸಾಹಿತ್ಯದ ಛಂದೋ ವೈಶಿಷ್ಟಗಳನ್ನು ಉರ್ದುವಿನಷ್ಟು ಸಶಕ್ತವಾಗಿ ಮತ್ತು ಸುಕೋಮಲವಾಗಿ ಕನ್ನಡದಲ್ಲಿ ತರುವಂತದ್ದು ಸುಲಭದ ಮಾತೇನಲ್ಲ. ಪ್ರತಿ ಭಾಷೆಗಳ ಅದರದ್ದೇ ಆದ ಒಂದು ಅನುವಾದಂತೀತವಾದ ಅನು ಸರಂಗಾತೀತವಾದ ಅನನ್ಯ ಕಾವ್ಯಗುಣವೊಂದು ಇದ್ದೇ ಇರುತ್ತದೆ ಗಜಲ್‌ನಲ್ಲಿ ಮೇಲ್ನೋಟಕ್ಕೆ ಪ್ರೇಮ, ವಿರಹ, ವಿಪ್ರಲಂಭಗಳೇ ಪ್ರಧಾನ ಭಾವವೇನೋ ಎಂಬಂತೆ ಕಾಣುವ ಗಜಲ್‌ಗಳು ಆಳದಲ್ಲಿ ಅಮಿತವಾದ ಜೀವನ ಪ್ರೀತಿ ವ್ಯವಸ್ಥೆಯ ಬಗೆಗೆ ಅಸಮಾಧಾನದ ಚಡಪಡಿಕೆಗಳು ಹೊಸ ಬದುಕಿನ ಕನಸು ತಹತಹಗಳು ಹಾಗೂ ಲೌಕಿಕವ ಮೀರಿ ಪರಮಾರ್ಥಿಕತೆಡೆಗೆ ಕಂಡ ಕಾಣದಂತೆ ಚಾಚಿಕೊಂಡಿರುವ ಕವಲುಗಳು ಮುಂತಾದರವೆಲ್ಲ ಗುಪ್ತಗಾಮಿನಿಯಾಗಿ ಹೊಂದಿದೆ. ಇತ್ತೀಚಿನ ಗಜಲ್ ಕೇವಲ ಪ್ರೇಮ ವಿರಹ ಮಾತ್ರ ಅಧ್ಯಕ್ಷರುಗಳ ಸಂಕಟ ನೋವು, ಅವಮಾನ, ಹಸಿವು ಬಡತನ, ಆದರ್ಶ, ಮೌಲ್ಯಗಳು, ಸಂಬಂಧಗಳ ಕಾಳಜಿ, ವ್ಯಕ್ತಿ ಆದರ್ಶಗಳ ಸಿದ್ಧಾಂತಗಳನ್ನು ಸಹ ಇತ್ತೀಚಿನ ಗಜಲ್‌ನಲ್ಲಿ ಕಾಣಬಹುದಾಗಿದೆ. ಜಾತಿಯ ಅಂಧಕಾರವನ್ನು ನಿರ್ಮೂಲನ ಮಾಡಿ ಸಮ ಸಮಾನತೆಯ ಸೌಹಾರ್ದತೆಯ, ಪ್ರೇಮಮಯ ಬದುಕನ್ನು ವ್ಯಕ್ತಗೊಳಿಸಿರುವುದು ಕಂಡು ಬಂದಿದೆ. ವಿಚಾರ, ಸಿದ್ಧಾಂತ, ಮೌಲ್ಯಗಳನ್ನು ಒಂದು ಆಶಯದ ರೂಪದಲ್ಲಿ ಗಜಲ್‌ನಲ್ಲಿ ಅಭಿವ್ಯಕ್ತಗೊಳಿಸಿರುವುದು ಕಂಡು ಬಂದಿದೆ. ಸೂಫಿ ಚಿಂತನೆಗಳನ್ನು ಅಂಬೇಡ್ಕರ, ಬುದ್ಧ ಬಸವ, ಗಾಂಧಿ, ಮಾರ್ಕ್ಸ್ ಹೀಗೆ ಸಮಾಜ ಸುಧಾರಕರ ಸಿದ್ಧಾಂತಗಳನ್ನು ಸಹ ಗಜಲ್ ಭಾಷೆಯಲ್ಲಿ ಬಗ್ಗಿಸಿಕೊಂಡು ಛಂದೋಬದ್ಧವಾಗಿ ಅಭಿವ್ಯಕ್ತಿಸುವುದು ಕಂಡು ಬಂದಿದೆ. ವಿಶೇಷವಾಗಿ ವಿಷಾದದ ಜೊತೆ ಪ್ರೀತಿಯನ್ನು ಹಂಬಿಸುವ ಪರಿ ವಿಶಿಷ್ಟ ರೀತಿಯಲ್ಲಿ ತನ್ನದೇ ಆದ ಪರಿಭಾಷೆಯಲ್ಲಿ ಒಮ್ಮಿರುವುದು ಗಮನಿಸಬಹುದಾಗಿದೆ. ಕವಿ ಆರೀಫ್ ರಾಜಾ ಗಜಲ್‌ನಲ್ಲಿ ಪ್ರೀತಿಯೊಂದಿಗೆ ಸಾಮಾಜಿಕ ಕಳಕಳಿ ಕುಂಡಬಂದಿದೆ. ಈ ರೀತಿಯಾಗಿ "ನೀರು ಇಲ್ಲದ ಊರಿನಲ್ಲಿ ಶರಾಭಿನ ಅಂಗಡಿ ತಗೆದವರು ನಾವು ಇಲ್ಲಿ ತುಟಿಯಿಂದ ತುಟಿಗೆ ಬಾಟಲನ್ನು ರವಾನಿಸುವುದು ಎಷ್ಟೊಂದು ಕಷ್ಟ"

ಎಂಬ ಗಜಲ್ ಸಾಲನ್ನು ನೋಡಬಹುದು. ಬರಗಾಲದ ಪರಿಸ್ಥಿತಿಯಲ್ಲಿ ಮಳೆ ಇಲ್ಲದೆ ಬೆಳೆಕಾಣದೆ ಕಂಗಾಲಾದ ವರ್ತಮಾನದಲ್ಲಿ ಮದ್ಯದ ಅಂಗಡಿ ತೆಗೆದು ನಿಂತಿರುವುದು ಕಂಡು ಕವಿ ವ್ಯಂಗ್ಯವಾಗಿ ತಮ್ಮ ಗಜಲ್‌ನಲ್ಲಿ ಅಭಿವ್ಯಕ್ತಿಸಿದ್ದಾನೆ ಇಲ್ಲಿ ತುಟಿಯಿಂದ ತುಟಿಗೆ ಅಂದರೆ ಮನಸ್ಸಿನಿಂದ ಮನಸ್ಸಿಗೆ ಭಾವನೆಗಳು ಸಹ ರವಾನೆಯಾಗುವುದು ಕಷ್ಟಕರ ಎಂದು ಹೇಳಿದಂತಿದೆ. ಪ್ರೀತಿಯ ಮಹತ್ವ ಸಾರುವ ಪ್ರೀತಿಯ ಹೆಸರಲ್ಲಿ ಮರಣ ಹೊಂದುವ ಪ್ರೇಮಿಗಳಾಗಿ, ಸಾವೇ ಪರಿಹಾರವಲ್ಲ ಎಂದು ಕವಿ ಅಲ್ಲಾರಿ ಗಿರಿರಾಜ್ ತಮ್ಮ ಗಜಲ್‌ನಲ್ಲಿ ಈ ರೀತಿ ವ್ಯಕ್ತಪಡಿಸಿರುವುದು ಕಂಡು ಬಂದಿದೆ.

ನೀವು ಪ್ರೇಮಿಗಳಾಗಿ ಬಂದವರ್‍ಯಾರು ಸಾಯಬೇಡಿ ಗುಮ್ಮಟದೊಳಗೆ
ನೀವು ಸತ್ತರೆ ನನ್ನ ದೊರೆ ಬಿಕ್ಕಿ ಬಿಕ್ಕಿ ಇತ್ತು ಬಿಡುತ್ತಾನೆ. ನಾನೇ ಮರಳಿ ಸತ್ತಂತೆ ಗೊಲಗುಮ್ಮಟದಲ್ಲಿ[೨೧]
(ಅಲ್ಲಿರಿನಿರಾಜ್, ನೂರ್ ಗಜಲ್, ಗಜಲ್)

ಪ್ರೀತಿಯ ಸಂಕೇತವಾದ ತಾಜಮಹಲ್‌ನಂತೆ ಉತ್ತರ ಕರ್ನಾಟಕದ ಗೋಲ್‌ಗುಮ್ಮಟದ ಇದು ಪ್ರೀತಿಯ ದ್ವೇತಕವಾಗಿ ಕಟ್ಟಿಸಿರುವುದು ಸುಂದರ ಪ್ರೀತಿಯ ಕಾರಣಕ್ಕೆ ಪ್ರೀತಿಯನ್ನು ಒಪ್ಪದ ಸಮಾಜದಲ್ಲಿ ಜಾತಿ ಧರ್ಮದ ಅಂತಸ್ಥಿನ ನೂರಾರು ಪ್ರಶ್ನೆಗಳನ್ನೆ ಕೇಳಿ ಪ್ರೀತಿಯನ್ನು ಸಾಯಿಸುವ ಈ ವ್ಯವಸ್ಥೆಗೆ ದಿಕ್ಕಾರ ರೂಪದಲ್ಲಿ ಪ್ರೀತಿಗೆ ಜಯ ತರುವ ಮಾನವ ಪ್ರೀತಿ ಉಳಿಸಲು ಪ್ರೇಮಿಗಳಿಗೆ ಕರೆನೀಡಿದಂತಿದೆ, ಗೋಲ್‌ಗುಂಬಾಜ್‌ಗೆ ನೀವೂ ಪ್ರೇಮಿಗಳಾಗಿ ಬಂದವರು ಸಾಯಬೇಡಿ, ಒಂದು ವೇಳೆ ಸತ್ತರೆ ಇದನ್ನು ಕಟ್ಟಿಸಿದ ದೊರೆ ಕಣ್ಣೀರಿಡುತ್ತಾನೆ. ಪ್ರೀತಿಗೆ ಕಟ್ಟಿಸಿದ ಸ್ಥಳಗಳಲ್ಲಿ ಪ್ರೇಮಿಗಳು ಜೀವ ಕಳೆದುಕೊಳ್ಳುವುದು ಸರಿಯಲ್ಲ ಎಂದು ಸಾರಿದಂತಿದೆ. ಪ್ರೀತಿಗಾಗಿ ಬದುಕಲು ಕರೆನೀಡಿದಂತಿದೆ.

ಪ್ರೇಯಸಿಯ, ಪ್ರಿಯಕರನ ಪ್ರೀತಿಯನ್ನು ಬಯಸದೆ ಒಂದು ಒಲವಿನ ಪ್ರೀತಿಯಾದರೆ ಮತ್ತೊಂದು ಮನುಷ್ಯ ಪ್ರೀತಿಯ ಜೀವ ಪರ ಕಾಳಜಿಯ ಮಮಕಾರ ಇನ್ನೊಂದು ಬಗೆಯದಾಗದೆ ಈ ಎರಡು ಪ್ರೀತಿಗಳು ಗಜಲನಲ್ಲಿ ಒಡನೂಡಿರುವುದು ಕಂಡು ಬಂದಿದೆ. ಇದರೊಂದಿಗೆ ವರ್ತಮಾನದ ತಲ್ಲಣಗಳು ಸಮಸ್ಯೆಗಳು ನೋವುಗಳಿಗೆ ಮುಲಾಮ್ ನೀಡುವ ರೀತಿಯಲ್ಲಿಯರ ಗಜಲ್ ಅಭಿವ್ಯಕ್ತಗೊಂಡಿದೆ. ಕವಿ ಆರೀಫರಾಜರ ನೆತ್ತರ ಕುಡಿದ ನೆಲಕೆ ಎಂಬ ಗಜಲ್‌ನಲ್ಲಿ ವರ್ತಮಾನದ ಸುಡುವಾಸ್ತವ ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದ್ದಾರೆ.

ನೆತ್ತರು ಕುಡಿದ ನೆಲಕೆ ಏನಾಗಿ ಹೋಯಿತು
ಹೂವಿನ ತೋಟ ಕಲ್ಲಿನ ತೋಟವಾಗಿ ಹೋಯಿತು[೨೨]

ಕಲ್ಲಿನ ನಗರ ಕಲ್ಲಿನ ಹೃದಯದ ಜನರ
ಆಡುವ ಮಾತು ಉಸಿರು ಕಲ್ಲಾಗಿ ಹೋಯಿತು.[೨೩]

ಈ ನೆಲಕ್ಕೆ ತನ್ನದೇ ಆದ ಇತಿಹಾಸವಿದೆ. ಈ ನೆಲ ಅನೇಕ ಹೋರಾಟಗಳನ್ನು ರಾಜಮಹಾರಾಜರ ಯವರಲ್ಲಿ, ಅಮಾಯಕರ ನೆತ್ತರೂ ಬಿದ್ದಿದೆ, ಈಗಲೂ ಪ್ರಭುತ್ವದ ಹೆಸರಲ್ಲಿ ಪ್ರಬಲ ಸಮುದಾಯದ ಜನರು ದುರ್ಬಲ, ಅಲ್ಪಸಂಖ್ಯಾತರ ಜನರನ್ನು ಶೋಷಣೆಯ ಹಿಂಸೆ ಸಾವು ಅವರ ರಕ್ತ ನೆಲಕ್ಕೆ ಚೆಲ್ಲುತ್ತಿದ್ದಾರೆ. ನೆತ್ತರು ಕುಡಿದ ನೆಲಕ್ಕೆ ಏನಾಯಿತೋ ಇಂದು ಹೂವಿನ ತೋಟವೆಲ್ಲ ಕಲ್ಲಿನ ತೋಟವಾಗಿವೆ ಎಂದು ಕವಿ ವಿಷಾದ ಪಡುತ್ತಾನೆ. ಹೂವಿನ ತೋಟ ಎನ್ನುವುದು ಪ್ರೀತಿ, ಪ್ರೇಮ, ಶಾಂತಿ, ಮಮಕಾರದ ಸಂಕೇತವಾಗಿವೆ. ಇಂಥ ಸಂಬಂಧಗಳು ಕೂಗಿವೆ. ಹಿಂಸಾರೂಪ ತಾಳಿದ ರೀತಿಗೆ ಕವಿ ನೋವಿನಿಂದ 'ಕಲ್ಲ ಬಂಡೆಯ ಹಾಗೆ ಕುಂತವನು ನೋಡಿ ರಾಜ ಬೇಸರವೆಂಬುದೇ ಸ್ವತಃ ಬೇಜಾರಾಗಿ ಹೋಯಿತು ಎಂದು ತಮ್ಮ ಗಜಲನಲ್ಲಿ ವ್ಯಕ್ತಪಡಿಸಿದ್ದಾರೆ ಇಲ್ಲಿ ಮನುಷ್ಯತ್ವ ತಾತ್ವಿಕತೆಯ ನೆಲೆ ನಿಂತಿರುವುದು ಕಂಡುಬಂದಿದೆ. ಶಾಂತಿ ಪ್ರೀತಿಗಾಗಿ ಹಂಬಲಿಸುವುದು ಕಾಣುತ್ತವೆ. ಕಲ್ಲಿನ ನಗರ ಅಂದ್ರೆ ನಗರದಲ್ಲಿ ಪ್ರೀತಿ, ಪ್ರೇಮ ಎಲ್ಲಾ ನಾಶವಾಗಿ ವ್ಯವಹಾರಿಕ ಸಂಬಂಧ ಹೊಂದಿವೆ. ಜನರ ಮನಸ್ಸುಗಳು ಹೃದಯಗಳ ಕಲ್ಲಾಗಿವೆ. ಪ್ರೀತಿ, ಪ್ರೇಮ, ಮಾರಾಟದ, ವ್ಯವಹಾರಗಾರರ ವಸ್ತುಗಳಾಗಿವೆ. ಆಡುವ ಮಾತು ಸಹ ಇಲ್ಲಿ ಕಲ್ಲಾಗಿ ಹೋಯಿತು. ಈ ಕಲ್ಲಾದ ನೆಲದಲ್ಲಿ ಮಾತ್ರ ಹೂ ಅರಳಿಸುವ ಆಶಯ ಈ ಗಜಲ್‌ನ ಆಶಯವಾಗಿದೆ.

### ೫.೫.೨ ಹೋರಾಟದ ಹಾಡುಗಳು

ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರಭುತ್ವದ ವಿರುದ್ಧ ಪ್ರತಿರೋಧ ತಾಳಿರುವುದು ಹೆಚ್ಚಾಗಿ ಕಂಡುಬಂದಿದೆ. ಪ್ರತಿಭಟನೆ ಇಂದಿನದಲ್ಲಿ ಅದು ಪಂಪನ ಕಾವ್ಯದಿಂದಲೂ ಬೆಳದು ಬಂದಿದೆ. ತನ್ನ ರಾಜಾಶ್ರಯವನ್ನು ಕಾವ್ಯದ ನಾಟಕನನ್ನಾಗಿ ಚಿತ್ರಿಸಿದರೂ ಕೊನೆಗೆ ಕರ್ಣನು ನೆನೆ ಎಂದಿರುವುದು ಪ್ರತಿಭಟನೆ, ಪ್ರತಿರೋಧದ ಸೂಚಕವಾಗಿದೆ. ಪ್ರತಿಭಟನಾ ಸ್ವರೂಪ ಪರಂಪರೆಯಾಗಿ ಸಾಗಿರುವುದು ಕಾಣುತ್ತೇವೆ. ಇಂದಿನ ಆಧುನಿಕ ಕನ್ನಡ ಕಾವ್ಯದಲ್ಲೂ ತುಳಿಯುವ, ಶೋಷಿಸುವ ವ್ಯವಸ್ಥೆಯ ವಿರುದ್ಧ, ದೇಸಿತನಕ್ಕೆ ಪೆಟ್ಟು ಬೀಳುವ ವಿದೇಶಿ ಸಂಸ್ಕೃತಿಯ ವಿರುದ್ಧ ಜಾಗತೀಕರಣ ಬಂಡವಾಳ ಶಾಹಿಗಳ ವಿರುದ್ಧ, ಪ್ರತಿಭಟನೆ ತಾಳಿರುವುದು ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಇಂದಿನ ಕಾವ್ಯ ಸ್ವರೂಪ ಬದಲಾಗಿದೆ. ಹೋರಾಟ ಕಾಲಕ್ಕೆ ಹಾಡುಗಳನ್ನು ರಚಿಸಲಾಗಿದೆ. ಆ ಹಾಡುಗಳಲ್ಲಿ ದಮನಿತ ನೋವು, ಆಕ್ರಂದನ; ಹತಾಶೆ, ಬಯಕೆ, ಬೇಡಿಕೆ, ಸಿದ್ಧಾಂತ, ಚಿಂತನೆಯನ್ನು ಸಹ ಕಾಣಬಹುದಾಗಿದೆ. ಅನಕ್ಷರಸ್ಥ ಸಮುದಾಯಗಳಿಗೆ ಎಚ್ಚರಿಕೆಯ ಪ್ರಜ್ಞೆ ಬೆಳಸಿರುವುದು ಈ ಹೋರಾಟದ ಹಾಡುಗಳೇ ಈ ಹಾಡುಗಳ ಮೂಲಕ ಜನಜಾಗೃತೆ ಮಾಡಿ, ಜನರಲ್ಲಿ ಹೋರಾಟದ ಮನೋಭಾವ, ದಬ್ಬಾಳಿಕೆಯ ವಿರುದ್ಧ ಎದ್ದ ನಿಲ್ಲುವ ಆತ್ಮಸ್ಥೈರ್ಯ ತುಂಬಿದ್ದ ಈ ಹೋರಾಟದ 'ಹಾಡುಗಳೇ ಹಾಡೇ ಆಕ್ಸಿಜನ್ ಹೋರಾಟವೇ ಡೈರಕ್ಷನ್' ಎಂಬ ನಿಲುವಿನೊಂದಿಗೆ ಅನೇಕ ಹಾಡುಗಳು ರಚಿತಗೊಂಡಿವೆ. ಯಾವುದೇ ಹೋರಾಟ ಅಥವಾ ಚಳುವಳಿಗೆ ಹಾಡುಗಳು ಟಾನಿಕ್ ಇದ್ದಂತೆ, ಓದು ಬರಹ ಗೊತ್ತಿಲ್ಲದವರಿಗೆ ಲೇಖನ ಕವನಗಳ ಮುಖಾಂತರ

ಹೋರಾಟದ ಆಶಯವನ್ನು ತಿಳಿಸುವುದು ಕಷ್ಟ ಅಂತಹ ಜನ ಸಮುದಾಯಕ್ಕೆ ಹಾಡುಗಳೇ ಪರಿಣಾಮಕಾರಿ ಸಾಧನ. ಹೋರಾಟದ ಸಂದರ್ಭದಲ್ಲಿ ಸಭಿಕರರನ್ನು ಹೆಚ್ಚು ಶಕ್ತಿಯುತವಾಗಿ ಆಸಕ್ತಿ ತುಂಬುವ ಕೆಲಸ ಈ ಹಾಡುಗಳು ಮಾಡುತ್ತವೆ. ದಲಿತ ಹೋರಾಟಗಳು, ರೈತಾಪಿ ಹೋರಾಟಗಳು, ವಿದ್ಯಾರ್ಥಿ ಹೋರಾಟಗಳು, ಕಾರ್ಮಿಕ ಹೋರಾಟಗಳು, ಮಹಿಳಾ ಹೋರಾಟಗಳು, ಅರೆಗುತ್ತಿಗೆ ಕೆಲಸಗಾರರು ಹೀಗೆ ಅಂಗನವಾಡಿ ಕಾರ್ಯಕರ್ತರು ಹೀಗೆ ನಾನಾ ರೀತಿಯ ಹೋರಾಟಗಳಲ್ಲಿ ಹಾಡುಗಳ ತುಂಬಾ ಮಹತ್ವದ ಸ್ಥಾನ ಪಡೆದಿದೆ. ಹೋರಾಟಗಳಲ್ಲಿ ಈ ಹಾಡುಗಳ ಮೂಲಕ ಪ್ರಭುತ್ವಕ್ಕೆ ವ್ಯವಸ್ಥೆಗೆ ತಮ್ಮ ನಿಲುವನ್ನು ಆಶಯವನ್ನು ತಿಳಿಸುವುದು ಮುಖ್ಯವಾದ ಸಾಧನವಾಗಿದೆ. ಇತ್ತೀಚಿನ ದಿನಗಳಲ್ಲಿ ಅನಕ್ಷರತೆ, ಅತ್ಯಾಚಾರ, ಅವಮಾನ, ಅಪನಂಬಿಕೆ, ಜಾಗತೀಕರಣದ ಪ್ರಭಾವ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅತ್ತಿಕ್ಕುವ ವ್ಯವಸ್ಥೆಯ ಕುರಿತಾಗಿಯೂ ಹೋರಾಟಗಳು ನಡೆಯುತ್ತಿವೆ. ಅಂತಹ ಸಂದರ್ಭದಲ್ಲಿ ಪ್ರಭಾವಿ ಹಾಡುಗಳು ಹುಟ್ಟುತ್ತವೆ. ವಾಸ್ತವದ ಚಿತ್ರಣ ಬಿಡುತ್ತವೆ ಅಂಥ ಹಾಡುಗಾರರೂ ಸಿ.ದಾನಪ್ಪ ನಿಲೋಗಲ್, ಕೋಟಗನಹಳ್ಳಿ ರಾಮಯ್ಯ, ಆರ್. ಮಾನಯ್ಯ ಮುಂತಾದವರು ಪ್ರಮುಖ ಪಾತ್ರವಹಿಸುತ್ತಾರೆ. ಭಾಗವಾಗಿ ಬಂದ ಪುಸ್ತಕಗಳೆಂದರೆ. ಕೋಟಗನಹಳ್ಳಿ ರಾಮಯ್ಯನವರ 'ಹೆಜ್ಜೆ ಮಾಡು', ಸಿ. ದಾನಪ್ಪ ನಿಲೋಗಲ್ ಅವರ ಜೋಡುಗುಂಡಿಗೆ, ದಲಿತ ಸಂಘ ಸಮಿತಿ ಪ್ರಕಟಿಸಿರುವ ಹೋರಾಟದ ಹಾಡುಗಳು. ಕುಮಾರ ಸಮತಳ ಸಂಪಾದಿಸಿರುವ ಪ್ರತಿರೋಧದ ಹಾಡುಗಳು. ಹೀಗೆ ಹಲವು ಪುಸ್ತಕಗಳು ಹೊರಬಂದಿವೆ. ಅಂಬೇಡ್ಕರ್, ಮಾರ್ಕ್ಸ್, ಗಾಂಧಿ, ಬುದ್ಧ, ಬಸವಣ್ಣ ಅವರ ಚಿಂತನೆಗಳನ್ನು ಈ ಹೋರಾಟದ ಹಾಡುಗಳಲ್ಲಿ ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಯಾವುದೇ ಚಳುವಳಿಯ ಆಶಯವನ್ನು ಸ್ವೀಕರಿಸುವಾಗ ಅದನ್ನು ಅಲ್ಲಿನ ಸಾಂಸ್ಕೃತಿಕ ವಲಯಕ್ಕೆ ಹೊಂದುವಂತೆ ಅಳವಡಿಸುವುದು ಮುಖ್ಯ ಅದರಂತೆ ದಾನಪ್ಪ ಅವರ ಹಾಡುಗಳಲ್ಲಿ ಅಂತಹ ಕೆಲಸ ಸಮರ್ಥವಾಗಿ ನಿರ್ವಹಿಸಿದ್ದಾರೆ. ಸಿ. ದಾನಪ್ಪರವರು ಕ್ರಾಂತಿಕಾರಿ ಹಾಡುಗಳ ಜೊತೆ ಜೊತೆಯಲ್ಲಿ ಈ ನೆಲದ ತತ್ವಪದಕಾರರ ಕುರಿತು, ವಚನ ಕಾರರ ಕುರಿತು, ಶರಣರ ಕುರಿತು, ಶರೀಫರ ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾರೆ. ಕ್ರಾಂತಿಕಾರಿ ಹಾಡುಗಳ ಸ್ಫೂರ್ತಿಯಿಂದಲೇ ಸ್ಥಳೀಯ ಜಾನಪದದಿಂದ ಆಯ್ಕೆ ಮಾಡಿಕೊಂಡು ಮಾತುಗಳನ್ನು ಬಳಸಿಕೊಂಡು ತುಂಬಾ ಪರಿಣಾಮಕಾರಿಯಾದ ಹಾಡುಗಳನ್ನು ಸ್ವತಃ ಬರೆಯುವಲ್ಲಿ ಎತ್ತಿದ ಕೈ. "ಅಂಬೇಡ್ಕರ್ ಹೇಳಿದ ಮಾತು" ಕುರಿತ ಕೇಳಿರಿ ನೀವು ಕೂಲಿ ಜನ ಓಟು ಕೇಳಲು ಬಂದವರೆಲ್ಲ ಮುಂತಾದ ಹಾಡುಗಳು ದಾನಪ್ಪ ಬರೆಯುವ ಹಾಡುಗಳು ಹೇಯತೆಗೆ ಮತ್ತು ಪರಿಣಾಮಕಾರತ್ವಕ್ಕೆ ಉತ್ತಮ ಉದಾಹರಣೆಯಾಗಿವೆ. ಹೋರಾಟದ ಹಾಡುಗಳಿಗೆ ಮತ್ತೊಂದು ಶಕ್ತಿ ಅಂದರೆ ಅದು ಹೊಂದಿರುವ ಗೇಯತೆಯಾಗಿದೆ.

೧. ದೇವನೊಬ್ಬನೇ ಅಂದಾನೋ ಶರೀಫಜ್ಜ
ನಾಮ ಹಲವಾರೆಂದಾನೋ-ಶರೀಫಜ್ಜ

–ಶರೀಫಜ್ಜಾ (ಜೋಡುದಂತ)

೨. ಅಂಬೇಡ್ಕರ್ ಹೇಳಿದ ಮಾತು
ಮರೆಯಬೇಡಿ ಮರೆತು ಮಲಗಬೇಡಿ

ಜಾತಿವರ್ಗ ಒಂದೇ ನಾಣ್ಯದ ಎರಡು ಮುಖಗಳು
ವಂಚಿತರೇ ಈ ದೇಶದ ವಾರಸುದಾರರು.[೨೪]

ಈ ರೀತಿಯಾದ ಸುಂದರಮಯದೊಂದಿಗೆ, ನಿಂತ ನಿಂತಲ್ಲೇ ಹಾಡನ್ನು ಕಟ್ಟುವ ಕಲೆಗಾರಿಕೆ ದಾನಪ್ಪನವರಿಗೆ ಇದೆ. ಜನರ ನೋವಿನ ಆಕ್ರಂದನವೇ ಲಯವಾಗಿಸುವ ಕಲೆಗಾರಿಕೆ ಹೋರಾಟದ ಹಾಡುಗಳಿಗೆ ಇದೆ. ಹೋರಾಟದ ಒಡನಾಡಿಗಳ ಮಿಡಿತ ಮೀಸಲಾತಿಯ ಕುರಿತಾಗಿ, ಮಕ್ಕಳ, ಮಹಿಳೆಯ ಕುರಿತಾಗಿ, ಮೌಢ್ಯ ವಿರೋಧಿ ಹಾಡುಗಳು ಎಲೆಕ್ಷನ್ ಹಾಡುಗಳು, ಪರಿಸರದ ಹಾಡುಗಳು ವರ್ತಮಾನದ ಹಾಡುಗಳು, ಪ್ರತಿಯೊಂದು ಚಳುವಳಿಗೆ ಹಾಡು ಪ್ರಾಣವಾಯುವಾಗಿರುವುದರಲ್ಲಿ ಸಂಶಯವಿಲ್ಲ. ಅದರೊಂದಿಗೆ ಜಾಗ್ರತಿಯನ್ನು ಮೂಡಿಸುವ ಮಹತ್ವ ಕೆಲಸವೂ ಸಹ ಕಾಣಬಹುದು. ಹಾಡು ಇಲ್ಲದೆ ಹೋರಾಟಗಳು ಚಳುವಳಿಗೆ ಅಭಾಸವೆಂಬುದು ಜನಮಾನಸದಲ್ಲಿ ಮೂಡಿದೆ. ಈ ಹಾಡುಗಳಲ್ಲಿ ವರ್ತಮಾನದ ತಲ್ಲಣಗಳನ್ನು ಸಹ ಅಭಿವ್ಯಕ್ತಿಸಿದವದ್ದು ಕಂಡು ಬಂದಿದೆ. ಕಸುಬಾಚುವ ಸಿಪಾಯಿ, ಅಂಗನವಾಡಿಯ ಬಾಯಿ, ವರದಕ್ಷಿಣೆ ಬಲಿಯಾದ ಜ್ಯೋತಿಮ್ಮ ತಂಗಿ. ಆಹಾರದ ಹಕ್ಕು ಕುಡಿಯುವ ನೀರಿನಹಕ್ಕು ಖಾಸಗೀಕರಣ, ಸ್ಲಂ ಜನರ ಬವಣಿ, ಮಾದಿಗ ಮೀಸಲಾತಿ ಹಕ್ಕು ಇಂತಹ ಅನೇಕ ವಿಷಯ ಕುರಿತು ಶಿಶುಗೀತೆಯನ್ನು ಮಂಡಿಸುವಲ್ಲಿ ಹೋರಾಟದ ಹಾಡುಗಳು ಮಹತ್ತರ ಪಾತ್ರ ವಹಿಸುತ್ತವೆ.

ಸಮಕಾಲೀನ ಕಾವ್ಯವು ಏಕಕೇಂದ್ರಿಯ ಕಾವ್ಯವಾಗದೆ ಬಹುಕೇಂದ್ರೀಯ ಕಾವ್ಯವಾಗಿದೆ. ಈ ಹಿಂದೆ ಕಾವ್ಯದ ಕಾಲಘಟ್ಟಕ್ಕೆ ತಕ್ಕಂತೆ ಗುರುತಿಸಬಹುದಾದ ಕೇಂದ್ರಿಯ ಆಶಯವನ್ನು ಈ ಸಮಕಾಲೀನ ಕಾವ್ಯದಲ್ಲಿ ಗುರುತಿಸಲಾಗುವುದಿಲ್ಲ. ಬಹುಕೇಂದ್ರಿಯ ನೆಲಗಳಿರುವ ಕಾವ್ಯ ಇವತ್ತಿನ ಕಾವ್ಯವಾಗಿದೆ. ಸಾಮಾಜಿಕ ಸಮನ್ವಯತೆ, ದಮನಿತ ಸಮುದಾಯದ ಧ್ವನಿ, ಅಖಂಡತೆ, ದೈವಕೇಂದ್ರಿತ ಆಶಯ, ಕೋಮುವಾದದ ಕ್ರೂರತೆ, ಭಯೋತ್ಪಾದನೆ, ಪ್ರೀತಿ, ಆಹಾರ, ಬಟ್ಟೆ, ಸರಸ್ವತಿ, ದೇಶಿತನ ಎಲ್ಲವೂ ಮುಖ್ಯವಾಗಿ ಎಲ್ಲವನ್ನು ಪ್ರತಿನಿಧಿಸುವ, ಧ್ವನಿಸುವ ಕಾವ್ಯ ಇವತ್ತಿನ ಕಾವ್ಯವಾಗಿದೆ. ಗ್ರಾಮೀಣ ಬದುಕು, ಸಮುದಾಯದ ಸಂಕಟ, ನಗರ ಕೇಂದ್ರಿತ ಬದುಕು, ಸ್ಲಮ್‌ಗಳ ಚಿತ್ರಣ, ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ಅಪಾಯಗಳನ್ನು ಸಹ ಕಾವ್ಯ ಮಾತನಾಡುತ್ತದೆ. ಹಾಗೇ ಸಾಹಿತ್ಯ ಮುಂದುವರಿಕೆಯ ಭಾಗಗಳಾದ ಶಾಹಿರಿ, ಗಜಲ್, ಹೋರಾಟದ ಹಾಡುಗಳು, ಹಾಯ್ಕಗಳು, ಇತರ ಪ್ರಕಾರಗಳ ಕಾವ್ಯರಸ ಹರಿದು ಸಾಮಾಜಿಕ ಚಿಂತನೆಯನ್ನು ಹೊರಚೆಲ್ಲಿರುವುದು ಕಂಡುಬಂದಿದೆ. ಬಹುಕೇಂದ್ರಿತ ನೆಲೆಯೋ ಕಾವ್ಯದ ವ್ಯಾಪ್ತಿಯನ್ನು ವಿಸ್ತರಿಸಿದೆ. ಜಗತ್ತಿನ ಯಾವುದೇ ಮೂಲೆಯಲ್ಲಿ ನಡೆದ ಘಟನೆ, ಹಿಂಸೆ, ಕಣ್ಣೀರು ಎಲ್ಲವೂ ತನ್ನದೆಂದು ಭಾವಿಸಿ ಕಾವ್ಯ ಅಭಿವ್ಯಕ್ತಿಗೊಳ್ಳುತ್ತಿದೆ. ವಚನ ಸಾಹಿತ್ಯ, ದಾಸಸಾಹಿತ್ಯ, ಇಂಗ್ಲಿಷ್ ಸಾಹಿತ್ಯ, ಪಂಪ, ರನ್ನರ ಆಶಯವನ್ನು ಮರು ಜೀವಂತಿಕೆಗೆ ಒಳಪಡಿಸಿ ಕಾವ್ಯ ಅಭಿವ್ಯಕ್ತಗೊಳ್ಳುತ್ತಿರುವುದು ಕಂಡುಬಂದಿದೆ. ಸಮಕಾಲೀನ ಕಾವ್ಯ ಬಹುತ್ವದ ನೆಲೆ ವಿಶೇಷ ಮತ್ತು ವಿಶಿಷ್ಟತೆಯಿಂದ ಕೂಡಿ ಕಾವ್ಯ ಪಯಣವನ್ನು ಮುಂದುವರೆಸಿದೆ.

**ಕೊನೆ ಟಿಪ್ಪಣಿಗಳು**

೧. ಅಮೂರ ಜಿ.ಎಸ್., **ಕೊರಳು ಕೊಳಲು,** ಪುಟ ೨೪.

೨. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೨೭.

೩. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೭.

೪. ಹನುಮಂತಯ್ಯ ಎನ್ಕೆ, **ಮಾಂಸದಂಗಡಿಯ ನವಿಲು,** ಪುಟ ೧೪೬.

೫. ವೀರಣ್ಣ ಮಡಿವಾಳರ, **ನೆಲದ ಕರುಣೆಯ ದನಿ,** ಪುಟ ೩೧.

೬. ಕಾರ್ಪೆಂಟರ್ ವಿ.ಆರ್., **ಕಾರ್ಪೆಂಟರ್ ಪದ್ಯಗಳು,** ಪುಟ ೧.

೭. ಮಮ್ತಾಜ್ ಬೇಗಂ, **ಕಬಂಧ ಬಾಹುಗಳು ಬೇಕಿಲ್ಲ,** ಪುಟ ೭೪.

೮. ಹನುಮಂತಯ್ಯ ಎನ್ಕೆ, **ಮಾಂಸದಂಗಡಿಯ ನವಿಲು,** ಪುಟ ೧೪೨.

೯. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೪.

೧೦. ವಿಠ್ಠಲ ದಳವಾಯಿ, **ಭೋದಿ ನೆರಳಿನ ಹಾದಿ,** ಪುಟ ೧೦.

೧೧. ಲಕ್ಕೂರ ಆನಂದ, **ಬಟವಾಡಿಯಾಗದ ರಸೀತಿ,** ಪುಟ ೯೪.

೧೨. ಅಕ್ಷತಾ ಕೆ.(ಸಂ), **ಮತ್ತೆ ಮತ್ತೆ ಬೇಂದ್ರೆ,** ಪುಟ ೫೨.

೧೩. ಹನುಮಂತಯ್ಯ ಎನ್ಕೆ, **ಮಾಂಸದಂಗಡಿಯ ನವಿಲು,** ಪುಟ ೬೮.

೧೪. ಬಸರಾಜ ಹೃತ್ಸಾಕ್ಷಿ, **ಕಸಬಾರಿಗೆ ಪಾದ,** ಪುಟ ೬೫.

೧೫. ಲಕ್ಕೂರ ಆನಂದ, **ಬಟವಾಡಿಯಾಗದ ರಸೀತಿ,** ಪುಟ ೯೬.

೧೬. ಚಿದಾನಂದ ಸಾಲಿ(ಸಂ), **ಕನ್ನಡ ಗಜಲ್,** ಪುಟ ೯.

೧೭. ಅದೇ.

೧೮. ಅದೇ.

೧೯. ಅದೇ, ಪುಟ ೧೦.

೨೦. ಅದೇ.

೨೧. ಅಲ್ಲಾಗಿರಿರಾಜ, **ನೂರು ಗಜಲ್,** ಪುಟ ೨.

೨೨. ಚಿದಾನಂದ ಸಾಲಿ(ಸಂ), **ಕನ್ನಡ ಗಜಲ್,** ಪುಟ ೨೦೭.

೨೩. ದಾನಣ್ಣ ಸಿ., **ಜೋಡು ಗುಂಡಿಗೆ,** ಪುಟ ೨೪.

೨೪. ಅದೇ ಪುಟ ೩೬.



ಅಧ್ಯಾಯ : ಆರು

# ಇತ್ತೀಚಿನ ಕನ್ನಡ ಕಾವ್ಯ: ಮಹಿಳಾ ಅಸ್ಮಿತೆಯ ನೆಲೆ

೬.೧. ಪ್ರತಿರೋಧ
೬.೨. ಚರಿತ್ರೆ ಮತ್ತು ಪುರಾಣ
೬.೩. ಕೌಟುಂಬಿಕ ಸಮನ್ವಯತೆ
೬.೪. ಆತ್ಮಸಂಗಾತ
೬.೫. ಆಧುನಿಕತೆ ಮತ್ತು ಪರಂಪರೆ

ಅಧ್ಯಾಯ : ಆರು

# ಇತ್ತೀಚಿನ ಕನ್ನಡ ಕಾವ್ಯ : ಮಹಿಳಾ ಅಸ್ಮಿತೆಯ ನೆಲೆ

ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರಾರಂಭದ ಹಂತದಲ್ಲಿ ಮಹಿಳಾ ಸಾಹಿತಿ ಕವಯತ್ರಿಯರ ಹಂತ ಪ್ರಮಾಣ ಕಡಿಮೆಯದ್ದಾಗಿದೆ. ನವೋದಯ ನವ್ಯ ಪ್ರಗತಿಶೀಲದಲ್ಲಿಯೂ ಮಹಿಳೆಯರು ಬರವಣಿಗೆಗೆ ಮುಖಮಾಡಿರುವುದು ಕಡಿಮೆ. ಆದರೆ ನಾಲ್ಕಾರು ದಶಕಗಳಲ್ಲಿ ಮಹಿಳಾ ಸಾಹಿತ್ಯ ಅದರಲ್ಲೂ ವಿಶೇಷವಾಗಿ ಮಹಿಳಾ ಕನ್ನಡ ಕಾವ್ಯ ಒಂದು ಪ್ರಬಲ ಪ್ರವಾಹವಾಗಿ ಬೆಳೆದು ಬಂದಿರುತ್ತದೆ. ೨೧ನೇ ಶತಮಾನದ ಆರಂಭದಲ್ಲಿ ದೊಡ್ಡ ಸಾಧನೆಯಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ಮಹಿಳಾ ಕಾವ್ಯ ತುಂಬಾ ಮಹತ್ವದ ತಿರುವು ಪಡೆದುಕೊಂಡಿತು. ಇತ್ತೀಚಿನ ಮಹಿಳಾ ಕಾವ್ಯ ಹೊಸ ಹೊಸ ನೆಲೆಯಲ್ಲಿ, ಪ್ರತಿಮೆ ರೂಪಿಸುವಲ್ಲಿ, ಆಶಯದ ನೆಲೆಯಲ್ಲಿ ತಂತ್ರಗಾರಿಕೆಯಲ್ಲಿ ಹೊಸ ಪ್ರಯೋಗಗಳನ್ನು ಮಾಡಿ ಸಾಮಾಜಿಕ ಕಾಳಜಿ ಮತ್ತು ಅಸ್ಮಿತೆಯನ್ನು ವ್ಯಕ್ತಪಡಿಸುತ್ತಿರುವುದು ವಿಶೇಷವಾಗಿ ಕಂಡುಬಂದಿದೆ. ಪ್ರಾರಂಭದಲ್ಲಿ ಅನೇಕ ವಿಮರ್ಶಕರು ಮಹಿಳಾ ಸಾಹಿತ್ಯವನ್ನು, ಮಹಿಳಾ ಕಾವ್ಯವನ್ನು ಅಡುಗೆ ಮನೆಯ ಸಾಹಿತ್ಯ ಎಂದು ಟೀಕಿಸಿರುವುದು ಕಂಡುಬಂದಿದ್ದು, ಆದರೆ ಪ್ರಸ್ತುತ ದಿನಮಾನದಲ್ಲಿ ಪ್ರತಿರೋಧ, ಸಾಮಾಜಿಕ ಕಾಳಜಿ, ಮಾನವೀಯ ಮೌಲ್ಯಗಳು ಸಿದ್ಧಾಂತಗಳು, ಚಿಂತನೆಗಳು ಜಾಗ್ರತೆಯನ್ನು ಮೂಡಿಸುವ, ಮಮಕಾರ ವಿಚಾರ, ಮಮತೆಯ, ಸಾಮಾಜಿಕ ಸಮಸ್ಯೆಗಳನ್ನು ಮತ್ತು ಪರಿಹಾರವನ್ನು ಸೂಚಿಸುವ ಸಾಹಿತ್ಯವಾಗಿ ಬೆಳೆಯುತ್ತಿದೆ. ಇಂದು ಕನ್ನಡದಲ್ಲಿ ಮಹಿಳಾ ಕವಿಗಳು ಹೊಸ ಸಂವೇದನೆಯಿಂದ ಬರೆಯುತ್ತಿದ್ದಾರೆ. ಹೊಸ ಜಗತ್ತಿನಲ್ಲಿ ಮಹಿಳೆಗೆ ತೆರೆಯಲ್ಪಡುತ್ತಿರುವ ಅವಕಾಶಗಳೂ, ಅದನ್ನು ತಡೆಯಲು ಪ್ರಯತ್ನಿಸುವ ಸಂಪ್ರದಾಯಿಕ ಪ್ರಯತ್ನಗಳೂ ಇದಕ್ಕೆ ಪರೋಕ್ಷವಾಗಿ ಕಾರಣವಾಗಿವೆ. ದೇಹ, ಕುಟುಂಬ, ಸಮಾಜದ ಬಗ್ಗೆ ಹೊಸ ಒಳನೋಟಗಳನ್ನು ಮಹಿಳಾ ಕಾವ್ಯದಿಂದಲೇ ಬರುತ್ತಿವೆ. ಇಂದಿನ ಸಂದರ್ಭದಲ್ಲಿ ಮಹಿಳಾ ವೈಯಕ್ತಿಕ ಸಂಕಟಗಳು ತಕ್ಷಣ ಸಾರ್ವತ್ರಿಕವಾಗುವ ಶಕ್ತಿ ಪಡೆದಿವೆ.

ಇಂದಿನ ಕನ್ನಡ ಕಾವ್ಯಲೋಕದಲ್ಲಿ ಇಂಥ ಮಹತ್ವದ ಪ್ರಶ್ನೆಗಳನ್ನೆತ್ತಿಕೊಂಡು ಅಪೂರ್ವ ಒಳನೋಟ ಮತ್ತು ಪ್ರಬುದ್ಧತೆಯಿಂದ ಬರೆಯುತ್ತಿರುವುದರಲ್ಲಿ ಜ.ನಾ. ತೇಜಶ್ರೀ. ದು. ಸರಸ್ವತಿ,

ಲಲಿತಾ ಸಿದ್ಧಬಸವಯ್ಯ, ತಾರಿಣಿ ಶುಭದಾಯಿಣಿ, ಸಂಧ್ಯಾದೇವಿ, ರೂಪದ ಹಾಸನ, ಕಾವ್ಯ ಕಡಮೆ. ರೂಪಾ ಕಲ್ಲಿಗನೂರ್, ಪಿ. ಚಂದ್ರಿಕಾ, ಗೀತಾವಸಂತ, ವಿನಯಾ ಒಕ್ಕಂದ ರಶ್ಮಿಹೆಗಡೆ, ಎಚ್.ಎಸ್. ಅನುಪಮಾ, ಸುಧಾ ಚಿದಾನಂದ ಗೌಡ, ಕವಿತಾ ರೈ, ಅಕ್ಷತಾ. ಕೆ., ಡಾ.ಮುಮ್ತಾಜ್ ಬೇಗಂ ಇನ್ನು ಮುಂತಾದ ಅನೇಕ ಕವಯತ್ರಿಯರು ಸಮಕಾಲೀನ ಸಂದರ್ಭದಲ್ಲಿ ಇತ್ತೀಚಿಗೆ ಪ್ರಭಾವಿ ಬರಹಗಾರರಾಗಿದ್ದಾರೆ.

## ೬.೧. ಪ್ರತಿರೋಧ

ಕನ್ನಡದಲ್ಲಿ ಕಳೆದ ಹತ್ತು ವರ್ಷಗಳಲ್ಲಿ ಮಹಿಳೆಯರು ಕಾವ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿಕೊಳ್ಳಲು ತೊಡಗಿದರು. ಈ ಕಡಿಮೆ ಅವಧಿಯಲ್ಲೇ ಇದರಲ್ಲಿ ನಡೆದ ಪ್ರಯೋಗಗಳು, ಸಾಮಾಜಿಕ ಬದಲಾವಣೆಗಳು, ಮಹಿಳೆಯರ ಪಾತ್ರವನ್ನು ಮರು ವ್ಯಾಖ್ಯಾನಕ್ಕೆ ಒಳಪಡಿಸುವಲ್ಲಿ ಕಾವ್ಯ ವಹಿಸಿದ ಪಾತ್ರ ಬಹಳ ಮಹತ್ವದ್ದು. ಪ್ರಸ್ತುತ ಮಹಿಳಾ ಕಾವ್ಯ ಸಾಗಿಬಂದ ಪರಂಪರೆಗಿಂತ ಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಸಮಾಜದಲ್ಲಿ ಹೆಣ್ಣಿಗೆ ಇರುವ ಸ್ಥಾನಮಾನದ ಕುರಿತಾಗಿ ಹೊಸ ಬಗೆಯಲ್ಲಿ ಚಿಂತನೆ ನಡೆಸಿದೆ ಮಹಿಳಾ ಕಾವ್ಯ. ಹೆಣ್ಣನ್ನು ಅಪಮಾನದ ದೃಷ್ಟಿಯಲ್ಲಿ ಕಾಣುವ ಸಾಮಾಜಿಕ ವ್ಯವಸ್ಥೆಗೆ, ಹೆಣ್ಣಾಗಿ ಹುಟ್ಟಿದ್ದು ಪುಣ್ಯ ಎಂದು ಹೆಮ್ಮೆಯಿಂದ ತಮ್ಮ ಕಾವ್ಯಾಭಿವ್ಯಕ್ತಿಯಲ್ಲಿ ಸಾರುತ್ತಿರುವುದು ಕಂಡು ಬಂದಿದೆ. ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳಿಗೆ ಪ್ರತಿರೋಧ ಹೊಡ್ಡಿರುವುದು ಮಹತ್ವದ ಸಂಗತಿ. ಪ್ರತಿಭಟನಾ ರೂಪದಲ್ಲಿ 'ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ' ಪಿ. ಚಂದ್ರಿಕಾರವರು ಎಂದು ದೃಢವಾಗಿ ಸಾರಿದ ಬಗ್ಗೆ ಪ್ರತಿರೋಧದ ರೂಪದಲ್ಲಿ ಕಂಡುಬಂದಿದೆ.

ಜಗತ್ತು ಹೆಣ್ಣನ್ನು ಭಾವಿಸಿಕೊಂಡ ನೆಲೆಯ ವಿರುದ್ಧ ಪ್ರತಿರೋಧ ತಾಳಿ, ಒಂದು ನಿಗೂಢ ಲೋಕ ಕಟ್ಟಿಕೊಂಡು ಅಲ್ಲಿ ವಾಸ್ತವದ ಅಂಚಿನಲ್ಲಿ ಬಾಳುವ ಪರಿಯನ್ನು ಚಿತ್ರಿಸಿದೆ. ಸಾಮಾಜಿಕ ಎಚ್ಚರದ ಹಂಬಲ ಹೊತ್ತು, ಸಮುದಾಯದ ಚಿಂತನೆಯನ್ನು ಮೈಗೂಡಿಸಿಕೊಂಡು ಕವಿತೆಯನ್ನು ಕಟ್ಟುವುದು ಕಾಣುತ್ತೇವೆ. ವಿಕೃತಿ, ಅಪಮಾನ, ಕ್ರೌರ್ಯ, ಲಿಂಗತಾರತಮ್ಯ, ಅತ್ಯಾಚಾರ ಹೀಗೆ ಹಲವು ಸಾಮಾಜಿಕ ಪಿಡುಗುಗಳಾಗಿ ಪ್ರತಿರೋಧಿಸುವ ನೆಲೆಯಲ್ಲಿ ಸಮುದಾಯದ ಹಿತವನ್ನು ಬಯಸುತ್ತದೆ. ನೋವು ಅನೇಕ ಕವಿತೆಗಳ ಸ್ಥಾಯಿಭಾವವಾಗಿದೆ. ಹಾಗೇ ಕೆಲವು ಕವಿತೆಗಳಲ್ಲಿ ಬಹುದೊಡ್ಡ ಜೀವನ ಪ್ರೀತಿ ವ್ಯಕ್ತಪಡಿಸಿರುವುದು ಗಮನಿಸಬಹುದು. ಒಟ್ಟಿನಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಶೋಷಣೆಯ ವಿರುದ್ಧ ಪ್ರತಿರೋಧ ತಾಳಿರುವುದು ಕಂಡು ಬಂದಿದೆ. ಅದಮ್ಯ ಜೀವನ ಪ್ರೀತಿಗಾಗಿ ಹಂಬಲಿಸುವುದು ಸಹ ವ್ಯಕ್ತಗೊಂಡಿದೆ.

ಇಲ್ಲ
ನಿಮ್ಮ ಚರಿತ್ರೆಯ ಒಳಗೆ
ನಾವು ಬರುವುದಿಲ್ಲ
ಕಟ್ಟಿಟ್ಟ ಕೆಡುನುಡಿಗೆ

ಹ್ರಾಯೆಂದು ಮೈಮುರಿದು
ಬೇಕಾದರೆ ಮಲಗಿ ಬಿಡುತ್ತೇವೆ
ಮಡಚಿಟ್ಟುಕೊಳ್ಳುತ್ತೇವೆ ನಮ್ಮ ನಾವೇ
ಬೆಂಕಿ ಪೊಟ್ಟಣಗಳ ಒಳಗೆ.
ಮಸ್ಲೀನ್ ಒಟ್ಟಯ ಹಾಗೆ[೧]

ಸಮಕಾಲೀನ ಮಹಿಳಾ ಕಾವ್ಯ ಇಡೀ ಮನುಕುಲದ ಪುರುಷಕೇಂದ್ರಿತ ಇತಿಹಾಸವನ್ನು ಪ್ರಶ್ನಿಸಿದೆ. ಹಾಗೂ ಅನುಮಾನಿಸಿದೆ. ಪುರುಷರು ಸೃಷ್ಟಿ ಮಾಡಿರುವ ಇತಿಹಾಸದ ಪುಟಗಳಲ್ಲಿ ನ್ಯಾಯಯುತವಾದ ಭಾಗ ನೀವು ನೀಡಿಲ್ಲ ಎಂದು ಪ್ರಶ್ನಿಸಿರುವುದು ಕಂಡುಬಂದಿದೆ. ಹಾಗೇ ಅಸಮಾನತೆಯ, ಶೋಷಣೆಯ ಚರಿತ್ರೆಯ ಪುಟಗಳಲ್ಲಿ ನಾವು ಬರುವುದಿಲ್ಲ ಅಲ್ಲಿ ನಮಗೆ ಹಿಂಸೆ ಇದೆ. ಅವಮಾನವಿದೆ ಹೀಗಾಗಿ ತಮ್ಮದೆ ಆದ ಭಾಷೆ, ತಮ್ಮದೇ ಆದ ಆಶಯ, ತಮ್ಮದೆ ಆದ ನಿಲುವಿನ ಇತಿಹಾಸ ಬರೆಯುತ್ತೇವೆ. ಅದು ಮನುಕುಲದ ಸತ್ಯ ಇತಿಹಾಸವಾಗುತ್ತದೆ ಎಂದು ಅಭಿವ್ಯಕ್ತಿಸಿರುವುದು ತಮ್ಮ ಕಾವ್ಯದ ಸಾಲುಗಳಲ್ಲಿ ಕಂಡು ಬಂದಿದೆ. ನೀವು ಸೃಷ್ಟಿಸಿರುವುದು ದಬ್ಬಾಳಿಕೆಯ ಇತಿಹಾಸ ಪುರುಷ ಕೇಂದ್ರಿತ ಇತಿಹಾಸ ಅಲ್ಲಿ ಮಹಿಳೆಯನ್ನು ಒಂದು ಜೀವಿ ಎಂದು ಸಹ ಪರಿಗಣಿಸಿದೆ ಆಟಿಕೆಯ ಸಾಮಾನುವಿನಂತೆ ಭಾವಿಸಿ ಚಿತ್ರಿಸಿದ್ದೀನಿ. ಅವಳನ್ನು ರಾಜಕೀಯದಿಂದ ದೂರ ಇಟ್ಟು ರಾಜಭಾರ ಮಾಡಿದ್ದೀರಿ, ಸೈನಿಕ ಸ್ಥಾನದಲ್ಲಿ ಅವಳಿಗೆ ಅನ್ಯಾಯವಾಗಿದೆ. ರಾಜ್ಯ ರಹಸ್ಯಗಳಿಗೆ ಕಿವಿಗೊಡದಂತೆ, ಹಾಗೇ ರಾಜ್ಯಭಾರಕ್ಕೆ ಅವಳ ಸಲಹೆ ಕೇಳದೆ ಪುರುಷ ಕೇಂದ್ರಿತ ಚರಿತ್ರೆ ನಿರ್ಮಾಣ ಮಾಡಿದ್ದೀರಿ ಅದಕ್ಕಾಗಿ ನಮ್ಮ ಪ್ರತಿರೋಧವಿದೆ. ಹೀಗಾಗಿ ಪುರುಷ ಪ್ರಧಾನ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ ಎಂದು ಪ್ರತಿರೋಧ ಎತ್ತಿರುವುದು ಕಂಡು ಬಂದಿದೆ. ಕಟ್ಟಿಟ್ಟ ಕೇಡು ಕೊಂಕು ನುಡಿಗಳಿಗೆ ಒಂದು ಪೆಟ್ಟಿಗೆಯಲ್ಲಿ ಬಂಧಿಸಿಡುವಂತೆ, ಬಂಧಿಸಿಟದ್ದೀರಿ, ಉಸಿರಾಡಲು ಬೆಳಕ ಕಾಣಲು ಅಲ್ಲೊಂದು ಇಲ್ಲೊಂದು ವೈವಿಕತೆಯ ಕಥೆಯನ್ನು ಹೇಳಿ ಕಿಂಡಿ ಬಿಟ್ಟು, ನಿಮ್ಮದೆ ಆದ ಚರಿತ್ರೆಯನ್ನು ರೂಪಿಸಿಕೊಂಡಿದ್ದೀರಿ ಎಂದು ಪರಂಪರಾಗತವಾಗಿದೆ ಇತಿಹಾಸವನ್ನು ಸಮಕಾಲೀನ ಮಹಿಳಾ ಕಾವ್ಯ ಪ್ರಶ್ನಿಸಿ ಪ್ರತಿರೋಧ ಒಡ್ಡಿದೆ. ಅಸಮಾನತೆಯ ಚರಿತ್ರೆಯಲ್ಲಿ ಮಹಿಳೆಗೆ ಜಾಗ ಸಮಾನವಾದ ಜಾಗವಿಲ್ಲ ಆದರೂ ತಾವೂ ಬರುತ್ತೇವೆ ಕಾರಣ ಪುರುಷ ಕೇಂದ್ರಿತ ಕೊಳಕನ್ನು ಕಳೆಯಲು, ಪಾಪಕ್ಕೆ ಮುಚ್ಚಿ ಹೋದ ಸತ್ಯಗಳ ಕಾಣಿಸಲು ಎಂಬ ಆಶಯ ವ್ಯಕ್ತಪಡಿಸಿದ್ದಾರೆ.

ಇತಿಹಾಸದ ಪರಂಪರೆಗೆ ಪ್ರತಿರೋಧ ಹೊಡ್ಡಲು ಮಹಿಳಾ ಕಾವ್ಯ ಹೊಸ ಭಾಷೆಯನ್ನು ಬಯಸುತ್ತಿದೆ. ಸದ್ಯ ಇರುವ ಭಾಷೆಗೆ ಪ್ರತಿಭಟಿಸುವ ಶಕ್ತಿ ಇಲ್ಲಿ ಅದಕ್ಕಾಗಿ ಬೇರೊಂದು ಭಾಷೆಯನ್ನು ಸೃಷ್ಟಿಮಾಡಬೇಕಿದೆ ಅದರ ಮೂಲಕ ಪಾರಂಪರಾಗತವಾಗಿ ಬಂದಿರುವ ಲಿಂಗತಾರತಮ್ಯವನ್ನು ಪ್ರತಿಭಟಿಸಲು ಎಂಬ ಆಶಯವನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಕಂಡು ಬಂದಿದೆ. ಜನ ಸಮುದಾಯ ದೊಡ್ಡದಿದ್ದರೂ, ಸಣ್ಣದಿದ್ದರೂ ಅಲ್ಲಿ ಹೆಣ್ಣಿನ ಧ್ವನಿಯನ್ನು

ಹತ್ತಿಕ್ಕಿಲಾಗಿದೆ. ಅಂತಹ ಧ್ವನಿಗೆ ಶಕ್ತಿ ನೀಡಿ ಪ್ರತಿಭಟಿಸುವ ಚಿಂತನವನ್ನು ಕಾವ್ಯ ಬಯಸುವಂತಿದೆ. ಮನೆ ಅಂಗಳಕ್ಕೆ ಹಚ್ಚಹಸಿರಿನ ತೋರಣ ಕಟ್ಟಿ, ಅಂತರಾಳಕ್ಕೆ ಬೆಂಕಿ ಹಚ್ಚಲಾಗುತ್ತಿದೆ. ಎಂಬ ಆತಂಕದ ಮಾತುಗಳನ್ನು ಸಹ ಕಾವ್ಯ ಹೊರ ಹಾಕಿದೆ. ಹೊಸ ಭಾಷೆ ಹೊಸ ಚರಿತ್ರೆಗೆ ತಯಾರಿ ನಡೆದಿದೆ. ಹಾಗೂ ಅದಕ್ಕೆ ಬೇಕಾದ ಹೊಸ ಸಿದ್ಧಾಂತಗಳನ್ನು ಆದರ್ಶಗಳನ್ನು ರೂಪಗಳನ್ನು ಸಹ ಹೊಸ ನೆಲೆಯಲ್ಲಿ ಸೃಷ್ಟಿಸಿಕೊಳ್ಳಬೇಕಾಗಿದೆ ಎಂಬ ಹಂಬಲ ಮಹಿಳಾ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಐಹಿಕ ವಿವರಗಳೇ ಪಾರಮಾರ್ಥಿಕ, ಜಗತ್ತಿಗೆ ದಾಟಿಕೊಳ್ಳುವಂಥ ಭಾಷಾ ಪರಿಪಾಕವೊಂದನ್ನು ಕವಯತ್ರಿಯರಲ್ಲಿ ಸಾಧಿಸಿದ್ದಾರೆ. ಅದ್ಭುತವಾದ ಭಾಷಿಕ ಶಕ್ತಿ ಪಡೆಯಲು ಬಯಸಿ ನಿಂತಿದೆ. ಅದಕ್ಕೆ ತಕ್ಕದಾದ ಹೊಸ ಪ್ರಯತ್ನಗಳು ಇತ್ತೀಚಿನ ಮಹಿಳಾಕಾವ್ಯದಲ್ಲಿ ಕಾಣಬಹುದು. "ಪಾರಮಾರ್ಥಿಕ ಹೊರಳಿನ ಕಾವ್ಯದಲ್ಲಿ ಮಣ್ಣು ಮತ್ತು ಆಕಾಶದ ಆಕರ್ಷಣೆ ಸಾಮಾನ್ಯವಾಗಿ ಮುನ್ನಲೆಗೆ ಬರುತ್ತದೆ. ಈ ನೆಲೆಯಲ್ಲಿ ಹೆಣ್ಣಿನ ಐಹಿಕ ಬದುಕಿನ ಸಂಸಾರಿಕ ಜೀವನಕ್ಕೆ ಇಂಥ ದೃಷ್ಟಿಕೋನ ಬೇರೊಂದು ನೆಲೆಯ ಪಾರಮಾರ್ಥಿಕ ಅರ್ಥವನ್ನು ಪ್ರಧಾನ ಮಾಡಬಲ್ಲದು"[3]. ಮಹಿಳಾ ಕಾವ್ಯದ ಪ್ರಧಾನ ಕಾಳಜಿಯ ಒಳಮನದ ಬಿಸುಪು ಮತ್ತು ತಲ್ಲಣ ಮತ್ತು ಒಲವುಗಳನ್ನು ಗುರುತಿಸಿಕೊಳ್ಳುವ ಪ್ರಯತ್ನ. ಹಾಗೇ ಜೈವಿಕ ಜಗತ್ತು ಸಮಾಜ ಚರಿತ್ರೆ ಇವೆಲ್ಲದರೊಂದಿಗೂ ಹೊಸ ಸಂಬಂಧ ಸೇತುವೆಯನ್ನು ರೂಪಿಸಿಕೊಳ್ಳುವ ಆಶಯ ಹೊಂದಿದೆ. ವ್ಯಕ್ತಿ ಮತ್ತು ಲೋಕಗಳ ನಡುವಿನ ಸಂಬಂಧಗಳ ಸೂಕ್ಷ್ಮಗಳನ್ನು ಕಂಡುಕೋಳ್ಳಲು ಹೆಣ್ತನದ ಕಾವ್ಯದ ಮೂಲಕ ಸಾಧ್ಯವಾಗಿದೆ. ಈ ರೀತಿಯಾಗಿ ಜೀವಪರ ಚಿಂತನೆಯೊಂದಿಗೆ ಶೋಷಣೆಯ ವಿರುದ್ಧ ಪ್ರತಿರೋಧ ತಾಳಿರುವುದು ಮಹಿಳಾ ಕಾವ್ಯದಲ್ಲಿ ಕಂಡುಬಂದಿದೆ. ಈ ಪ್ರತಿರೋಧ ಇಂದಿನದಲ್ಲ ಒಂದು ವೇಳೆಯಲ್ಲಿ ಪ್ರಧಾನವಾಗಿ ಪ್ರತಿಭಟನೆ ನೆಡೆದಿರುವುದು ಕಂಡು ಬಂದಿದೆ. ಇತ್ತೀಚಿನ ದಿನಗಳಲ್ಲಿ ಇದರ ಸ್ವರೂಪ ತುಂಬಾ ಬದಲಾಗಿದೆ. ಸಂವಿಧಾನದ ಆಶಯದಂತೆ ಸಮಾನತೆಯ ಬದುಕಿಗೆ ಧ್ವನಿ ಎತ್ತಿರುವುದು ಕಾಣುತ್ತೇವೆ.

ಸಮಕಾಲೀನ ಮಹಿಳಾ ಕಾವ್ಯದಲ್ಲಿ ಸಾಮಾಜಿಕ ಧಾರ್ಮಿಕ ಪ್ರತಿರೋಧವನ್ನು ಕಾಣಬಹುದಾಗಿದೆ ಸಮಾಜದಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯ ಕುರಿತು ಧರ್ಮ, ಜಾತಿ, ದೇವರು ಎಂಬ ಹೆಸರಲ್ಲಿ ಪುರುಷ ಪ್ರಧಾನ ಮನಸ್ಥಿತಿಯ ವೈದಿಕಶಾಹಿ ಮನೋಭಾವವು ಮಹಿಳೆಯನ್ನು ಶೋಷಿಸುವ ದುರಂತಕ್ಕೆ ಪ್ರತಿರೋಧ ವ್ಯಕ್ತಪಡಿಸಿದರ ಜೊತೆಗೆ ತಾನೂ ಏನು? ಏನು ಅಲ್ಲ ಎಂಬ ಮಹತ್ವದ ನಿಲುವನ್ನು ವ್ಯಕ್ತಪಡಿಸಿರುವುದು ಈ ರೀತಿಯಾದ ದು. ಸರಸ್ವತಿ ಅವರ ಕವನ ಸಂಕಲನದಲ್ಲಿ ವ್ಯಕ್ತಿಗೊಂಡ ಬಗ್ಗೆ ಈ ರೀತಿಯಾದದ್ದು.

ನಾ
ಗಂಡನ ಹೆಂಡತಿಯಲ್ಲ
ಪ್ರಿಯನ ಪ್ರೇಯಸಿಯಲ್ಲ
ಬಸಿರಿನ ತಾಯಲ್ಲ

ಜೀವನಕ್ಕೆ ಜೀವ

ತಬ್ಬಲಿಗಳ ಜೋಗುಳ ತಾನೆಂದು

ಅವಳು

ಜುಳುಜುಳು

ಹರಿದು ಹೋದಂತಾಗಿ

ನವಿಲು ಗರಿ ಬಿಚ್ಚುತ್ತಿತ್ತು.[೩]

ಹೆಣ್ಣನ್ನೂ ನೋಡುವ ಹೊಸ ದೃಷ್ಟಿಕೋನ ಇದಾಗಿದೆ. ಪರಂಪರೆಯುದ್ಧಕ್ಕೂ ಹೆಣ್ಣನ್ನು ಒಂದು ಸ್ವತಂತ್ರ ಜೀವಿಯಾಗಿ ನೋಡಿಲ್ಲ. ಆಕೆ ಅವನ ತಾಯಿ, ಅವನ ಹೆಂಡತಿ, ಅವನ ಪ್ರೇಯಸಿ, ಅವನ ಮಗಳು ಹೀಗೆ ಪುರುಷವಾಚಕ, ಒಬ್ಬ ಪುರುಷನ ಮೂಲಕ ಹೆಣ್ಣನ್ನು ನೋಡುವ, ಪರಿಚಯಿಸಿಕೊಳ್ಳುವ ಪದ್ಧತಿ ಇತ್ತು ಈಗಲು ಇದೆ. ಇದಕ್ಕೆ ಪ್ರತಿರೋಧ ವ್ಯಕ್ತಗೊಂಡಿದ್ದ ಮಹಿಳಾ ಕಾವ್ಯದಲ್ಲಿ, ಇದಕ್ಕೆ ಮೂಲವಾಗಿ ಅನೇಕ ಸಿದ್ಧಾಂತಗಳು, ಸಮಾಜ ಸುಧಾರಕರ ಚಿಂತನೆಗಳ ಪ್ರಭಾವಿತರಾಗಿ, ನಿಸರ್ಗದಲ್ಲಿ ಎಲ್ಲಾ ಜೀವಿಗಳಿಗೂ ಸಮಾನವಾದ ಗೌರವ ಜೀವಿಸುವ ಅವಕಾಶವಿದೆ. ಯಾವ ಜೀವಿ ಶ್ರೇಷ್ಠ ಅಲ್ಲ, ಯಾವ ಜೀವಿ ಕನಿಷ್ಟ ಅಲ್ಲ, ಹೆಣ್ಣನ್ನು ಒಂದು ಜೀವಿಯಾಗಿ ನೋಡುವ ದೃಷ್ಟಿಕೋನ ನೀಡಿದೆ ಮಹಿಳಾ ಕಾವ್ಯ ಅವಳಾಗಿ ಸ್ವತಂತ್ರವಾಗಿ ಅಸ್ಮಿತೆ ಇದೆ. ಆ ನೆಲೆಯಲ್ಲಿ ಅವಳನ್ನು ನೋಡಬೇಕು ಯಾವುದೇ ಇನ್ನೊಂದರ ಮೂಲಕ ನೋಡುವುದು ಅಸಮಾನತೆಯ ಸೂಚಕವಾಗಿದೆ. ಹೀಗೆ ಆಕೆಯನ್ನು ಅಪಮಾನಿಸಿದಂತೆ, ಅಗೌರವಿಸಿದಂತೆ ಹೆಣ್ಣನ್ನು ಒಬ್ಬ ಮನುಷ್ಯಳಾಗಿ ಹೆಣ್ಣಾಗಿ ನೋಡಲು ಜೀವವಾಗಿ ಕಾಣಲು, ಕರೆ ನೀಡಿದಂತಿದೆ. ಹಾಗೆ ಮಹಿಳೆಯಲ್ಲಿ ಮುದುಡಿಕೊಂಡಿದ್ದ ಆಲೋಚನೆಗಳು ಈಗ ಕರಗಿ ಬಿಚ್ಚಿನಿಂತಿವೆ. ನದಿಯಾಗಿ ಹರಿಯುತ್ತೀವೆ. ಎಂಬ ರೂಪಕ ಮಹತ್ವದ ಪಾತ್ರವಹಿಸುತ್ತಿದೆ.

"ಮಹಿಳಾ ಕಾವ್ಯವೆನ್ನುವುದು ಪರಕೀಯ ಭಾಷೆಯನ್ನು ಮುರಿದು ಸ್ವಭಾಷೆಯನ್ನು ಕಟ್ಟುವ ಸಾವಯವ ಪ್ರಯತ್ನ. ಈ ಕಾರಣಕ್ಕಾಗಿಯೇ ಭಾಷೆ ಮತ್ತು ಕಾವ್ಯ ಹೆಣ್ಣಿನ ಮಟ್ಟಿಗೆ ಯಾಕೆ ಭಿನ್ನ? ಯಾಕೆ ಮುಖ್ಯ? ಎನ್ನುವುದು ಪ್ರಶ್ನೆಯೂ ಹೌದು, ಕಾವ್ಯ ಮೀಮಾಂಸೆಯ ಶೋಧವೂ ಹೌದು."[೪] ಇಲ್ಲಿ ಕಾವ್ಯದಲ್ಲಿ ವ್ಯಕ್ತಗೊಳ್ಳುತ್ತಿರುವ ಒಂದು ಸಿದ್ಧ ಮಾದರಿಯ ಕಾವ್ಯಭಾಷೆ ಹೆಣ್ಣಿನ ಸಂವೇದನೆಗಳನ್ನು ಹೊರ ಹಾಕಲು ಶಖ್ಯವಾಗಿಲ್ಲ. ಅದಕ್ಕಾಗಿ ಹೊಸ ಸ್ವ-ಭಾಷೆಯನ್ನು ಪ್ರಯತ್ನ ಕಂಡುಕೊಳ್ಳಬೇಕಾಗಿದೆ.. ಒಂದು ದೇಹಭಾಷೆಯನ್ನು ಸೃಷ್ಟಿಬೇಕಿದೆ ಎಂಬ ಆಶಯದೊಂದಿಗೆ ಹುಡುಕಾಟದ ಹಂಬಲ ವ್ಯಕ್ತವಾಗಿದೆ. ದು. ಸರಸ್ವತಿ ಅವರು ತಬ್ಬಲಿಗಳ ಜೋಗುಳ ಎಂಬ ಕವಿತೆಯಲ್ಲಿ ಬರುವ ಗಂಡು ಹೆಣ್ಣು ನವಿಲುಗಳ ಪ್ರತಿಮೆ ಸರಸ್ವತಿಯವರ ಕಾವ್ಯದ ವಿಕಾಸ ಕ್ರಮವಾಗಿದೆ. ಈ ಲಿಂಗತಾರತಮ್ಯವನ್ನು ಧಿಕ್ಕರಿಸಿ ಜೀವ ಸಂಪಿಗೆಯ ಹೂವನ್ನು ಸೃಷ್ಟಿಸುವ ಬಯಕೆ ಇವರದ್ದಾಗಿದೆ. ಮಹಿಳಾ ಕಾವ್ಯ ಕಟ್ಟಿಕೊಳ್ಳುವ ರೂಪಕದಲ್ಲಿ ಪುರಾಣ, ಚರಿತ್ರೆ, ಮತ್ತು ಜಾನಪದಕ್ಕೆ ಎಡೆ ಇಲ್ಲದಿರುವುದು, ಅಷ್ಟೇ ಅಲ್ಲದೆ ಭಾಷೆಯ ನೆಲೆಯಲ್ಲಿಯೂ ಅವರು

ಪ್ರಾದೇಶಿಕ ಸಾಧ್ಯತೆಗಳನ್ನು ಬಳಸಿಕೊಳ್ಳುವಲ್ಲಿ ಪ್ರತಿಯೊಂದನ್ನು ಕಾಣಬಹುದು. ಪ್ರಶ್ನಿಸಿ, ಧಿಕ್ಕರಿಸಿ ತಿದ್ದಿ ತೀಡಿ ಹೊಸ ಆಶಯದಲ್ಲಿ ಬಳಸಿಕೊಳ್ಳುವುದಾಗಿದೆ.

ಸಮಕಾಲೀನ ಸಂದರ್ಭದಲ್ಲಿ ಜಾಗತೀಕರಣದ ಭಾಗವಾಗಿ ಮತ್ತು ಪರಂಪರೆಯ ನೆರಳಲ್ಲಿ ಮಹಿಳೆಯ ಮೇಲೆ ಆಗುತ್ತಿರುವ ದೌರ್ಜನ್ಯಗಳನ್ನು ಸವಾಲಿನ ರೂಪದಲ್ಲಿ ಸ್ವೀಕರಿಸಿ, ಧಿಕ್ಕರಿಸುವುದನ್ನು ಜೊತೆಗೆ ಪ್ರತಿಭಟಿಸಿ, ಪರಂಪರೆಯನ್ನು ಮುರಿದು ಹೊಸ ಜೀವನಪರ ನೆಲೆಯಲ್ಲಿ ಸಮಾನತೆಗಾಗಿ ಹಂಬಲಿಸುವುದು ಕಾಣುತ್ತೇವೆ. ಇಂದಿನ ಸವಾಲುಗಳಲ್ಲಿ ಕೋಮುವಾದವು ಸಹ ಹೆಣ್ಣಿನ ಮೇಲೆ ತನ್ನ ಕ್ರೂರತೆಯ ಶಾಖ ತಟ್ಟಿಸಿದೆ. ಕೋಮುವಾದದ ಪರಿಣಾಮಗಳು ಪ್ರತ್ಯಕ್ಷ ಮತ್ತು ಪರೋಕ್ಷ ಪರಿಣಾಮಗಳಾಗಿವೆ. ಕೋಮುವಾದವು ಮಹಿಳೆಯರ ಮೇಲೆ ಬೀರುವ ಪರಿಣಾಮವನ್ನು ಗಮನಿಸಿದಾಗ ಕೋಮು ಹಿಂಸೆಯನ್ನು ನಡೆಸಲು ಮಹಿಳೆಯನ್ನು ಒಂದು ಮಾಧ್ಯಮವಾಗಿ ಬಳಸಿಕೊಳ್ಳಲಾಗುತ್ತಿದೆ. ಪುರುಷನಿಗೆ ಸಂಬಂಧಿಸಿದ ವಿಚಾರದಲ್ಲಿ ಅವನ ತಾಯಿ/ಪತ್ನಿ ಸಹೋದರಿ/ಮಗಳು ಹೀಗೆ ಸ್ತ್ರೀಯರ ಕುರಿತು ಹಗುರವಾಗಿ ಮಾತನಾಡುವುದು ಮತ್ತು ದೈಹಿಕ ಹಲ್ಲೆಗಳನ್ನು ನಡೆಸುವುದನ್ನೇ ಮುಖ್ಯ ಅಸ್ತ್ರವಾಗಿಸಿಕೊಳ್ಳಲಾಗಿದೆ. ಇಲ್ಲಿ ಅಮಾಯಕ ಹೆಣ್ಣನ್ನು ಬಲಿಪಶು ಮಾಡಲಾಗುತ್ತಿದೆ. ಇದರ ವಿರುದ್ಧ ಪ್ರತಿರೋಧ ಸಾರಿರುವುದು ಪ್ರಾಚೀನ ಮಹಿಳಾ ಕಾವ್ಯವಾಗಿದೆ. ಪ್ರತಿರೋಧದ ನೆಲೆಗಳನ್ನು ವಿಭಾಗಿಸಿ ನೋಡುವುದೆಂದರೆ ಸಾಮಾಜಿಕ ಪ್ರತಿರೋಧ, ಕೌಟುಂಬಿಕ ಪ್ರತಿರೋಧ, ಧಾರ್ಮಿಕ ಪ್ರತಿರೋಧ, ಶೈಕ್ಷಣಿಕ ಪ್ರತಿರೋಧ, ಸಾಂಸ್ಕೃತಿಕ ಪ್ರತಿರೋಧ ಇನ್ನು ಮುಂತಾದ ನೆಲೆಯಲ್ಲಿ ಅಂದರೆ ಎಲ್ಲಿ ಅಸಮಾನತೆ, ಲಿಂಗತಾರತಮ್ಯ, ಶೋಷಣೆ ಇದೇ ಅಲ್ಲಲ್ಲಿ ಮಹಿಳಾ ಕಾವ್ಯ ಪ್ರತಿರೋಧ ವ್ಯಕ್ತಪಡಿಸಿದೆ. ಯಜಮಾನಿಕೆಯ ಸಂಸ್ಕೃತಿಯ ವಿರುದ್ಧ ಧ್ವನಿ ಎತ್ತಿರುವುದು ಹಾಗೇ ಅದನ್ನು ಧಿಕ್ಕರಿಸಿ ಜೀವ ಸಮಾನತೆಯ ಆಶಯ ಹೊಂದಿದೆ. ಸಾಮಾಜಿಕ ಪ್ರತಿರೋಧವು ಹೆಚ್ಚಾಗಿ ವ್ಯಕ್ತವಾಗಿದೆ. ಇದು ಕೆಲವು ಸಮುದಾಯದಲ್ಲೇ ವಿವಿಧ ರೀತಿಯಲ್ಲಿ ಇದೆ. ನಮ್ಮ ಬಹು ಸಂಸ್ಕೃತಿಯ ನೆಲವಾಗಿರುವುದರಿಂದ ಇಲ್ಲಿ ಹಲವು ಆಯಾಮಗಳು ದೊರೆಯುತ್ತವೆ. ದಲಿತ ಸಮುದಾಯ, ಅಲ್ಪ ಸಂಖ್ಯಾತ ಸಮುದಾಯ, ಮುಖ್ಯ ವಾಹಿನಿಗೆ ಬರದೆ ಇರುವ ಸಮುದಾಯಗಳು, ನಗರ ಕೇಂದ್ರಿತದಲ್ಲಿನ ಸಮುದಾಯಗಳು ಹೀಗೆ ಹಲವು ಸಮುದಾಯಗಳಲ್ಲಿ ಮಹಿಳೆಯ ಶೋಷಣೆ ಒಂದೇ ನೆಲೆಯಲ್ಲಿ ಇಲ್ಲಿ ಹಲವು ಬಗೆಯಲ್ಲಿ ಇದೆ. ಪ್ರಬಲ ಸಮುದಾಯದಲ್ಲೂ ಹೆಣ್ಣನ್ನು ಕೀಳಾಗಿ ಕಾಣುವ ದುರಂತ ಕಾಲಘಟ್ಟದಲ್ಲಿ ಇದ್ದಿವೆ. ಎಂದು ಮಹಿಳಾ ಕಾವ್ಯ ಎಚ್ಚರಿಸುತ್ತಿದೆ. ಸಾಮಾಜಿಕ ಅಪಮಾನಕ್ಕೆ ಗುರಿಯಾದ ದಲಿತ ಸಮುದಾಯದಲ್ಲಿ ಮಹಿಳೆಯ ಪಾಡು ನೆನಸಿಕೊಂಡರೆ ಮಹಿಳೆ ಅನುಭವಿಸುವ ಯಾತನೆ ಅರಿವಾಗುತ್ತದೆ. ಕೌಟುಂಬಿಕ ಸಮಸ್ಯೆಗಳಲ್ಲಿ ಹೆಣ್ಣನ್ನು ಶೋಷಿಸಿ ಅಪಮಾನ ಮಾಡುವ ಕಾಲದ ದುರಂತ ಚಿತ್ರಣ ಕಾವ್ಯ ಮನಮುಟ್ಟುವ ರೀತಿಯಲ್ಲಿ ಆಧುನಿಕ ಭಾಷಾ ಶೈಲಿಯಲ್ಲಿ ವ್ಯಕ್ತಪಡಿಸಿದೆ. ಈ ಹಿಂದೆ ಇದ್ದ ಸಿದ್ಧಮಾದರಿಯನ್ನು ಕಾವ್ಯ ಕಟ್ಟಿನ ಶೈಲಿಯನ್ನು ಮುರಿದು ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಮಹಿಳಾ ಚಿತ್ರಣ ಕಣ್ಣಿಗೆ

ಕಟ್ಟುವ ರೀತಿಯಲ್ಲಿ ಚಿತ್ರಿಸುತ್ತದೆ. ತನ್ನದೆ ಆದ ಹೊಸ ರೂಪಕಗಳನ್ನು ಯಾವುದನ್ನು ಸಮಾಜ ಅಪಮಾನ್ಯ ಮಾಡಿತ್ತೋ ಅಂತ ಪದಗಳನ್ನೇ ರೂಪಕಗಳಾಗಿ ತನ್ನ ಧ್ವನಿಯಾಗಿಸಿಕೊಂಡು ಕಾವ್ಯ ರಚಿಸುವುದು ಸಮಕಾಲೀನ ಮಹಿಳಾ ಕಾವ್ಯದ ಶಕ್ತಿಯಾಗಿದೆ.

ಸೃಜನಶೀಲತೆಯ ಮೂಲಕ ಹೆಣ್ಣಿನ ಅಂತರಂಗದ ತಲ್ಲಣಗಳ ನಿರೂಪಣೆ ಹೊಸ ಜಗತ್ತನ್ನು ಪರಿಚಯಿಸುತ್ತದೆ. ಹಾಗೇ ಕನ್ನಡ ಪ್ರಮುಖ ಧ್ವನಿಗಳಲ್ಲಿ ಇದು ಒಂದಾಗಿದೆ ಎಂದು ಸಾರಿದಂತಿದೆ. ಕವಿತೆಗಳಲ್ಲಿ ತೀವ್ರವಾದ ಭಾವ ಲಹರಿಯಲ್ಲಿ ಪ್ರೀತಿ, ದ್ವೇಷ, ಸಿಟ್ಟು, ಅಸಹಾಯಕತೆ, ಪ್ರತಿರೋಧ, ಧಿಕ್ಕಾರ ಸಮ್ಮತಿ ಹಾಗೇ ಕನಸು ಇವುಗಳನ್ನು ವಿಶೇಷವಾಗಿ ಕಾಣಬಹುದಾಗಿದೆ. ಸಾಂಪ್ರದಾಯಕ ನೆಲೆಯಲ್ಲಿ ನಡೆದುಕೊಂಡು ಬಂದ ಯಜಮಾನಿಕೆಯ ವಿರುದ್ಧ ಪ್ರತಿರೋಧವನ್ನು ತಾಳಿರುವುದು ಕಂಡುಬಂದಿದೆ. ಆ ಯಜಮಾನಿಕೆಯ ನಿಲುವನ್ನು ಮುರಿದು ಸಮಾನತೆಗಾಗಿ ಹಂಬಲಿಸುವುದು ವ್ಯಕ್ತಗೊಂಡಿದೆ.

ಕಾವ್ಯವೆಂದರೆ ಭಾವನೆಯು ಆಲೋಚನೆ ಮತ್ತು ಪದಗಳಲ್ಲಿ ಅನೈಚ್ಛಿಕವಾಗಿ ಸಂಯೋಗ ಗೊಳ್ಳುವುದು ಎಂದು ಹಾಗೇ ಅದು ಎಲ್ಲಾ ಜ್ಞಾನದ ಉಸಿರು ಮತ್ತು ಉತ್ತಮವಾದ ಚೇತನವಾಗಿದೆ. ಇಂತಹ ಚೇತನದಿಂದ ಸಮಕಾಲೀನ ಮಹಿಳಾ ಕಾವ್ಯ ಬಹುಕೇಂದ್ರಿಯ ನೆಲೆಯಲ್ಲಿ ಹೊಸ ಸಂವೇದನೆಯನ್ನು ಹುಟ್ಟುಹಾಕುತ್ತಿದೆ. ಕಾಲದ ಓಟವನ್ನು ತಡೆ ಹಿಡಿಯಲು ಪ್ರತಿರೋಧವನ್ನು ಕುದುರೆಯಾಗಿ ಗಾಳಿಯಾಗಿ ಅಭಿವ್ಯಕ್ತಗೊಳಿಸಿರುವುದು ವಿಶೇಷವಾಗಿದೆ ಅದು ಕವಿತಾ ರೈ ಅವರು ಪದ್ಯದ ಸಾಲುಗಳಾದ

ತಾನು ಕುದುರೆಯಾಗುವು
ಕುದುರೆ ನಾನಾಗುವುದು
ಕಾಲನ ಓಟದಲಿ ನಿಂತು
ಗಾಳಿಯನು ಕರೆದಂತೆ
ಅಲೆ ಎದ್ದು ಕುಸಿದು ಹರಡುವುದು
ಅಂತಃಕರಣದ ಕುದುರೆ
ಕಡಲ ಕುದಿತವ ಕಡೆಗಣಿಸಿ
ಋತವ ಹೊತ್ತು ಓಡುತಿಹುದು
ನೀರೊಳಗಿನ ನೆಲ
ನೆಲದೊಳಗಿನ ನೀರ ಸಾರುತಿಹುದು[೫]

ಮಹಿಳಾ ಅಭಿವ್ಯಕ್ತಿಗೆ ಮನ್ನಣೆ ನೀಡದೆ ಸಮಾಜ ಕಾಲದ ಓಟದಲ್ಲಿ ಸಾಗಿದೆ. ಅಂತಹ ಓಟಕ್ಕೆ ಗಾಳಿಯಾಗಿ, ಕುದುರೆಯಾಗಿ ಅಡ್ಡ ನಿಂತು ಪ್ರತಿರೋಧ ವ್ಯಕ್ತಪಡಿಸಿರುವುದು ಕಂಡುಬಂದಿದೆ. ಕುದುರೆ ತಾನಾಗುವುದು ಗಾಳಿ ಮತ್ತು ಕುದುರೆ ಸಮವಾಗಿ ಓಡುವ ನಿಲುವನ್ನು ಸಾರಿದೆ. ಏಕಮುಖವಾದ ಓಟಕ್ಕೆ ಅಲೆಗಳ ಪ್ರತಿರೋಧದ ಅಲೆಗಳನ್ನು ಎಬ್ಬಿಸಲಾಗಿದೆ ಮಹಿಳೆ ಪ್ರತಿಭಟಿಸಿ

ಅಂತಃಕರಣರದ ಕುದುರೆಯಾಗಿಸಿದ್ದಾರೆ. 'ಕಡಲು ಕುದಿತವ' ಒಂದು ಪುರಷ ಪ್ರಧಾನ ಮನಸ್ಸಿನ ಸೂಚಕವಾಗಿದೆ ಅದಕ್ಕೆ ನೀರೆರೆವ ನೆಲವಾಗಿ, ನೆಲದೊಳಗೆ ನೀರನ್ನು ಸಾಲು ಬಯಸದಂತಿದೆ. ಕವಿತಾ ರೈ ಅವರು ಒಂದು ಕವನದ ಸಾಲು ಒಲೆ ಬದಲಾದರೇನು? ಉರಿ ಬದಲಾಯಿದೆಯೇ? ಎಂಬ ಪ್ರಶ್ನೆಯನ್ನು ಪ್ರಭುತ್ವಕ್ಕೆ ಹಾಕಲಾಗಿದೆ. ಕಾಲ ಯಾವುದಾದರೇನು? ಅದೇ ನೋವು ಸಂಕಟವಾಗಿದೆ. ಇಂದು ಆಧುನಿಕ ಯುಗದಲ್ಲಿ ಮಹಿಳೆಗೆ ಸೂಕ್ತ ಸ್ಥಾನಮಾನ ದೊರೆತಿವೆ ಎಂಬ ಭ್ರಮೆಯನ್ನು ಬಿತ್ತಿವೆ ಮನಸ್ಸುಗಳಿಗೆ ಮುಖ್ಯವಾದ ಪ್ರಶ್ನೆಯನ್ನು ಕೇಳಿದ್ದಾರೆ ಕಾಲ ಬದಲಾದರೆ ಬೀಳುವ ಪೆಟ್ಟು ಬದಲಾಗಿಲ್ಲ. ಶೋಷಣೆಯ ಸ್ವಭಾವ ಬದಲಾಗಿದೆ ಆದರೆ ಅದೇ ಹಿಂಸೆ, ನೋವು, ಅಪಮಾನದ ಒಲೆಯಲ್ಲೇ ಬೇಯಿಸಿಟ್ಟಿವೆ ಎಂದು ಪ್ರತಿರೋಧ ವ್ಯಕ್ತಪಡಿಸಿದ್ದಾರೆ.

ಕವಿತಾ ಅವರು ನೀರನ್ನು ತಾಯಿಯೆಂದೋ, ಗೆಳತಿಯೆಂದೋ, ತಿಳಿದು ಬರೆಯಲು ಸಾಧ್ಯವಿಲ್ಲ. ಅವರಿಗೆ ಅದು ತನನ್ನು ಗುರುತಿಸಿಕೊಳ್ಳುವ ತಾನೇ ಆಗಿರುವ ಸ್ವಪ್ರತೀಕವಾಗಿದೆ. ನೀರತೇರು, ನೀರತೇಜಿ, ನೀರಮಾಡು, ಹಕ್ಕಿಹರಿನ ನೀರು ಮುಂತಾದ ಪದಪುಂಜಗಳು ನೀರನ್ನು ವಾಹನವಾಗಿ ಬಳಸಿಕೊಂಡು ಲೋಕವನ್ನು ಮೀರುವ ಸಾಧ್ಯತೆಯನ್ನು ಹೊಳೆಸುತ್ತದೆ. ಹೆಣ್ಣಿಗೆ ಬೇಕಾಗಿರುವುದು ಕೂಡ ದೈನಿಕ ಲೋಕದ ಸಂಗಡ ತನ್ನದೇ ಆದ ಲೋಕವನ್ನು ಕಂಡುಕೊಳ್ಳುವ ಕಟ್ಟಿಕೊಳ್ಳುವ ಅವಕಾಶ, ಸಮಾಜ ಗಂಡು ಜಂಗಮವಾಗಿ ಮತ್ತು ಹೆಣ್ಣನ್ನು ಸ್ಥಾವರವಾಗಿ ಇರಬೇಕು ಎಂಬ ನಿಯಮವನ್ನು ಮಾಡುತ್ತದೆ. ಹರಿಯುವ ನೀರನ್ನು ಕಟ್ಟಿಹಾಕುವ ತನಗೆ ಬೇಕೆನಿಸಿದ ಕಾಲುವೆಗಳಲ್ಲಿ ಮಾತ್ರ ಚಲಿಸಲು ಬಿಡುವ, ತನಗೆ ಬೇಕೆನಿಸಿದಂತೆ ಬಳಸಿಕೊಳ್ಳುವ ಹುನ್ನಾರ ಹಾಕುತ್ತದೆ. ಈ ಹುನ್ನಾರಿನ ವಿರುದ್ಧ ಧ್ವನಿ ಎತ್ತಿರುವುದು ಇವರ ಕವಿತೆಯಲ್ಲಿ ವ್ಯಕ್ತಗೊಂಡಿದೆ. ಅನಿರ್ಬಂಧಿತವಾದ ಚಲನೆಯ ಬಯಕೆಯಿದೆ. ಒಳಿತನ್ನು ಮಾಡುವುದೂ ಸ್ವಾತಂತ್ರ್ಯವಿದ್ದಾಗ ಮಾತ್ರವೆಂಬ ತಿಳುವಳಿಕೆ ಸಮಕಾಲೀನ ಮಹಿಳಾ ಕಾವ್ಯಕ್ಕೂ ಅದಕ್ಕಾಗಿ ನಿರ್ಬಂಧಿತ ಬಂಧದ ವಿರುದ್ಧ ಪ್ರತಿರೋಧ ತಾಳಿ, ಸ್ವಾತಂತ್ರ್ಯಕ್ಕಾಗಿ ಅಸ್ಮಿತೆಗಾಗಿ ಹೆಜ್ಜೆ ಹಿಡುತ್ತಿರುವುದು ಕಾಣುತ್ತೇವೆ. ಸಂಪ್ರದಾಯ ನಿಯಮಗಳಿಂದ ದೂರಬಂದು ತನಗೆ ಬೇಕಾದ ರೀತಿಯಲ್ಲಿ ಬದುಕನ್ನು ಕಟ್ಟುವ ಸ್ವಾತಂತ್ರವಾಗಿ ಜೀವಿಸುವ, ಯಾವ ಬಂಧನಗಳಿಲ್ಲದೆ ಹಕ್ಕಿಯಂತೆ ಹಾರಲು ಬಯಸಿದ ಕಾವ್ಯವಾಗಿದೆ. ತನಗಿಷ್ಟವಾದ ರೀತಿಯಲ್ಲಿ ಗೆಳೆಯನನ್ನು ಕಂಡುಕೊಳ್ಳುವ ಅವನೊಂದಿಗೆ ಹಂಚಿಕೊಳ್ಳುವ ದಿಕ್ಕು ಇದು ವಾಸ್ತವ ಲೋಕದಲ್ಲಿ ಇರುವ ಜೈವಿಕ ಪುರುಷನನ್ನು ಗುರುತಿಸುವ ಕೆಲಸವಾಗಿದೆ. ಅಂದರೆ ಸಾಮಾಜಿಕ ಪುರುಷನಲ್ಲಿ ದತ್ತವಾಗಿರುವ ಸವಲತ್ತುಗಳು ನಂಜು ಇಳಿದರೆ ಅವನು ಮನುಷ್ಯನಾಗುತ್ತಾನೆ. ಸಂಗತಿಗೆ ತಕ್ಕವನಾಗುತ್ತಾನೆ. ಅದಕ್ಕಾಗಿ ಜೈವಿಕ ಪುರುಷನನ್ನು ಹುಡುಕಲು ಮಹಾಕಾವ್ಯ ಹಂಬಲಿಸುತ್ತಿದೆ.

ಕನ್ನಡ ಕಾವ್ಯಕ್ಕೆ ಹೊಸ ಮಾತನ್ನು ಸೇರಿಸಬಲ್ಲ ಹೊಸ ಜಗತ್ತನ್ನು ತರಬಲ್ಲ ಕನ್ನಡ ಯಜಮಾನಕ್ಕೆ ಹೊಂದುವಂತೆ ಆಧುನಿಕ ಸಂವೇದನೆಗೆ ಮಹಿಳಾ ಕಾವ್ಯ ವೇದಿಕೆಯಾಗಿದೆ. ಸಂಪ್ರದಾಯಸ್ಥ ಮೌಲ್ಯಗಳಾಗಿ ಯಜಮಾನಿಕೆಯ ನಿಲುವಿಗೆ, ಸಾಮಾಜಿಕ ಧಾರ್ಮಿಕ, ಕೌಟಂಭಿಕ

ಪ್ರತಿರೋಧವನ್ನು ವ್ಯಕ್ತಪಡಿಸಿ ತಮ್ಮ ಸ್ವತಂತ್ರ ಅಸಾಧ್ಯತೆಯ ಬದುಕಿಗೆ ಕನಸು ಕಾಣುವುದು ಮತ್ತು ಅದಕ್ಕಾಗಿ ಹೋರಾಟ ನಡೆಸುತ್ತಿರುವುದು ವಿಶೇಷವಾಗಿದೆ. ಕಾವ್ಯ ಭಾಷೆಯಲ್ಲಿ ಹೊಸತನವನ್ನು ಸೃಷ್ಟಿಸಿ ಹೊಸ ಲೋಕ ಪರಿಚಯಿಸುವಂತಿದೆ. ಕಾಣುವುದೆಲ್ಲವನ್ನು, ಹೇಳುವುದೆಲ್ಲವನ್ನು ಒಪ್ಪಿಕೊಳ್ಳದೆ ವೈಚಾರಿಕ ಪ್ರಶ್ನೆಯೊಂದಿಗೆ ಪ್ರಶ್ನಿಸಿ ತನ್ನತನದ ಹುಡುಕಾಟದಲ್ಲಿ ಮಹಿಳಾ ಕಾವ್ಯ ವಿಶೇಷ ಪಾತ್ರವಹಿಸಿದೆ.

### ೬.೨. ಚರಿತ್ರೆ ಮತ್ತು ಪುರಾಣ

ಕನ್ನಡ ಕಾವ್ಯ ಪರಂಪರೆಯಲ್ಲಿ ಮಹಿಳಾ ಕಾವ್ಯ ಇತ್ತೀಚೆಗೆ ಆರಂಭ ಕಂಡರೂ, ವಿಶಿಷ್ಟ ರೀತಿಯಲ್ಲಿ, ಹೊಸ ಪ್ರತಿಮೆಗಳ ಮೂಲಕ ನೆಲಮೂಲ ಸಂಸ್ಕೃತಿಯ ಸಂವೇದನೆಯ ಮೂಲಕ ವಿಶೇಷತೆ ಪಡೆದಿದೆ. ಇತ್ತೀಚಿನ ಮಹಿಳಾ ಕಾವ್ಯದಲ್ಲಿ ಆಳದಲ್ಲಿ ಕೆಲವು ಪರಂಪರೆಯ ಪ್ರೇರಣೆಯ ಅಂಶಗಳು ಕಾಣುತ್ತೇವೆ. ಪುರಾಣದಲ್ಲಿ ಬರುವ ಪಾತ್ರಗಳು ಚರಿತ್ರೆಯಲ್ಲಿ ಬರುವ ಅಂಶಗಳನ್ನು ರೂಪಕಗಳಾಗಿಸಿ ವರ್ತಮಾನಕ್ಕೆ ತಂದು ಕಾವ್ಯ ರಚಿಸುತ್ತಿರುವುದಾಗಿದೆ. ಅದರೊಂದಿಗೆ ಆ ಪಾತ್ರಗಳನ್ನು ಪ್ರಶ್ನಿಸುವ ಮತ್ತು ಮರುಸೃಷ್ಟಿಗೆ ಬೇರೊಂದು ಆಯಾಮದಲ್ಲಿ ನೋಡುವ ಹಾಗೂ ಅದನ್ನು ಧಿಕ್ಕರಿಸುವ ಆಶಯ ಕಾಣುತ್ತೇವೆ. ಪರಂಪರೆಯುದ್ದಕ್ಕೂ ಪುರಾಣದ ಪಾತ್ರಗಳ ಮೂಲಕ, ಮೌಲ್ಯ ಎಂದು ನಿಂದಿಸಿ ಹೆಣ್ಣನ್ನು ಸಾಮಾಜಿಕವಾಗಿ, ಧಾರ್ಮಿಕವಾಗಿ ಶೋಷಿಸುವ ಹುನ್ನಾರವನ್ನು ಇತ್ತೀಚಿನ ಮಹಿಳಾ ಕಾವ್ಯ ಪ್ರಶ್ನಿಸಿದೆ. ಮೌಖಿಕ ಪರಂಪರೆಯಿಂದ ನಡೆದು ಬಂದಿರುವ ಅಮಾನವೀಯ ಅಂಶಗಳಿಗೆ ವೈಚಾರಿಕತೆಯಲ್ಲಿ ಪ್ರಶ್ನಿಸಿ ಮಾನವೀಯತೆಯನ್ನು ಸಾರಿರುವುದು ಕಾಣುತ್ತೇವೆ. ಸ್ತ್ರೀವಾದಿ ಚಿಂತನೆಗಳು ಸ್ತ್ರೀ, ಸ್ತ್ರೀತ್ವ, ಸ್ತ್ರೀವಾದಿ ಈ ಅಂಶಗಳ ಮೂಲಕ ಮಹಿಳೆಗೆ ಆಗುವ ಶೋಷಣೆಯನ್ನು ಚಿತ್ರಿಸಿ, ಅರಿವನ್ನು ಮೂಡಿಸಿ, ಪ್ರತಿಭಟಿಸುವ ಗುಣವನ್ನು ಇಂದಿನ ಕಾವ್ಯ ನೀಡುತ್ತದೆ. "ಸ್ತ್ರೀವಾದವೆನ್ನುವುದು ಈ ನಿಧಾನ ಗತಿಯ ಆದರೆ ಸ್ಥಿರ ನಡೆಯ ಪ್ರಮಾಣ "ಬಲು ದೀರ್ಘವಾದುದು ಇದನ್ನು ಹಲವು ಪ್ರಮೇಯಗಳ ಮೂಲಕ ಗುರುತಿಸಲು ಸಾಧ್ಯವಿದೆ. ಬಹಿಷ್ಕಾರದಿಂದ ಸ್ವೀಕಾರದ ಕಡೆಗಿನ, ಅನಧಿಕೃತತೆಯಿಂದ ಅಧಿಕೃತತೆಯ ಕಡೆಗಿನ ಜ್ಞಾನ ಮೀಮಾಂಸೆಯಿಂದ ಲೋಕಮೀಮಾಂಸೆಯ ಕಡೆಗಿನ ಪ್ರಯಾಣವೆಂದು ಇದನ್ನು ಸ್ಥಾನವಾಗಿ ಗುರುತಿಸಲು ಸಾಧ್ಯವಿದೆ." ಎಂಬ ಮಾತು ಆಶಾದೇವಿಯವರು ಸ್ತ್ರೀವಾದವನ್ನು ನೋಡಿದ ದೃಷ್ಟಿಕೋನವಾಗಿದೆ. ಸ್ತ್ರೀವಾದ ಎನ್ನುವುದು ಒಂದು ರೀತಿಯ ನಿಧಾನಗತಿಯಾದರೂ ಅದು ದೃಢತೆಯನ್ನು ಹೊಂದಿದೆ. ಸ್ತ್ರೀವಾದ ಎಂದರೆ ಲೋಕಜ್ಞಾನ, ಪ್ರತಿಜೀವಿಯ ಜೀವ, ಜೈವಿಕ ಸಮಾನತೆಯ ಗುಣ, ಮಮತೆಯ ಸಾರ ಎಂದು ಕರೆಯಲಾಗಿದೆ. ಈ ಮೂಲಕ ಸ್ತ್ರೀವಾದವನ್ನು ನೋಡುವ ಬಗೆಯಾಗಿದೆ. ಪಿತೃಸಂಸ್ಕೃತಿಯನ್ನು ಆರಂಭದಿಂದಲೇ ಪ್ರಶ್ನಿಸಿ ಸಮಗ್ರತೆಯ ಕಡೆಗೆ ಗಾಂಭೀರ್ಯ ಕಡೆಗೆ ಸಾಗಿರವುದಾಗಿದೆ. ೧೨ನೇ ಶತಮಾನಗಳ ಶರಣೆಯರಲ್ಲಿ ಒಬ್ಬರಾದ ಅಕ್ಕಮಹಾದೇವಿಯನ್ನು ಆದರ್ಶ ಪ್ರಾಯವಾಗಿ ಇಟ್ಟುಕೊಂಡು ಸ್ತ್ರೀವಾದ ನಡೆದಂತಿದೆ. ಅಕ್ಕಮಹಾದೇವಿಯ ವಚನಗಳ ಸಾರ ಮತ್ತು ಆಶಯ ಪ್ರಶ್ನಿಸುವ ಗುಣ ದೃಢತೆಯನ್ನು

ಇಂದಿನ ಸಮಕಾಲೀನ ಕವಯತ್ರಿಯ, ಅನುಸರಿಸುತ್ತಿವೆ ಸಾಹಿತ್ಯಗಳು ಆದರೆ ಅಕ್ಕಮಹಾದೇವಿಯ ಬದುಕಿನ ರೀತಿಗೆ ಮಾತ್ರ ತಕರಾರು ಇದೆ.. ಹಾಗಾದರೆ ಸ್ತ್ರೀವಾದ ಏನನ್ನು ಪ್ರತಿಪಾದಿಸಲು ಹೊರಟಿರುವುದು ಎಂಬ ಪ್ರಶ್ನೆ ಎಂದಾಗುತ್ತದೆ. ಅದು ಶೋಷಿತ ಮಹಿಳೆಯಲ್ಲಿ ಆತ್ಮ ಸೂರ್ಯ ತುಂಬಿ. ಹೆಣ್ಣನ್ನು ಅಪಮಾನ, ಕನಿಷ್ಠ ಎಂದು ನೋಡುವ ಸಮಾಜಕ್ಕೆ ಹೆಣ್ಣನ್ನು ತಾನೂ ಹೆಣ್ಣಾಗಿ ಹುಟ್ಟಿದ್ದಕ್ಕೆ ಹೆಮ್ಮೆ ಪಡಬೇಕು ಎಂಬ ಆಶಯವನ್ನು ರೂಪಿಸಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಚೌಕಟ್ಟನ್ನು ಒಡೆದು, ಅಂದರೆ ಸ್ಥಾಪಿತ ರಚನೆಯನ್ನು ವಿಸರ್ಜಿಸಿ ಸಮಾನತೆಯನ್ನು ಸಾರುವ ಬಯಕೆ ಹೊಂದಿದೆ. ದೇವರ ದಾಸಿಮಯ್ಯನ ವಚನದಂತೆ ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು ನಡುವೆ ಸುಳಿಯುವ ಆತ್ಮ ಹೆಣ್ಣು ಅಲ್ಲ ಗಂಡು ಅಲ್ಲ ಕಾರಣ ರಾಮನಾಥ ಎಂಬ ವಚನದ ಆಶಯವನ್ನು ಸ್ತ್ರೀವಾದಿಗಳು ಮಹಿಳಾ ಕಾವ್ಯ ಬಿತ್ತಲು ಹೊರಡಿದೆ. ಇದರ ಭಾಗವಾಗಿ ವರ್ತಮಾನದ ಸಂಕಟಗಳನ್ನು ಹೇಳುವುದರ ಜೊತೆಗೆ ಅದರ ಬೇರು ಪುರಾತನದಿಂದಲೂ ಬಂದಿದೆ. ಎಂಬ ಸತ್ಯ ಅರಿತು ನಿಂತ ನೆಲದಿಂದಲೆ ಭೂತವನ್ನು ಪ್ರಶ್ನಿಸಿ ವರ್ತಮಾನಕ್ಕೆ ತಂದು ಮರುಸೃಷ್ಟಿಸಿ. ನಂಬಿಕೊಂಡು ಬಂದ ನಂಬಿಕೆಯನ್ನು ಹೊಡೆದು ವೈಚಾರಿಕತೆಯನ್ನು ಸಾರಿರುವುದು ನೋಡುತ್ತೇವೆ. ಅದರಂತೆ ಕೆಲವು ಪಾತಿವ್ರತ್ಯದ ಪಾತ್ರಗಳ ಮೂಲಕ ಹೆಣ್ಣನ್ನು ಶೋಷಣೆ ಮಾಡಲು ಪುರಾಣ ಪರಂಪರೆಯಲ್ಲಿರುವ ಪಾತ್ರಗಳನ್ನು ಮರು ಸೃಷ್ಟಿಸಿರುವುದು ಮಹಿಳಾ ಕಾವ್ಯದಲ್ಲಿ ವ್ಯಕ್ತಗೊಂಡಿದ್ದು ಈ ರೀತಿಯಾಗಿ

ನೀನು ಮರಳಿ ಬರಬಹುದು
ದೀರ್ಘ ಕಾಲದ ನಂತರ
ಆದರೇನು? ಮಾಡುವುದು?
ಈ ಮಜಭೂತ ಮಹಲಿನೊಳಿಗೆ
ಏಕಾಂಗಿ ನಿಂತಿರುವ ನಿನ್ನ
ಆ ಪ್ರೇಯಸಿಗೆ ಆಗಲೇ
ಆವರಿಸಿಕೊಂಡು ಬಿಟ್ಟಿದೆ
ನಿರಂತರ ಮುಪ್ಪು.[೭]

ವಿಭಾ ಅವರು ತಮ್ಮ ಜೀವ ಮಿಡಿತದ ಸದ್ದು ಎಂಬ ಕವನ ಸಂಕಲನದಲ್ಲಿ ಊರ್ಮಿಳೆಯ ಸ್ವಗತ ಎಂಬ ಪದ್ಯದಲ್ಲಿ ಈ ಮೇಲ್ಕಾಣಿಸಿದ ಸಾಲುಗಳನ್ನು ನೋಡುತ್ತೇವೆ. ಈ ಕವಿತೆಯಲ್ಲಿ ಸ್ತ್ರೀವಾದ ಏನನ್ನು ಹೇಳ ಹೊರಟಿದೆ ಎನ್ನುವುದು ಸಮರ್ಥವಾಗಿ ವ್ಯಕ್ತವಾಗಿದೆ ವ್ಯಕ್ತವಾಗಿದೆ ಪುರಾಣದಲ್ಲಿ ಹೇಳಿಕೊಂಡು ಬರುತ್ತಿರುವ 'ಊರ್ಮಿಳೆಯ ಪಾತ್ರ' ಒಂದು ಮುಖ್ಯಯುತವಾದ ಪಾತ್ರವಾಗಿದೆ. ಆದರೆ ಇಂದು ವರ್ತಮಾನದಲ್ಲಿ ಸ್ತ್ರೀಯ ಆಶಯ ವಿರುದ್ಧವಾಗದೆ. ಕಾಯುವಿಕೆಯನ್ನು ಧಿಕ್ಕರಿಸಿದೆ. ಊರ್ಮಿಳೆಯ ಕಾಯವಿಕೆಯನ್ನು ವ್ಯರ್ಥವಾಗಿಸಿ ಅದರ ಫಲವೇನು?

ಎಂಬ ಪ್ರಶ್ನೆ ಎತ್ತಿರುವುದು ಕಾಣುತ್ತೇವೆ. ಪುರುಷನಿಗಾಗಿ ಮಹಿಳೆ ಇದ್ದಾಳೆ. ಅವನಿಗಾಗಿ ಅವಳ ತನ್ನ ಸರ್ವಸ್ವವನ್ನು ಧಾರೆ ಎರೆಯಬೇಕು ಅವಳ ಬಯಕೆ ಬೇಡಿಕೆಗಳಲ್ಲಿವೂ ಪುರುಷನಿಗಾಗಿ ಎಂಬ ಅಂಶವನ್ನು ಸಾರುವ ಪುರಾಣ ಪಾತ್ರಗಳನ್ನು ಒಪ್ಪದೆ ಪರಸ್ಪರ ಸಾಮ್ಯತೆಯನ್ನು ಗಂಡು ಹೆಣ್ಣಾಗಿ, ಹೆಣ್ಣು ಗಂಡಿಗಾಗಿ ಜೀವಿಸುವ ಏಕತೆಯನ್ನು ಸಾರಿದಂತಿದೆ. ಸಮಕಾಲೀನ ಮಿತಿಯೊಳಗೆ ಬಯಕೆ ಬೇಡಿಕೆಗಳನ್ನು ಹೊಂದುವವರಾಗಿದೆ. ಇಲ್ಲಿ ಲಕ್ಷ್ಮಣನ ಹೆಂಡತಿಯಾದ ಊರ್ಮಿಳೆಯ ಕಾಡಿಗೆ ಹೋದ ಲಕ್ಷ್ಮಣನಿಗಾಗಿ ಕಾಯುವುದೇ ತನ್ನ ಗಂಡನನ್ನು ಬಿಟ್ಟು ಬದುಕುವ ಹಿಂಸೆಯನ್ನು ಈ ಪುರುಷ ಪ್ರಧಾನ ವ್ಯವಸ್ಥೆ ಪಾತಿವ್ರತ್ಯದ ಹೆಸರಲ್ಲಿ ಶೋಷಣೆ ಮಾಡುತ್ತಿರುವುದು ಮಹಿಳಾ ಕಾವ್ಯ ಪ್ರಶ್ನಿಸಿದೆ. ಬಹುದಿನಗಳ ನಂತರ ಲಕ್ಷಣ ಬಂದರೇನು ಪ್ರಯೋಜನ ಆಗ ಅವಳ ಯೌವ್ವನ, ಪ್ರೀತಿ, ಬಯಕೆ, ಯಾವುದು ತನ್ನ ಹಿಡಿತದಲ್ಲಿ ಇರುವುದಿಲ್ಲ. ಮುಪ್ಪಾದ ಮೇಲೆ ಆಲಿಂಗನ ಯಾತಕ್ಕೆ 'ಅದಕ್ಕಾಗಿ ಮೌಲ್ಯದ ಹೆಸರಲ್ಲಿ ಪುರಾಣದ ಪಾತ್ರಗಳ ಮಾತುಗಳನ್ನು ಸ್ತ್ರೀ ಪಾತ್ರಗಳ ಸುಮಾರು ಧಿಕ್ಕರಿಸಿ ನನಗೆ ಊರ್ಮಿಳೆಯಾಗುವುದು ಬೇಡ ಒಲುಮೆವೊಂದಿಗೆ ಸಂಗಾತಿಯ ಜೊತೆಯಲ್ಲಿ ಬಾಳುವುದೆ ಮೌಲ್ಯ ಎಂದು ವಿಚಾರವಾದ ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಹೆಣ್ಣಿಗೆ ಬೇಕಾಗಿರುವುದನ್ನು ನೀಡದೆ ರಾಜವೈಭೋಗ, ಸಿಂಹಾಸನ, ಶ್ರೇಷ್ಠತೆ, ಗೌರವ ನೀಡಿದರೇನು ಪ್ರಯೋಜನ. ಇನಿಯನ ಪ್ರೀತಿ ಇಲ್ಲದ ಬಳಿಕ ಎಂದು ಪ್ರಶ್ನಿಸಿ, ಮರು ಚಿಂತನಗೆ ದಾರಿ ಮಾಡಿದಂತಿದೆ ಮಹಿಳಾ ಕಾವ್ಯದ ತಾತ್ವಿಕ ಚಿಂತನೆ, ಅದುವೇ ಸ್ತ್ರೀವಾದದ ನೆಲೆಯಾಗಿದೆ.

ಇದರಂತೆ ಮಹಾಕಾವ್ಯದಲ್ಲಿ ಬರುವ ಪುರಾಣದ ಪಾತ್ರಗಳಾದ ಸೀತೆ, ಊರ್ಮಿಳೆ, ದ್ರೌಪದಿ, ಅಹಲ್ಯೆ, ಗಾಂಧಾರಿ, ಇವರ ಪಾತ್ರಗಳನ್ನು ಶ್ರೇಷ್ಟತೆ ಹೆಸರಲ್ಲಿ ಅವರಿಗೆ ನೀಡಿದ ಅಪಮಾನ ಶೋಷಣೆಯನ್ನು ಮರು ಚಿಂತನೆಗೆ ದಾರಿ ಮಾಡಿಕೊಟ್ಟಿದೆ. ಹಾಗೇ ಆ ಪಾತ್ರಗಳು ತಾವಾಗಲಾರೆವು ಎಂಬ ಉಚ್ಚರಿಕೆಯನ್ನು ನೀಡಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯು ಆ ಪಾತ್ರಗಳ ಮೂಲಕ ಶ್ರೇಷ್ಠತೆಯ ಆಶಯವನ್ನು ನೀಡಿ ಅವರನ್ನು ಅವರಿಗೆ ಗೊತ್ತಾಗದ ರೀತಿಯಲ್ಲಿ ಅಮಾಯಕ ಹೆಣ್ಣು ಮಕ್ಕಳಿಗೆ ನೀಡುವ ಶೋಷಣೆಯನ್ನು ಧಿಕ್ಕರಿಸಿದೆ. ಹಾಗೂ ಅದು ಮರುಕಳಿಸದಂತೆ ವೈಚಾರಿಕ ಚಿಂತನೆಯನ್ನು ಬಿತ್ತುತ್ತದೆ. ಜೀವಪರ ಚಿಂತನೆಗೆ ಹಂಬಲಿಸುತ್ತವೆ. ಗಂಡು ಹೆಣ್ಣು ಜೈವಿಕ ಸಮಾನತೆಗಾಗಿ ಧ್ವನಿ ಎತ್ತಿದೆ ಇಂದಿನ ಮಹಿಳಾ ಕಾವ್ಯ."

"ಮಹಿಳಾ ಕಾವ್ಯದ 'ನಕಾಶೆಯನ್ನು' ಆ ಮೂಲಕ ಮಹಿಳಾ ಕಾವ್ಯ ಪರಂಪರೆಯನ್ನು ಆ ಮೂಲಕ ಕಾವ್ಯಾಭಿವ್ಯಕ್ತಿಯಲ್ಲಿ ಅಸ್ತಿತ್ವ ಮತ್ತು ಅಸ್ಮಿತೆಯ ರಚನೆ ಮತ್ತು ಪುನರ್ ರಚನೆ ಎರಡು ಆಗಿರುವ ಐತಿಹಾಸಿಕ ಪ್ರಕ್ರಿಯೆಯನ್ನು ಗುರುತಿಸುವುದು ಸಮಕಾಲೀನ ಮಹಿಳಾ ಅಧ್ಯಯನದ ಮುಖ್ಯ ಸಂಗತಿಯಾಗಿದೆ"[15] ಹೆಣ್ಣಿನ ಅನುಭವಗಳನ್ನೇ ಗಣನೆಗೆ ತಾರದೆ ಗಂಡಿನ ಅನುಭವಗಳನ್ನು ಮಾನವಾನುಭವಗಳಾಗಿ ಪರಿವರ್ತಿಸುವುದರ ಮೂಲಕವೇ ಅವುಗಳನ್ನು ಮತ್ತೆ

ಪ್ರದರ್ಶನ ಮಾಡುವುದರ ಮೂಲಕ ಮಹಿಳೆಯನ್ನು ಅಮಾನ್ಯ ಮಾಡುವ ಹುನ್ನಾರಿನ ವಿರುದ್ಧ ಧ್ವನಿ ಎತ್ತಿರುವುದು ವ್ಯಕ್ತವಾಗಿದೆ. ಗಂಡಿನ ಅನುಭವಗಳಷ್ಟೇ ಮಾನವನ ಅನುಭವವಲ್ಲ, ಹೆಣ್ಣಿನ ಅನುಭವಗಳು ಸಹ ಮಾನವನುಭವವಾಗಿದೆ. ಎಂದು ಸಾರಿದೆ. ಹೀಗಾಗಿ ಮಹಿಳಾ ಕಾವ್ಯವನ್ನು ಸಂಘಟಿತ ಪ್ರಜ್ಞೆಯ ಉದಯ ಎಂದು ಕರೆಯಬಹುದಾಗಿದೆ. ಕಾವ್ಯದ ಅಪೂರ್ವ ಒಳನೋಟಗಳು. ಸ್ತ್ರೀವಾದಿ ಚಿಂತನೆಯನ್ನು ಸಮರ್ಥಿಸುತ್ತವೆ. ಅವು ರಾಜಕೀಯ ಸಾಮಾಜಿಕ ಕೌಟುಂಬಿಕ ಧಾರ್ಮಿಕತೆಯಲ್ಲಿ ಸ್ವತಂತ್ರ, ಅಸ್ಮಿತೆಯನ್ನು ಬಯಸುತ್ತೇವೆ. ಇದರಂತೆ ಪುರಾಣ ಭಜನೆಯ ಅಂಶವನ್ನು ಮತ್ತೊಬ್ಬ ಕವಿಯತ್ರಿಯರಾದ ರೂಪಶ್ರೀ ಕಲ್ಲಿಗನೂರು ಕವಿತೆಯ ಸಾಲುಗಳಾದ

ನಿದ್ರಿಸಿದ ತೊಟ್ಟಿಲು ಕೂಸಿನ ಬಾಯಲ್ಲಿದ್ದ
ಮೊಲೆ ತೆಗೆದು ಗಂಡಿನ ಜೊಲ್ಲು ಸರಿವ
ಬಾಯಿಗಿಡುತ್ತಾಳೆ ವಟ ವಟ ಕಿರಿ ಪಿರಿಗಳಿಂದ
ಮುಕ್ತಿ ಹೊಂದುವ ತವಕ
ಪುರಾಣದ ಸೀತೆಯಲ್ಲಿದ ಇವಳು
ಸಂಸಾರ ಪೊರೆವ ಯಶೋಧ[೬]

ಧಾರ್ಮಿಕ ನಂಬಿಕೆಯನ್ನು ಬಲವಂತವಾಗಿ ಏರುತ್ತಾ 'ಸ್ತ್ರೀ' ಅಂದರೆ ಸೀತೆಯಾಗಬೇಕು ಎಂಬ ಮೌಲ್ಯವನ್ನು ಬಿತ್ತುತ್ತ. ಸೀತೆಯನ್ನು ಸಾವಿತ್ರಿಯ ನೆಪದಲ್ಲಿ ನೀಡಿದ ಹಿಂಸೆಯನ್ನು ಮರೆ ಮಾಚಿ ಪುರುಷಾಧಿಪತ್ಯ ಸಾರಿದ ಮನಸ್ಥಿತಿಗೆ ಇಂದಿನ ಮಹಿಳೆ ಅದನ್ನು ಧಿಕ್ಕರಿಸಿ ನಾನು ಪುರಾಣದ ಸೀತೆಯಾಗಾಲಾರೆ, ಪುರುಷ ಪ್ರಧಾನ ಮನಸ್ಥಿತಿಯ ಕೈಗೊಂಬೆಯಾಗಲಾರೆ ನಿಮ್ಮ ಗೊಡ್ಡು ಮೌಲ್ಯಮಾಪನಗಳಿಗೆ ನಮ್ಮಲ್ಲಿ ಜಾಗವಿಲ್ಲ ಎಂದಾ ತಾನು ತಾನಾಗಿ ಇರಲು ತನ್ನಂತೆ ಬದುಕಲು ಸಮಾಜವನ್ನು ರೂಪಿಸಬೇಕು ಅಲ್ಲಿ ಯಾವ ಅಸಮಾನತೆ, ಶೋಷಣೆ ಲಿಂಗತಾರತಮ್ಯ ಇರಬಾರದೆಂಬ ನಿಲುವು ವ್ಯಕ್ತಿಗೊಳಿಸುತ್ತಿವೆ. ಮಹಿಳಾ ಕಾವ್ಯ ಗಂಡಿಗಾಗಿಯೇ, ಗಂಡಸಿನ ಸುಖಕ್ಕಾಗಿಯೋ ಹೆಣ್ಣು ಸೃಷ್ಟಿಯಾಗಿರಬೇಕು ಹೆಣ್ಣಿಗೆ ಯಾವ ಸ್ವತಂತ್ರವಿಲ್ಲ ಅವಳು ಪರರ ಸುಖಕ್ಕಾಗಿಯೇ ಜೀವಿಸಿದವಳು ಎಂದು ಸಾರುವ ಪುರಾಣಗಳ ವಿರುದ್ಧ ಆ ಪಾತ್ರಗಳ ವಿರುದ್ಧ ಧ್ವನಿ ಎತ್ತಿರುವುದು ಕಾಣುತ್ತೇವೆ.

ಹೊಸ ಯುಗದ ಅನುಭವ ವಿಚಾರಗಳ ಮೂಲಕ ಪುರಾಣ ಪಾತ್ರಗಳನ್ನು ವಿಮರ್ಶಿಸಿ ಅವುಗಳಿಗೆ ಮರು ಜೀವ ನೀಡುವ ಮತ್ತು ತಾವು ತಾವಾಗಿಯೇ ಇರುವ ಸಾಧ್ಯತೆಯ ಕುರಿತು ಮಹಿಳಾಕಾವ್ಯ ಮಾತಾಡುತ್ತಿದೆ. ವರ್ತಮಾನದ ವೈವಿಧ್ಯಗಳನ್ನು ಕೆಣಕುವ ರೀತಿಯಲ್ಲಿ ಪಾರಂಪರಿಕವಾಗಿ ಕಾಣಬಂದಿರುವ ಅಮಾನವೀಯ ಅಂಶಗಳ ಕುರಿತು ವ್ಯಂಗ್ಯವಾಗಿ ಮಾಡಿದ್ದಾರೆ. ನಾನು ಸೀತೆಯಾಗಲಾರೆ, ಊರ್ಮಿಳೆಯಂತೆ ನಾನಲ್ಲಿ. ನಾನು ಹೆಣ್ಣಾಗಿದ್ದಕ್ಕೆ ಹೆಮ್ಮೆಪಡುತ್ತೇನೆ.

ಎಂಬ ಮಾತುಗಳು ಮಹಿಳಾ ಕಾವ್ಯದ ಮೂಲಕ ಹೊರಬಂದಿವೆ. ಪುರಾಣ ಚಿತ್ರಿಸುವಂತಹ ಹೆಣ್ಣಿನ ಸ್ಥಾನಮಾನಗಳು ಬೇರೆ ವಾಸ್ತವದ ನೆಲೆಯಲ್ಲಿ ಹೆಣ್ಣು ಅನುಭವಿಸುವ ಸಂಕಟಗಳು ಬೇರೆ, ಹೆಂಡತಿಯಾಗಿ, ಮಗಳಾಗಿ ಹೆಣ್ಣು ಬದುಕುವ ನಿಟ್ಟನಲ್ಲಿ ತಾನೂ ತಾನಾಗಿ ಹೆಣ್ಣು-ಹೆಣ್ಣಾಗಿ ಬದಕುವುದನ್ನು ಮರೆತ್ತಿದ್ದಾಳೆ. ಆಕೆಯ ಸ್ವತಂತ್ರ ಬದುಕನ್ನು ಈ ವ್ಯವಸ್ಥೆ ಕಸಿದುಕೊಂಡಿದೆ ಎಂಬ ಆತಂಕವನ್ನು ವ್ಯಕ್ತಪಡಿಸಿದೆ. ಪಾತ್ರಗಳನ್ನು ಅಷ್ಟೇ ಪ್ರಶ್ನಿಸಿದ ಅಂದಿನ ಆಕೆಯ ಅಸಹತೆಯ ಕುರಿತು ಅನುಕಂಪ ವ್ಯಕ್ತಪಡಿಸುತ್ತಾ ಆ ಅಸಮಾನತೆಗೆ ಕೋಪ ತಾಳಿದೆ ಕಾವ್ಯ ಪರಂಪರೆಯಲ್ಲಿ ಮಹಿಳಾ ಕಾವ್ಯವೆಂದರೆ ಅಡುಗೆ ಮನೆಯ ಕಾವ್ಯ ತಿಳಿನೀರಕಾವ್ಯ ಎಂದು ಹೇಳುವ ವಿಮರ್ಶಕರಿಗೆ ತಕ್ಕ ಉತ್ತರವಾಗಿ ಇರಿಯ ಮುಚ್ಚಿಸುವ ರೀತಿಯಲ್ಲಿ ಇಂದು ಮಹಾಕಾವ್ಯ ಅಭಿವ್ಯಕ್ತಗೊಳ್ಳುತ್ತದೆ. ದೇಶದ ಸಮಸ್ಯೆಗಳ ಕುರಿತು, ಸಮಕಾಲೀನ ಸಮಸ್ಯೆಗಳ ಕುರಿತು, ಹೆಣ್ಣಿನ ಸಂಕಟದ ಕುರಿತು, ಜಾಗತೀಕ ಸಮಸ್ಯೆ, ಶಿಕ್ಷಣ, ಪ್ರೀತಿ, ಮಾನವೀಯ ಮುಖ್ಯಗಳ ಕುರಿತಂತೆ ಕಾವ್ಯ ಅಭಿವ್ಯಕ್ತಗೊಳ್ಳುತ್ತದೆ. ಅದರೊಂದಿಗೆ ಸಾಮಾಜಿಕ ಸಮಾನತೆ, ಹೇಳಬಯಸುತ್ತಿದೆ. ಆ ನಿಟ್ಟನಲ್ಲಿ ತನ್ನ ಅಸ್ತಿತ್ವವನ್ನು ಕಾಣಗೊಳ್ಳುತ್ತದೆ. ಕಾವ್ಯಾಭಿವ್ಯಕ್ತಿಗಳಲ್ಲಿ ರೂಪಗೊಳ್ಳುವ ಪ್ರತಿಭೆ ಸ್ವರೂಪದಲ್ಲಿ ಸ್ವತಂತ್ರವನ್ನು ಹೊಂದಿದೆ. ಇಂಥಹದ್ದಾ ಕಾವ್ಯದ ರೂಪಕ ಎಂದು ಹೇಳಿಕೊಂಡು ಬಂದ ಪರಂಪರೆಗೆ ನಿರ್ದಿಷ್ಟವಾಗಿ ಸಮಕಾಲೀನ ತಲ್ಲಣಗಳಿಗೆ ಆ ರೂಪಕ ಸರಿಯಾದದ್ದಲ್ಲಿ ಎರಡು ತೀರ್ಮಾನ, ಸಂಪ್ರದಾಯ ರೂಪಕಗಳನ್ನು ದೂರ ಇಟ್ಟು ಯಾವ 'ಅಸ್ಥಿರ' ಎಂದು ಹೇಳಿಕೊಂಡು ಬರಬೇಕಾಗಿತ್ತೋ ಅಂತಹವುಗಳನ್ನು ಕಾವ್ಯರೂಪಕಗಳಾಗಿ ಬಳಸಿ ಕಾವ್ಯರಚನೆ ಮಾಡಿದ ಕೀರ್ತಿ ಮಹಿಳಾಕಾವ್ಯಕ್ಕೆ ಸಲ್ಲುತ್ತದೆ. ಯೋನಿ, ಸ್ತನ, ಮೊಲೆ, ಸೊಂಟ ಹೀಗೆ ಮಹಿಳೆ ತನ್ನ ದೇಹದ ಭಾಗಗಳನ್ನೇ ರೂಪಕಗಳಾಗಿಸಿರುವುದು ವಿಶಿಷ್ಟವಾಗಿದೆ, ಹೊಸಬಗೆಯ ಆಶಯವನ್ನು ಮುಂದಿಟ್ಟುಕೊಂಡು ಕಾವ್ಯ ಕಟ್ಟುವ ಹಿನ್ನೆಲೆಯಲ್ಲೇ ತಂತ್ರವನ್ನು ಮುರಿದು ಕಟ್ಟಲಾಗಿದೆ.

ಸಮಕಾಲೀನ ಮಹಿಳಾ ಕಾವ್ಯ ಪುರಾಣವನ್ನು ಪ್ರಶ್ನಿಸುವ ರೀತಿಯಲ್ಲೇ ಇತಿಹಾಸ ಚರಿತ್ರೆಯನ್ನು ಸಹ ಪ್ರಶ್ನಿಸುತ್ತಿದೆ. ಪುರಾಣದಲ್ಲಿ ಯಾವ ರೀತಿಯಾಗಿ ಮಹಿಳೆಯನ್ನು ಅಮಾನ್ಯ ಮಾಡಲಾಗಿದೆಯೇ ಅದೇ ರೀತಿ ಚರಿತ್ರೆಯ ಪಾತ್ರದಲ್ಲಿಯೂ ಮಹಿಳೆಯನ್ನು ಅಮಾನ್ಯಮಾಡುವ ಬಗೆಯನ್ನು ಚಿತ್ರಿಸಿದೆ.

ಬರೆದ ಚರಿತ್ರೆ ಹೀಗೆ ಮಗಳೇ
ಅಲ್ಲಿ
ಸಂಬಂಧವಿಲ್ಲ ಅನುಬಂಧವಿಲ್ಲ
ಕರುಣೆಯಿಲ್ಲ ಕಾರಣವಿಲ್ಲ
ಕೆಂಚಮ್ಮ ನಂಜಯ್ಯನವರಿಗೆ ಜಾಗವಿಲ್ಲ

ಕಡಲ ಸೇರಿದ ಮಳೆಹನಿಯ ದನಿಯು
ಮಾತಾಗಿ ದಾಖಾಲಾಗುವುದಿಲ್ಲ[೧೦]

ಇಲ್ಲಿ ಕವಯಿತ್ರಿ ಚರಿತ್ರೆಯನ್ನು ಮರುವ್ಯಾಖ್ಯಾನ, ಮರು ವಿಶ್ಲೇಷಣೆ ಮಾಡಿರುವುದು ಕಾಣುತ್ತೇವೆ. ಚರಿತ್ರೆ ಎಂದರೆ ಅದು ಏಕರೂಪಕ ಚರಿತ್ರೆಯಾಗಿದೆ. ಆ ಚರಿತ್ರೆಯ ಪುಟಗಳಲ್ಲಿ ಪ್ರಭುತ್ವದ ರಾಜರು, ಮಂತ್ರಿಗಳ ಆಡಳಿತ ದರ್ಪ ಇದೆ. ಅಲ್ಲಿ ಸಮಾನ ಧ್ವನಿಗೆ ಅವಕಾಶವಿಲ್ಲ. ಗಂಡಿಗೆ ಸಿಕ್ಕಜಾಗ ಹೆಣ್ಣಿಗೆ ಸಿಕ್ಕಿಲ್ಲ ಹೀಗಾಗಿ ನಮಗೆ ನಿಮ್ಮ ಚರಿತ್ರೆಯಲ್ಲಿ ಜಾಗವಿಲ್ಲ ಎಂಬ ಪಿ. ಚಂದ್ರಿಕಾ ಅವರ ಮಾತಿಗೆ ಸಾಕ್ಷಿಯಾದಂತಿದೆ. ಇಂದಿನ ಮಹಿಳಾಕಾವ್ಯ ಚರಿತ್ರೆಯನ್ನು ಪ್ರಶ್ನಿಸುತ್ತದೆ. ಚರಿತ್ರೆಯನ್ನು ಹೊಸ ಲೇಖನಿಯಿಂದ ಬರೆಯಲು ಮುಂದಾಗಲು ಹೊರತಂದಿದೆ. ತಾವೂ ಬರೆವ ಚರಿತ್ರೆಯಲ್ಲಿ ಸಮಾಜ ಸಮಾನತೆ ಒಳಗೊಂಡಿರುತ್ತದೆ. ಪ್ರತಿಯೊಂದು ಧ್ವನಿ ಭಾಗವಿದೆ. ಮಮತೆ ವಾತ್ಸಲ್ಯ ಪ್ರೀತಿ, ಕರುಣೆಗಳ ಭಾವವಿದೆ ಆದರೆ ಸದ್ಯ ಇರುವ ಚರಿತ್ರೆಯಲ್ಲ ಎಂದು ಸಾರುತ್ತಿದೆ ಮಹಿಳಾಕಾವ್ಯ ಸದ್ಯ ನಾವೆಲ್ಲಾ ಓದುವ ಚರಿತ್ರೆ ಅದು ಚರಿತ್ರೆಯಲ್ಲ ಅದು ಕೇವಲ ರಾಜ–ಮಂತ್ರಿಯರ ಚರಿತ್ರೆ, ಯುದ್ಧ ಹಿಂಸೆಯ ಚರಿತ್ರೆ, ಗೋರಿಗಳು, ಭೂತಗಳು ಹಾಡುವ ಚರಿತ್ರೆ, ವೀರಗಲ್ಲು ಮಾಸ್ತಿಗಲ್ಲು ರಕ್ತದಿಂದ ಬರೆದ ಚರಿತ್ರೆಯಾಗಿದೆ. ನಿನ್ನೆಯ ಸುಳ್ಳುಗಳ ಸಂತೆಯಾಗಿದೆ ಪುರುಷ ಪ್ರಭಾವ ಚರಿತ್ರೆ ಎಂದಂತಿದೆ. ಆ ಚರಿತ್ರೆಯಲ್ಲಿ ಮಣ್ಣು ನೆತ್ತರನ್ನು ಕಡಿದಿದೆ. ಶಸ್ತ್ರಗಳ ಆಕ್ರಮಣವಿದೆ. ಬಿರುದು, ಸಿಂಹಾಸನ ಅಂಬಾರಿ, ಅಂತಃಪುರದ ಕಾವ್ಯ ದಾಖಲಾಗಿದೆ. ಸೆರೆ ಸಿಕ್ಕವನನ್ನು ಅಮಾನವೀಯಗೊಳಿಸಿ. ಆಕ್ರಮಣ ನೀತಿಯನ್ನು ಹೊಂದಿರುವ ಪತ್ರಗಳಿವೆ. ಆದರೆ ನಾವು ಬರೆದ ಚರಿತ್ರೆಯಲ್ಲಿ ಇವ್ಯಾವುಗಳಿಗೆ ಜಾಗವಿಲ್ಲ, ಹೂವಿನಿಂದ, ಮಳೆಯಿಂದ, ಗರಿಕೆಯಿಂದ ಚರಿತ್ರೆ ಬರೆಯುತ್ತೇವೆ ಎಂಬ ಆಶಯ ಧ್ವನಿಯು ವ್ಯಕ್ತಪಡಿಸಿರುವುದು ಕಾಣುತ್ತೇವೆ. ಹೇಳಿಕೊಂಡು ಬರುತ್ತಿರುವ ಚರಿತ್ರೆಯಲ್ಲಿ ಅಮಾಯಕ, ಸಾಮಾನ್ಯ ಹೆಣ್ಣಿಗೆ ಜಾಗವಿಲ್ಲ ಅವಳ ನೋವಿಗೆ ಮಿಡಿದಿರುವುದು ಕಂಡಿಲ್ಲ. ಸಂಭಾಷಣೆಯ ರೀತಿಯಲ್ಲಿ ಪ್ರಶ್ನೆ ಉತ್ತರದ ಮಾದರಿಯಲ್ಲಿ ಕಾವ್ಯ ಸಾಗುತ್ತಿದೆ. ಅಮ್ಮ ಮಗಳು ಸಂಭಾಷಣೆ ಕಾವ್ಯವಾಗಿಸಿರುವುದು ವಿಶೇಷವಾಗಿದೆ. ಇಲ್ಲಿ ಮಗಳು ತಾಯಿಗೆ ಚರಿತ್ರೆಯ ಎಂದರೇನು ಎಂಬ ಪ್ರಶ್ನೆ ಹಾಕುತ್ತಾಳೆ. ತಾಯಿ ಚರಿತ್ರೆಯ ಒಳಗೊಂಡಿರುವ ಹಿಂಸೆ, ಯುದ್ಧ ರಾಜಮಂತ್ರಿ, ಅಸಮಾನತೆ ಹೀಗೆ ವರ್ಣಿಸುತ್ತಾ ಇಂಥ ಚರಿತ್ರೆಯನ್ನು ಧಿಕ್ಕರಿಸಿ ಹೊಸದೊಂದು ಮನುಷ್ಯತ್ವದ ಚರಿತ್ರೆ ಬರೆಯೋಣ, ಸದ್ಯ ಇರುವ ಚರಿತ್ರೆ ರಕ್ತದಿಂದ ಬರೆದ ಚರಿತ್ರೆಯಾಗಿದೆ. ನಾವು ಹೊಸ ಚರಿತ್ರೆಯನ್ನು ಪ್ರೀತಿಯಿಂದ ಮನುಷ್ಯತ್ವದಿಂದ ಬರೆಯೋಣ ಎಂದು ಹೇಳಲಾಗಿದೆ. ಆ ಚರಿತ್ರೆಯಲ್ಲಿ ಕೆಂಚಮ್ಮ ಮಾಚಮ್ಮರಂತ ಸಾಮಾನ್ಯ ಹೆಣ್ಣುಗಳಿಗೆ ಜಾಗವಿಲ್ಲ. ಅವರ ನೋವಿನ್ನು ದಾಖಲಾಗಿಲ್ಲ. ಕೇವಲ ರಾಜ–ಮಂತ್ರಿ ಯುದ್ಧದ ಕಥೆ ಸಾರುವ ಚರಿತ್ರೆ ಚರಿತ್ರೆಯೇ ಅಲ್ಲ ಎಂದು ಮಹಿಳಾ ಕಾವ್ಯ ಕೂಗಿ ಹೇಳಿದಂತಿದೆ. ಮಹಿಳಾ ಕಾವ್ಯದಲ್ಲಿ ಬರುವ ರೂಪಕಗಳು ಎಲ್ಲವೂ ಚರಿತ್ರೆಯನ್ನು ಪ್ರಶ್ನಿಸಿ ಮರು ಸೃಷ್ಟಿಸುವ ರೀತಿಯಲ್ಲಿವೆ ಹೀಗಾಗಿ ಅಲ್ಲಿ ಬರುವ ಪಾತ್ರಗಳನ್ನು ಸಹ

ಬೇರೊಂದು ನೆಲೆಯಲ್ಲಿ ನೋಡಲಾಗಿದೆ. ಬುದ್ಧ, ಬಸವ, ಗಾಂಧಿಯನ್ನು ಕಥೆಯಲ್ಲಿ ನಿಲ್ಲಿಸಿ ಪ್ರಶ್ನಿಸಲಾಗಿದೆ.

ಕವಿ ಮಾನವಪರ ಆಗಿದ್ದರಷ್ಟೇ ಅಲ್ಲದೇ ಜೀವಪರವೂ ಇರಬೇಕು, ಬುದ್ಧನ ಜೀವಕಾರುಣ್ಯವೆಂದರೆ ಈ ನೆಲದ ಮನುಷ್ಯರಿಗಷ್ಟೇ ಸಕಲಜೀವ ರಾಶಿಗಳಿಗೂ ಸೇರಿದೆ. ಅಂತಹ ಜೀವಕಾರುಣ್ಯತೆ ಮಹಿಳಾಕಾವ್ಯದಲ್ಲಿ ವ್ಯಕ್ತಗೊಂಡಿದೆ. ಚರಿತ್ರೆಯ ಪುಟಗಳಲ್ಲಿ ದಾಖಲಾಗುತ್ತಿರುವ ರಾಮನನ್ನು ಸಹ ಪ್ರಶ್ನಿಸಿದ್ದಾರೆ. ರಾಮ ಸ್ತ್ರೀವಿರೋಧಿ ಆಕೆಯನ್ನು ಪಾವಿತ್ರತೆಯ ಹೊಸರಲ್ಲಿ ಕಾಡಿಗೆ ಕಳುಹಿಸುತ್ತಾನೆ. ಅಲ್ಲಿ ಆಕೆ ಪಡುವ ಸಂಕಟಕ್ಕೆ ಮಹಾಕಾವ್ಯ ಧಿಕ್ಕಾರ ವ್ಯಕ್ತಪಡಿಸಿದೆ. ರಾಮನು ಎಷ್ಟೇ ಸಮರ್ಥಿಸಿದರೂ ಅದು ಜೀವಪರ ಕಾಳಜಿಗೆ ವಿರುದ್ಧವಾದ ನಿಲುವು ಎಂದು ಸಾರಿದ. ಹೆಣ್ಣನ್ನು ಅನುಮಾನಿಸುವ ಸಾಮಾಜಿಕ ದೃಷ್ಟಿಕೋನಕ್ಕೆ ಸಮಾನತೆಯನ್ನು ನೀಡದ ರಾಮ ದೇವರಾಗಲು ಸಾಧ್ಯವಿಲ್ಲ, ಇದು ಸ್ತ್ರೀವಾದಿ ಚಿಂತನೆಯ ಮೂಲವಾಗದೆ ವೈಯಕ್ತಿಕತೆ ಮತ್ತು ಸಾಮಾಜಿಕತೆಗಳನ್ನು ಒಂದಾಗಿ ಹಿಡಿಯುವ ಮೂಲಕ ಹೊಸ ಹೆಜ್ಜೆಯಂತಿದೆ, ಸಾಮಾಜಿಕತೆಯ ಹೆಸರಲ್ಲಿ ಸೋಪಜ್ಞತೆಯನ್ನು ಬಿಟ್ಟು ಕೊಡದ ವೈಯಕ್ತಿಕತೆ ಮತ್ತು ವೈಯಕ್ತಿಕತೆ ಹೆಸರಲ್ಲಿ ಸಾಮಾಜಿಕ ಸತ್ಯಗಳಿಗೆ ಕುರುಡಾಗದ ಸಾಮಾಜಿಕ ಕಳಕಳಿ ಎರಡನ್ನು ಒಟ್ಟಿಗೆ ಸಾಧ್ಯವಾಗಿಸಿಕೊಳ್ಳುವುದು ಸಾರ್ಥಕ ಸ್ವಭಾವಶೀಲತೆ, ಇಂಥ ಸ್ವಭಾವ ಶೀಲ ಮಹಿಳಾಕಾವ್ಯದಲ್ಲಿ ಕಾಣುತ್ತೇವೆ. ಅಂದು ಚರಿತ್ರೆಯಲ್ಲಿ ದಾಖಲಾದ ವಿಷಯವನ್ನು ವರ್ತಮಾನಕ್ಕೆ ತಂದು ವರ್ತಮಾನದ ಘಟನೆಯನ್ನು ಚರಿತ್ರೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ಕಾವ್ಯ ಕಟ್ಟುವ ರೀತಿ ಸೋಗಸಾಗಿದೆ. ಕಟ್ಟುವ ಸಂದರ್ಭದಲ್ಲಿ ಚರಿತ್ರೆಯನ್ನು, ಪುರಾಣವನ್ನು ಯಥಾ ಪ್ರಕಾರ ಒಪ್ಪಿಕೊಳ್ಳದೆ ಮರುಚಿಂತನೆಗೆ ದಾರಿ ಮಾಡಿಕೊಡಲು ಸಾಧ್ಯಗೊಳಿಸಿದೆ.

> ಕ್ಷಮಿಸಿ ಬಿಡು ಪ್ರಭುವೇ
> ನಾವು ಅವರಂತಲ್ಲವೇ ಅಲ್ಲ.
> ನಾವು ಹೀಗೆಯೇ ನೋವು ಹಾಡುತ್ತೇವೆ
> ಆಟವಾಡದೆಯೂ ಜೀವಂತವಿರುತ್ತೇವೆ
> ಚರಿತ್ರೆಯಾಗದೆಯೂ ವರ್ತಮಾನದಲ್ಲಿರುತ್ತೇವೆ![೧೧]

ರೂಪಾ ಹಾಸನರ ಕವಿತೆಯ ಸಾಲುಗಳು ಚರಿತ್ರೆಯನ್ನು ಧಿಕ್ಕರಿಸುತ್ತವೆ. ನಾವು ಅವರಂತೆ ಚರಿತ್ರೆಯಾಗುವುದಿಲ್ಲ ಸದಾ ವರ್ತಮಾನವಾಗಿರುತ್ತೇವೆ. ಚರಿತ್ರೆಯ ಚದುರಂಗಾಟಕ್ಕೆ ನಾವು ಬಲಿಯಾಗುವುದಿಲ್ಲ ಹಿಂದೆ ಬಲಿಯಾದ ಜೀವಗಳಿಂದ ಪಾಠ ಕಲಿತಿದ್ದೇವೆ. ಇಂದು ಬಲಿಯಾಗದೆ ಪ್ರತಿಭಟಿಸಿ ನಿಲ್ಲುವ ಮನೋಧೈರ್ಯ ನಮ್ಮದಾಗಿದೆ ಎಂದು ಹೇಳುತ್ತಾರೆ. ಕ್ಷಮಿಸಿಬಿಡು ದೇವರೆ ನಾವು ಅವರಂತೆ ಆಗುವುದಿಲ್ಲ ನಮಗೆ ಆಟವಾಡಲು ಬರುವುದಿಲ್ಲ ಆಟದ ನಿಯಮಗಳಲ್ಲಿ ಏಕಕೇಂದ್ರಿತ ನಿಯಮಗಳು ಅವು ಜೀವವಿರೋಧಿ ನಿಯಮಗಳು ಅಂತ ನಿಯಮಗಳಿಗೆ ನಮ್ಮ ತಿರಸ್ಕಾರವಿದೆ. ಚರಿತ್ರೆಯಲ್ಲಿ ರಾಜ ರಾಣಿ ಕುದುರೆ, ಒಂಟೆ, ಆನೆ, ಪರಾತಿ, ಹಿಂಡುಕಟ್ಟಿ ಸದಾ

ಯುದ್ಧ ಯುದ್ಧ ಅವರಿವರನ್ನು ಕೊಂದು ಈ ನೆಲ ರಕ್ತದಿಂದ ಕೂಡಿದೆ. ಅವರಿವರನ್ನು ಕೊಂದು ತಿಂದು ಗೆದ್ದವರು ಕೂಗು ಸೋತವರ ಅಳು ಇವು ಯಾವುದು ಬೇಡ ನಮಗೆ, ತಂತ್ರಕ್ಕೆ ಪ್ರತಿತಂತ್ರ ಮಾಡಲಾರೆವು ದುರಾಲೋಚನೆಗಳ ಷಡ್ಯಂತ್ರ ಕುಟಿಲೋಪಾಯಗಳ ಮಂತ್ರ ಬೇಡವೇ ಬೇಡ ನಮಗೆ ಯುದ್ಧ ಸಾವು ಸಾವುನೋವಿನ ಚರಿತ್ರೆ ಬೇಡವೇ ಬೇಡ ಎಂದಿದ್ದಾರೆ. ಏಕ ಮುಖವಾದ ಚಿಂತನೆಯ ಚರಿತ್ರೆ ಹೆಣ್ಣಿನ ಧ್ವನಿಗೆ ಬಯಕೆಗೆ ಜಾಗವಿರದ ಚರಿತ್ರೆ ಬೇಡ ಎಲ್ಲ ಅವರವರದೇ ಆದ ಚರಿತ್ರೆ ನಮಗೆ ಬೇಕಿಲ್ಲ ನಮಗೆ ನಮ್ಮಷ್ಟಕ್ಕೆ ನಮ್ಮೆದೆಯ ನೋವು ಹಾಡಲು ಬಿಟ್ಟುಬಿಡಿ, ಚದುರಂಗದಾಟಕ್ಕೆ ನಮ್ಮನ್ನು ಎಳೆಯಬೇಡಿ ಎಂದು ನೋವಿನ ಕೂಗನ್ನು ಕೂಗಿದಂತಿದೆ. ಆಟವಾಡದೇ ಇತಿಹಾಸ ದಾಖಲಾಗಿಲ್ಲ. ನೋವುಗಳನ್ನು ಸಮತೂಕ ಮಾಡುವ ತಕ್ಕಡಿಯೇ ಇಲ್ಲ ಇಡಿ ಚರಿತ್ರೆಗೆ ಅಲ್ಲ ಒಂಟಿ ದಾರಿ ಇದೆ ಆ ದಾರಿಗೆ ನಮ್ಮನ್ನು ಕರೆದೊಯ್ಯಬೇಡಿ, ನಮ್ಮನ್ನು ನಮ್ಮವರ ಜಾಗಗಳಿಲ್ಲಿ ಬಿಟ್ಟುಬಿಡಿ, ನಿಮ್ಮ ಚರಿತ್ರೆ ನಿಮಗಿರಲಿ ಎಂದು ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಮಹಿಳಾಕಾವ್ಯ ಪ್ರತಿರೋಧವನ್ನು ಅಂತರ್ಗತಗೊಳ್ಳಿಸಿಕೊಂಡು ಮುಖ್ಯ ವ್ಯವಸ್ಥೆ ಹಾಗೂ ಮಾನದಂಡಗಳನ್ನು ಪ್ರತಿರೋಧಿಸುತ್ತಾ, ದಮಾನಿತ ಸಮುದಾಯದ ಪರ ವಕಾಲತ್ತು ವಹಿಸಿರುವುದು ಇದರ ಲಕ್ಷಣದಂತಿದೆ. ಪ್ರತಿರೋಧದ ಮೂಲ ಗುರಿ ಅಲ್ಪಸಂಖ್ಯಾತರಿಗೆ ಶೋಷಿತರಿಗೆ ಸ್ವಾಯತ್ತತೆಯನ್ನು ಒದಗಿಸಿಕೊಡುವುದಾಗಿದೆ.

ಸ್ವಶೋಧ ಎಂದು ಕರೆಯಬಹುದಾದ ಆತ್ಮಶೋಧದ ಮೂಲಕ ತನ್ನ ಎದುರಾಳಿಯನ್ನು ಎದುರಿಸಲು ಅಗತ್ಯವಾದ ಹುಡುಕಾಟ ಹೊಂದಿದಂತಿದೆ, ಲೈಂಗಿಕತೆ ಮತ್ತು ಲಿಂಗತ್ವದ ಕಾರ್ಯ ಮಾದರಿಗಳೇ ಮಹಿಳಾ ಬರವಣಿಗೆಯನ್ನು 'ವಿಭಿನ್ನ ಕಾಲದಲ್ಲಿ, ವಿಭಿನ್ನ ಮಾದರಿಗಳಾಗಿ ರೂಪಿಸಿದೆ.' ಈ ರೀತಿ ಮಾದರಿಗಳನ್ನು ರೂಪಿಸಿರುವುದರ ಹಿನ್ನೆಲೆಯಲ್ಲೇ ಪುರಾಣವನ್ನು ಚರಿತ್ರೆಯನ್ನು ಪ್ರಶ್ನಿಸಿ ವಾಸ್ತವದ ನೆಲೆಯಲ್ಲಿ ವೈಚಾರಿಕತೆಯ ನೆಲೆಯನ್ನು ಕಂಡುಕೊಂಡಿದೆ ಸ್ತ್ರೀವಾದಿ ಪ್ರಜ್ಞೆಯ ಅದ್ಭುತ ಶಕ್ತಿ ಅಡಗಿರುವುದೇ ಅದು ನಮ್ಮ ಜಡ್ಡು ಗಟ್ಟಿದ ಏಕಘನಾಕೃತಿಯ ಚಿಂತನೆಗಳನ್ನು ಹಠಾತ್ತಾಗಿ ಬುಡಮೇಲು ಮಾಡಿ ನಮ್ಮನ್ನು ಬೆಚ್ಚಿ ಬೀಳಿಸುವುದರಲ್ಲಿ ಸ್ತ್ರೀವಾದಿ ಕಾವ್ಯದ ವಿಶಿಷ್ಟತೆ ಹೊಂದಿದೆ. ಗಂಡು ಹೆಣ್ಣನ್ನು ಸಮ ತೂಕದಲ್ಲಿ ಕಾಣಬಯಸಿರುವುದಾಗಿದೆ. ಈ ಆಶಯದ ಹಿನ್ನೆಲೆಯಲ್ಲಿ ಚರಿತ್ರೆಯ ಪ್ರತಿಗಳಲ್ಲಿ ಪುರಾಣದಲ್ಲಿ ಹೆಣ್ಣನ್ನು ನೋಡಿದ ಹಾಗೂ ಚಿತ್ರಿಸಿದ ಬಗೆಯನ್ನು ಮರುಚಿಂತನೆಗೆ ಎಡೆ ಮಾಡಿದೆ. ಹಾಗೆ ಎಲ್ಲವನ್ನು ಪ್ರಶ್ನಿಸಿ ಅದಕ್ಕೆ ತಕ್ಕದಾದ ಎತ್ತರ ಕಂಡುಕೊಳ್ಳುವ ದಾರಿ ಹುಡುಕುತ್ತಿದೆ. ಸ್ತ್ರೀವಾದಿ ಉತ್ತಮ ನಿಲುವುಗಳನ್ನು ಕಾವ್ಯ ಒಳಗೊಂಡ ಅಭಿವ್ಯಕ್ತಿಸುತ್ತಿದೆ. ಹಾಗೆ ಕಾವ್ಯದಲ್ಲಿ ವ್ಯಕ್ತವಾಗುವ ಆಶಯಗಳ ಮೂಲಕ ಸ್ತ್ರೀವಾದಿ ಚಿಂತನೆಗಳು ಗಟ್ಟಿಗೊಳುತ್ತೀವೆ.

ಸಮಕಾಲೀನ ಮಹಿಳಾಕಾವ್ಯದಲ್ಲಿ ಬಾಲ್ಯ, ನೋವು, ನೆನಪು, ಬಯಕೆ, ಆಶಯ, ಚಿಂತನೆಯನ್ನು ಒಳಗೊಂಡಿರುವುದರ ಜೊತೆಗೆ ಪುರಾಣ ಮತ್ತು ಚರಿತ್ರೆಯನ್ನು ಸಹ ಒಳಗೊಂಡಿದೆ.

ಅಲ್ಲಿ ಬರುವ ಅಂಶಗಳು ಪಾತ್ರಗಳು ಸನ್ನಿವೇಶಗಳನ್ನು ಸಮಕಾಲೀನಕರಿಸಿ ನೋಡುವ ಪ್ರಶ್ನಿಸುವ ಬಗ್ಗೆ ವಿಶೇಷವಾಗಿದೆ. ಅನೇಕ ಕವಿತೆಗಳಲ್ಲಿ ಅನುಭವಗಳನ್ನು ಹೊಸದಾಗಿ ಕಟ್ಟಿಕೊಡುವ ಪ್ರಯತ್ನ ಕಾಣುತ್ತೇವೆ. ಹೆಣ್ತನದ ಸ್ಪರ್ಶ, ಹೆಣ್ಣು ನೋಟಕ್ಕೆ ಹೊಸ ಅರ್ಥ ಹೊಸರೂಪ ನೀಡಿದ್ದ ಈ ಸಮಕಾಲೀನ ಮಹಿಳಾ ಕಾವ್ಯವಾಗಿದೆ. ಕುಟುಂಬದ ಮೂಲಕ ಜಗತ್ತನ್ನು ನೋಡುವ ಆ ಕನ್ನಡಿಯಲ್ಲಿ ತನ್ನತನವೆಂದು ಹುಡುಕಿಕೊಳ್ಳುವ ಮಹಿಳೆ ಬರವಣಿಗೆಯ ವಿನ್ಯಾವಿಲ್ಲಿ ವ್ಯಕ್ತ ಹೊಂಡಿರುವುದು ವಿಶೇಷ. ಕುಟುಂಬದ ಮೂಲಕ ಕಾಲದ ಚಿಂತನೆಯನ್ನು ಗುರುತಿಸುವ ಕ್ರಮ ಹಾಗೂ ತಲೆಮಾರುಗಳಲ್ಲಿ ಸರಿಯಾದ ಕಾಲದ ಕುರುಹುಗಳನ್ನು ಹುಡುಕುವುದಾಗಿದೆ. ಹೊಸ ತಲೆಮಾರಿನ ಅನೇಕ ಮಹಿಳಾ ಕವಯತ್ರಿಯರು ಉತ್ಕಟ ಕಾಯುವಿಕೆ ಕಾವ್ಯದ ಆಂತರಿಕ ಬಲವನ್ನು ಹೆಚ್ಚಿಸಿದಂತೆಯೇ ಬಹಿರಂಗದ ಚಲನೆಯನ್ನು ಮಿಂಚಿಸುವಂಥಹದ್ದು ಹೆಣ್ಣು ಪಡುವ ಪಾಡುಗಳಲ್ಲಿ ಹಾಡಾಗಿ ಬೆರಳ ತುದಿಗಿಳಿದು ಬಂದಂತಿದೆ ಮಹಿಳಾ ಕಾವ್ಯ.

### ೬.೩. ಕೌಟುಂಬಿಕ ಸಮನ್ವಯತೆ

ಸಮಕಾಲೀನ ಮಹಿಳಾ ಕಾವ್ಯ ಸಾಮಾಜಿಕ ಚಿಂತನೆಯ ಜೊತೆಗೆ ಕೌಟುಂಬಿಕ ಸಮಾನತೆಯ ಮತ್ತು ಸಮನ್ವಯತೆಯ ಕುರಿತಾಗಿಯೂ ಧ್ವನಿಯನ್ನು ವ್ಯಕ್ತಪಡಿಸಿದೆ. ಸಮಾಜದಲ್ಲಿ ನಡೆಯುತ್ತಿರುವ ಅಸಮಾನತೆ, ಲಿಂಗ ತಾರತಮ್ಯ, ಭ್ರಷ್ಟಾಚಾರ ಇನ್ನಿತರ ಸಾಮಾಜಿಕ ಸಮಸ್ಯೆಗಳು ಕುರಿತು ಬೆಳಕನ್ನು ನೀಡುವುದರ ಜೊತೆಗೆ ಕುಟುಂಬದಲ್ಲಿ ಹೆಣ್ಣು ಅನುಭವಿಸುವ ಸಂಕಟಗಳನ್ನು ಚಿತ್ರಿಸಿ ಅವುಗಳ ವಿರುದ್ಧ ಧ್ವನಿ ಎತ್ತಿ ಕುಟುಂಬದಲ್ಲಿ ಗಂಡು ಹೆಣ್ಣು, ಹೇಗೆ ಸಮವಾಗಿ ಬದುಕಲುಬಹುದೆಂಬ ಹಾಗೂ ಹೆಣ್ಣಿನ ಸ್ಥಾನಮಾನದ ಕುರಿತು ಕಾವ್ಯದಲ್ಲಿ ವ್ಯಕ್ತಪಡಿಸಿರುವುದು ಕಂಡುಬಂದಿದೆ. ಕುಟುಂಬದಲ್ಲಿ ಹೆಣ್ಣಿನ ಜವಾಬ್ದಾರಿಯನ್ನು ಗಂಡಿನ ಜವಾಬ್ದಾರಿಯೊಂದಿಗೆ ಹೋಲಿಕೆ ಮಾಡಿ ಅವರವರ ಮಹತ್ವ ತಿಳಿಸಿದೆ. ಗಂಡು ಮನೆಯ ಹೊರಗಡೆ ಬಂದು ಜವಾಬ್ದಾರಿ ವಹಿಸಿದರೆ ಮನೆಯ ಒಳಗೆ ಹೆಣ್ಣು ತಾಯಿಯಾಗಿ, ಹೆಂಡತಿಯಾಗಿ, ಮಕ್ಕಳಾಗಿ ಯಾವ ರೀತಿಯಾದ ಸ್ಥಾನಮಾನ ಹೊಂದಿದ್ದಾಳೆ ಹಾಗೂ ತನ್ನ ಜವಾಬ್ದಾರಿಯನ್ನು ಕುಟುಂಬದಲ್ಲಿ ಹೇಗೆ ನಿರ್ವಹಿಸುತ್ತಾಳೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಆಧುನಿಕ ಶಿಕ್ಷಣ, ಪರಿಸರದ ಭಾಗವಾಗಿ ಅನೇಕ ಕುಟುಂಬಗಳು ಛಿದ್ರಗೊಂಡು ಮಾನವೀಯ ಮೌಲ್ಯಗಳನ್ನು ಕಳೆದುಕೊಂಡು ಬೀದಿಗೆ ಬಂದು ನಿಲ್ಲುತ್ತವೆ. ಇಂಥ ಸ್ಥಿತಿಯಲ್ಲೇ ಕೌಟುಂಬಿಕ ಸಮಸ್ಯೆಯನ್ನು ಬೀದಿಗೆ ಬಾರದಂತೆ ಹೆಣ್ಣು ಯಾವ ರೀತಿಯ ಜವಾಬ್ದಾರಿಯುತ ಸ್ಥಾನ ಹೊಂದಿದೆ ಕೌಟುಂಬಿಕ ಘನತೆಯನ್ನು ಕಾಪಾಡಲಾಗಿದೆ ಕಾಪಾಡುವಲ್ಲಿ ಆಕೆಯ ಪಾಲು ಎಂಥಹದ್ದು ಎಂದು ಸಮಕಾಲೀನ ಕಾವ್ಯ ಒಳಗೊಂಡಿದೆ.

ಇಡೀ ಕುಟುಂಬದ ಜವಾಬ್ದಾರಿಯನ್ನು ಒಬ್ಬ ಹೆಣ್ಣು ಮಗಳು ವಹಿಸಿರುತ್ತಾಳೆ. ತನ್ನ ಮಕ್ಕಳ ಲಾಲನೆ ಪಾಲನೆ, ವಿದ್ಯಾಭ್ಯಾಸ, ಸಾಮಾಜಿಕ ಸ್ಥಾನಮಾನಕ್ಕೆ ತಕ್ಕದಾದ ರೀತಿಯೇ

ಬೆಳೆಸುವ ಜವಾಬ್ದಾರಿಯನ್ನು ಹೆಣ್ಣು ಯಾವ ರೀತಿಯಲ್ಲಿ ಹೊಂದಿರುತ್ತಾಳೆ ಆಕೆಯ ಕೆಲಸ ಮಹತ್ವದಾಗಿದೆ. ಸಾಮಾಜಿಕ ನಿಂದನೆಗೆ ಗುರಿಯಾದರೂ ಮನಸ್ಸಿಗೆ ಹಚ್ಚಿಕೊಳ್ಳದೆ ತನ್ನ ಕಳ್ಳುಬಳ್ಳಿಯನ್ನು ಸಾಕಲು ಸಲುಹಲು ಮುಂದಾಗುತ್ತಾಳೆ ಅಂತಹ ತ್ಯಾಗಕ್ಕೆ ಸ್ತ್ರೀ ಅಂದರೆ ಅಷ್ಟೇ ಸಾಕೇ? ಎನ್ನುವ ಜಿ.ಎಸ್.ಎಸ್. ಅವರ ಸಾಲು ಅರ್ಥಪೂರ್ಣವಾಗಿದೆ. ಹೆಣ್ಣಿನ ಕುರಿತಾಗಿ ಅವರು ನೀಡಿದ ಅಂಶಗಳ ಆಕೆಯ ಘನತೆಯನ್ನು ಹೆಚ್ಚಿಸಲು ಅವಳ ತ್ಯಾಗ ಮತ್ತು ಪಾತ್ರದ ಬಗ್ಗೆ ಗೌರವ ತರುತ್ತವೆ. ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಕೇಳಿ ಬರುತ್ತಿರುವ ಮಾತು ಸ್ತ್ರೀ-ಪ್ರಕೃತಿಯೆಂದು, ಗಂಡಸು ಪುರುಷನೆಂದು ಸ್ತ್ರೀ-ಪುರುಷ ಕಲ್ಪನೆ ವೇದಕಾಲದಿಂದಲೂ ಹೇಳುತ್ತಾ ಬಂದ ಒಪ್ಪುವ ವಿಚಾರವಾಗಿದೆ. ತಾಳ್ಮೆಯಲ್ಲಿ ಸ್ತ್ರೀ ಭೂತಾಯಿಯೆಂದೂ, ಭೂಮಿ ತುತ್ತನ್ನು ನೀಡುವವಳೆಂದೂ ಹೇಳುತ್ತಾ ಆಕೆಗೆ ನಿರಂತರ ದೌರ್ಜನ್ಯ ನೀಡುತ್ತಾ ಬಂದಿರುವ ವ್ಯವಸ್ಥೆಗೆ ಮಮಕಾರವಿಲ್ಲ ಎಂಬುದು ವಾಸ್ತವದ ಸಂಗತಿ. ಒಟ್ಟಾರೆ ಜೀವದಾತೆಯಾದ ಹೆಣ್ಣನ್ನು ಹಾಡಿ ಹರಸಿ ಆಕೆಯನ್ನು ಸಮಾಧಾನ ಮಾಡುವ ದುರಂತ ಚಿತ್ರಣವಾದ ಇದ್ಯಾವುದನ್ನು ಗಮನಿಸದೆ ಹೆಣ್ಣು ಹೆಣ್ಣಾಗಿ ಜೀವಿಸಿ ತನ್ನತನಕ್ಕಾಗಿ ತನ್ನ ಕೆಲಸಕ್ಕಾಗಿ ಬಯಸಿ ಬಾಳುವುದು ಮಹತ್ವದ ಸಂಗತಿ.

ತನ್ನನೇ ಮೀರುತ್ತದೆ
ಸದ್ದಿಲ್ಲದೇ ಸೃಷ್ಟಿ
ತನ್ನೊಳಗಿನಿಂದಲೇ ಕಾಣುತ್ತದೆ
ಮುರಿದು ಕಟ್ಟುವ ಹಾದಿ
ಮಿತಿಯೊಳಗೇ ಇದ್ದೂ
ಅದನೇ ಗೆದ್ದು
ಬರೆಯುತ್ತದೆ ಹೊಸ ಮುನ್ನಡಿ.[೧೩]

ಕವಯಿತ್ರಿ ಈ ಪದ್ಯದಲ್ಲಿ ಹೊಸ ಮುನ್ನುಡಿ ಬರೆಯುವ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಅದು ತನ್ನನೇ ತಾನು ಮೀರುವುದಾಗಿದೆ. ಸದ್ದಿಲ್ಲದೆ ತನ್ನೊಳಗೆ ತಾನು ಹೊಸ ಲೋಕ ಹೊಸ ಚಿಂತನೆಯನ್ನು ಕಂಡು ಹೊಸ ಬೆಳಕಿಗಾಗಿ ಹಾತೊರೆಯುತ್ತಿದೆ. ಅದು ಮುರಿದು ಕಟ್ಟುವ ಪರಿಯಾಗಿದೆ ಪರಂಪರೆಯುದ್ಧಕ್ಕೂ ಬಂದಿರುವ ಸಂಪ್ರದಾಯಗಳನ್ನು ಧಿಕ್ಕರಿಸಿ ಅವುಗಳನ್ನು ಹೊಸ ರೀತಿಯಲ್ಲಿ ಜೀವಪರ ಕಾಳಜಿಯ ಹಿನ್ನೆಲೆಯಲ್ಲಿ ಸಾಮಾಜಿಕ ಸಮಾನತೆಯ ಆಶಯದಲ್ಲಿ ಕೌಟುಂಬಿಕ ಸಮನ್ವಯತೆಯ ಹಂಬಲದಲ್ಲಿ ಹೊಸ ಮುನ್ನುಡಿ ಬರೆಯುತ್ತಿದೆ. ಮಿತಿಯೊಳಗೆ ಇದ್ದು ಅಲ್ಲೇ ತನ್ನತನದ ಹುಟುಕಾಟ ಪ್ರಾರಂಭಿಸಿ ನಿಂತ ನೆಲದಲ್ಲೇ ಹೊಸದಾದ ಹೂವೊಂದನ್ನು ಅರಳಿಸಿ ಹೊಸ ಬದುಕು ಸಾಗಿಸಲು ತೊಡಗಿದಂತಿದೆ. ಅಮ್ಮನ ತ್ಯಾಗವನ್ನು ಸ್ಪಂದಿಸುತ್ತಾ, ಅಕ್ಕ-ತಂಗಿಯರದ ವಾತ್ಸಲ್ಯ, ಹೆಂಡತಿಯ ಪ್ರೀತಿ ಇವುಗಳಿಗೆ ಒಂದು ಮಿತಿಯೊಳಗೆ ಇದ್ದವು ಅವುಗಳನ್ನು ಕಟ್ಟುವ ಕೊರೆಯನ್ನು ಕಿತ್ತೆಸೆದು ಸದ್ದಿಲ್ಲದೆ ಹೊಸ ಹಾಡೊಂದನ್ನು ಹಾಡಲು

ಬಯಸಿರುವುದು ಸಮಕಾಲೀನ ಮಹಿಳಾ ಕಾವ್ಯದಲ್ಲಿ ವ್ಯಕ್ತವಾಗಿದೆ. ಅಮ್ಮನಾಗುವುದೆಂದರೆ, ಒಲೆಯ ಮೇಲೆ ಬೆಣ್ಣೆ ಕಾಯಿಸಿ ಪಾತ್ರೆ ಇಟ್ಟು ಅಡುಗೆ ಮಾಡಿ ಉಪಚರಿಸುವುದಲ್ಲಿ ಆಕೆಯು ತನ್ನ ಮಕ್ಕಳಿಗೆ ಬೌದ್ಧಿಕ ಶಕ್ತಿಯನ್ನು ತುಂಬುತ್ತಾಳೆ, ತುಂಬಬಲ್ಲಳು ಎಂದು ಸಾರುತ್ತಿದೆ. ತಾಯಿ ಮಾತು, ಸಲಹೆ, ಉಪದೇಶವನ್ನು ಪುರುಷ ಪ್ರಧಾನ ವ್ಯವಸ್ಥೆ ಅಗೌರವದಿಂದ ಕಾಣುವ ದುರಂತದಲ್ಲಿ ಅದಕ್ಕೆ ವಿರುದ್ಧವಾದ ನೆಲೆಯಲ್ಲಿ ಅಮ್ಮನ ಸ್ಥಾನ ಎಂತಹದ್ದು ಹೆಣ್ಣಿನ ಉಪದೇಶ ನೆಲ ಮೂಲ ಸಂಸ್ಕೃತಿಯಿಂದ ಬಂದಿದ್ದೆ ಎಂದು ತಿಳಿಸಿಕೊಡುವ ಪಾಠ ಕಾವ್ಯ ಹೇಳುತ್ತಿದೆ. ಬಳ್ಳಿಗೆ ಮರ ಆಸರೆ ಎಂಬ ಒಂದು ಆಶಯದ ಹಿನ್ನೆಲೆಯಲ್ಲಿ ಹೇಳುತ್ತಾ ಹೆಣ್ಣು ಗಂಡಸಿನ ಆಸರೆಯಲ್ಲಿ ಬೆಳಯಬೇಕು ಎಂದು ಹೇಳುವ ಮನಸ್ಥಿತಿಗಳಿಗೆ ಅದನ್ನು ಪ್ರಶ್ನಿಸುವ ಹಿನ್ನೆಲೆಯಲ್ಲಿ ಬಳ್ಳಿಗೆ ಮರವೇ ಆಸರೆ ಯಾಕೆಬೇಕು? ಎಂದು ಪ್ರಶ್ನಿಸಿ ಕಾಂಡದ ತುದಿಯಲ್ಲೆಲ್ಲ ಕೊನರುವ ಚಿಗುರು ನೆಲದಲೇ ತೆವಳಿ ವ್ಯಾಪಿಸಿಬಿಡುವುದಲ್ಲೇ ಬಿಂಕದ ಅಮೃತ ಬಳ್ಳಿಯೇ ಎಂದು ಸಮಾಧಾನ ಕೊಡುತ್ತದೆ ಸಮಕಾಲೀನ ಮಹಿಳಾ ಕಾವ್ಯ ತೊಟ್ಟಿಲು ತೂಗುವುದರೊಂದಿಗೆ ಬದುಕನ್ನು, ಸಮಾಜವನ್ನು, ಕುಟುಂಬವನ್ನು ತೂಗುವ ಬೌದ್ಧಿಕತೆ ಮಹಿಳೆ ಇದೆ ಆದರೂ ಆಕೆಯನ್ನು ಅಪಮಾನದಿಂದ ನೋಡುವ ದೃಷ್ಟಿಕೋನಕ್ಕೆ ಧಿಕ್ಕಾರ ಹೇಳಿ ಹೆಣ್ಣಾಗಿ ಹುಟ್ಟಿರುವುದು ಪುಣ್ಯದ ಕೆಲಸ ಎಂದು ಸಮಾಧಾನಕೊಂಡಂತಿದೆ.

ಸಾಮಾಜಿಕ ಅಸಮಾನತೆಗಳ ನಡುವೆ ತನ್ನ ಸ್ಥಾನ ಕಂಡುಕೊಂಡು ತನ್ನ ತಲೆಮಾರಿಗಿಂತ ಹೇಗೆ ಭಿನ್ನವಾಗಿ ಬೆಳೆಯಬೇಕು, ಬಾಳಬೇಕು ಎಂಬ ಸ್ವಂತಿಕೆಯ ಆಶಯವನ್ನು ಕಾಣಬಹುದಾಗಿದೆ. ಅಜ್ಜಿ, ತಾಯಿಯರು ಸುತ್ತಿದ ವರ್ತುಲವನ್ನು ತಾನು ಸುತ್ತಲಾರೆ ಎಂದು ಸ್ಪಷ್ಟವಾಗಿ ಗುರುತಿಸಿಕೊಂಡು ಹೊಸ ದಾರಿ ಕಂಡುಕೊಳ್ಳುವ ಬಗೆಯನ್ನು ಇವರ ಕಾವ್ಯದಲ್ಲಿ ಕಾಣಬಹುದಾಗಿದೆ. ಕವಯಿತ್ರಿ ಮಲ್ಲಿಕಾ ಘಂಟಿ ಅವರು 'ಮಗಳಿಗೊಂದು ಕಿವಿ ಮಾತು' ಎಂಬ ಕವಿತೆಯಲ್ಲಿ ಇತಿಹಾಸವನ್ನು ಬರಿ ಅರ್ಥಮಾಡಿಕೊಂಡರೆ ಸಾಲದು ಅದನ್ನು ಎದುರಿಸುವ ಹಾಗೂ ಮರುನಿರ್ಮಿಸುವ ಅಗತ್ಯವನ್ನು ಮಹಿಳೆಯರು ಅರ್ಥಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ. ಇದು ಅನೇಕ ಅಸಹಾಯಕ ಮಹಿಳೆಯರಿಗೆ ಆತ್ಮಸ್ಥೈರ್ಯ ತುಂಬಿದೆ. ಮಹಿಳೆ ತನ್ನ ಚೌಕಟ್ಟನ್ನು ಮುರಿದು ಹೊಸದಾದ ಬೆಳಕನ್ನು ಕಾಣಬಯಸಿರುವುದು ನೋಡಬಹುದಾಗಿದೆ. ಶತಮಾನದಿಂದಲೂ ತುಳಿತಕ್ಕೆ ಒಳಗಾದ ಹೆಣ್ಣು ಪ್ರಕೃತಿಗೆ ಹೊಸ ರೂಪವನ್ನೇ ಕೊಡಬೇಕು ಎಂಬ ಆಶಯ ಎದ್ದು ಕಾಣುತ್ತಿದೆ. ಹೆಣ್ಣು ಒಂದೇಯಾಗಿ, ಹೆಣ್ಣು ಧರಿಸುವ ವೇಷಗಳು ಮಾತ್ರ ಬೇರೆ ಬೇರೆ ಒಮ್ಮೆ ಮಗಳಾಗಿ, ತಾಯಿಯಾಗಿ, ಸೊಸೆಯಾಗಿ, ಜೀವ ಭಾವವನ್ನು ತಣಿಸುವ ಹೆಣ್ಣಿನ ವ್ಯಭಿಚಾರಿಯಾಗಿ, ಬಸವಿಯಾಗಿ ನಾನಾ ರೂಪದಲ್ಲಿ ಹೆಣ್ಣು ತನ್ನ ಒಳಸಂಕಟಗಳನ್ನು ಯಾವ ರೀತಿಯಾಗಿ ಅನುಭವಿಸುತ್ತಿದ್ದಾಳೆ ಎಂಬುದನ್ನು ಕಾವ್ಯ ಚಿತ್ರಿಸಿದೆ. ಶಿಕ್ಷಣದಲ್ಲಿ ಹೆಣ್ಣ ಅನುಭವಿಸುವ ಯಾತನೆ, ಗಂಡು ಮಗುವಿಗೆ ಸಿಕ್ಕಿರುವ ಶಿಕ್ಷಣದ ಸವಲತ್ತು ಹೆಣ್ಣು ಮಗುವಿಗೆ ಸಿಗಲಾರದು, ಧಾರ್ಮಿಕವಾಗಿ ಸಹ ಮಮಕಾರದಲ್ಲಿಯೂ ಸಹ ಗಂಡು ಮಗುವಿಗೆ ಸಿಕ್ಕ ಮನ್ನಣೆ, ಕಾಳಜಿ, ಕನಿಕರ ಹೆಣ್ಣು

ಮಗುವಿಗೆ ಸಿಗಲಾರದು ಆರಂಭದಲ್ಲೇ ಹೆಣ್ಣು ಅಪಮಾನ ಅವಮಾನಕ್ಕೆ ಗುರಿಯಾಗಿ ಬೆಳೆಯುತ್ತಾಳೆ. ಅವಳಿಗೆ ಕೌಟುಂಬಿಕ ಸಮಾನತೆ ಸಿಗುವುದಿಲ್ಲ. ಆದ್ದರಿಂದ ಇದಕ್ಕೆ ಪ್ರತಿಭಟನಾ ರೂಪವಾಗಿ ಮಹಿಳಾ ಕಾವ್ಯ ಇದೆಲ್ಲದನ್ನು ಅವರ ಮಾನವೀಯ ನೆಲೆ ಎಂದು ಗುರುತಿಸಿ ಮಾನವೀಯ ನೆಲೆಯೂ ಜೀವ ಸಂಪತ್ತಿನಿಂದ ಮೌಲ್ಯಯುತವಾಗಿ ಗಂಡು ಹೆಣ್ಣು ಸಮವಾಗಿ ಬದುಕನ್ನು ಸಾಗಿಸಲು ಕರೆ ನೀಡಿದ್ದಾರೆ. ಹುಟ್ಟುವ ಮಕ್ಕಳಿಗೆ ಗಂಡಾದರೇನು, ಹೆಣ್ಣಾದರೇನು ಒಂದೇ ಜೀವವಲ್ಲವೇ ಎಂಬ ಆಶಯವನ್ನು ಭಿತ್ತಿ ಸಾಗುತ್ತಿವೆ ಮಹಿಳಾ ಕಾವ್ಯ.

ಹೆಣ್ಣು ಅನುಭವಿಸುವ ದಾಂಪತ್ಯ ಧರ್ಮದ ನೆಲೆ ಒಂಟಿತನ ಮುಂತಾದವನ್ನು ಸಮಾಜದ ಚೌಕಟ್ಟಿನೊಳಗೆ ಒಡೆಯುವ, ಸಂವಾದಿಯಾಗಿ ಹೊಸ ಆರೋಗ್ಯಕರ ಸಮಾಜವನ್ನು ಕರ್ತೃ ಸೃಷ್ಟಿ ಅಭಿಪ್ರಾಯಕ್ಕೆ ಬರುವ ಮುಂಚೆ ಕೌಟುಂಬಿಕ ಸಮನ್ವಯತೆ ಬೇಕು. ಕುಟುಂಬದಲ್ಲಿ ಹೆಣ್ಣಿಗೆ ಸಾಗುವ ಗೌರವ, ಕಾಳಜಿ ಘನತೆ ದಕ್ಕಿದಾಗ ಮಾತ್ರ ಸಮಾಜ ಸುಸ್ಥಿತಿಯಲ್ಲಿ ಸಾಗುವ ಕಾವ್ಯ ಧ್ವನಿಸಿದೆ ಎಂದು ಗುರುತಿಸಲಾಗಿದೆ.

ನಾನೀಗ
ಹರಿಯುವ ನದಿ, ಉಕ್ಕುವ ಕಡಲು
ವಿಶಾಲ ಬಾನು, ಕ್ಷಮಾಮಯಿ ಭೂಮಿ
ನಗುವ ಹೂಗಳ ಕುರಿತು
ಅಚ್ಚರಿಯೆಂದರೆ
ಪ್ರತಿಯೊಂದರಲ್ಲೂ ನನಗೆ
ಕಂಡದ್ದು ಬರೀ ನೀನು[೪೪]

ಕವಯಿತ್ರಿ ಇಲ್ಲಿ ಬಳಸಿದ ಪ್ರತಿಮೆಗಳೆಂದರೆ ಹರಿಯುವ ನೀರು, ನದಿ, ಕಡಲು, ಬಾನು, ಭೂಮಿ 'ಹೂ' ಇವೆಲ್ಲವೂ ಸಮಾನತೆಯ ಸಂಕೇತಗಳಾಗಿವೆ. ತಾನು ನದಿಯಾಗಿ ಹರಿಯುವುದು ಕಡಲಾಗಿ ಉಕ್ಕುವುದು ಹೂವಾಗಿ ಅರಳುವುದು ಸಮಾನತೆಯ ಉಸಿರಾಟಕ್ಕಾಗಿ ಸಮಾಜದಲ್ಲಿ ಕುಟುಂಬದಲ್ಲಿ ಗಂಡು-ಹೆಣ್ಣು ಒಂದೇ ಆಗಿ ಜೀವಿಸುವ ಬಯಕೆಗಾಗಿ ಎಂಬುದನ್ನು ವ್ಯಕ್ತಪಡಿಸಿದಂತಿದೆ. ಕೊನೆಗೆ ಅಚ್ಚೆಂದರೆ ಅವುಗಳಲ್ಲಿ ತನ್ನನ್ನು ತಾನಷ್ಟೇ ನೋಡಿಕೊಳ್ಳದೆ 'ನಿನ್ನನ್ನು' ಕಂಡೆ ಎನ್ನುವುದು ಪರಸ್ಪರ ಪ್ರೀತಿ ಸಹಬಾಳ್ವೆ ಸಮನ್ವಯತೆಯ ಸೂಚಕವಾಗಿದೆ. ಇಲ್ಲಿ ಪುರುಷನೊಬ್ಬ ಕವಿತೆಗಳ ಹೆಣ್ಣನ್ನು ಕಾಣುವ ಬಗೆ, ಮಹಿಳೆಯ ಕವಿತೆ ಓದಿದೆ ಪುರು ಕಾಣುವ ಬಗೆ ಒಟ್ಟಾರೆ ಸಮ್ಮತೆಗಾಗಿ ಒಲವಿಗಾಗಿ ಸಮವಾಗಿ ಅಂಬಲಿಸುವುದು ಜೀವಿಸುವುದು ಈ ಪದ್ಯದಲ್ಲಿ ವ್ಯಕ್ತವಾಗಿದೆ. ಹಾಗೇ ಮುಂದುವರೆದು ಒಮ್ಮೊಮ್ಮೆ ಹೀಗೆನಿಸುತ್ತದೆ ಹೆಣ್ಣು ನೀನಿಲ್ಲದಿದ್ದರೆ ಏನೂ ಬೇಡ ಈ ಸಂಜೆ, ಗಾಳಿ ಬೆಳಕು, ಒಲುಮೆ ಇವೆಲ್ಲವೂ ನಾನು ನೀನು ಜೊತೆಗೂಡಿದಾಗಲೇ ಅವುಗಳಿಗೆ ಒಂದು ಬಗೆಯ ಮತ್ತು ಸೊಗಸು ಹಾಗೆ ಸಾರ್ಥಕತೆ ಎಂದು ಹೇಳುವುದನ್ನು ಸಹ ಗಮನಿಸಬಹುದಾಗಿದೆ. ಇದೇ ಕೌಟುಂಬಿಕ ಸಮನ್ವತೆಗೆ ಜೀವ

ನಾಡಿ, ನಾನು-ನೀನು ನೀನು-ನಾನು ಒಂದಾಗುವ ಏಕವಾಗುವ ಒಲುಮೆಯ ಹಕ್ಕುಗಳು ಎಂದು ಬಾಳುವುದೇ ಸಾಮಾನ್ಯತೆಯ ಸೂಚಕವಾಗಿದೆ. "ಹಾಗೇ ವಿಭಾಗವಾದ ಕವಿತೆಗಳು ಭಾವ ಪುರಾಣ ಸದಾ ಸುರಿವ ಮೋಡಗಳ ಹಾಗೆ ಇದು ಕಡಲ ವಿಸ್ತಾರ ಒಡಲೇ ಸರಿ. ಲ್ಯಾಟಗಂಟಿನಲ್ಲಿರುವ ನಿನ್ನ ಪಾಲಿನ ಅಕ್ಷರಗಳನ್ನು ನಾನೆಲ್ಲಿ ಅಕ್ಕರೆಯಿಂದ ಹಂಚಿಕೆಗಳನ್ನುತ್ತಿದ್ದೇವೆ"[೧೫] ಸಮಕಾಲೀನ ಮಹಾಕಾವ್ಯದಲ್ಲಿ ಒಂದು ಬಗೆಯ ಕರುಳಿನ ಕವಿತೆಯಾಗಿದೆ, ಸದಾ ಸುರಿಯುವ ಮೋಡವಾಗಿ ಫಲವತ್ತತೆಯ ಸಂಕೇತವಾಗಿದೆ ಸಮಾನತೆ, ಘನತೆ, ಜೀವದ ಆಶಯಗಳನ್ನು ಚಲ್ಲುವ, ಅಭಿವ್ಯಕ್ತಿಸುವ ಕವಿತೆಯಾಗಿದೆ. ಹೊಸ ಹೊಸ ರೂಪಕಗಳನ್ನು ಬಳಸುವ ಸೃಜನಶೀಲತೆಯೂ ಸಹ ಇವರದ್ದಾಗಿದೆ. ಆಧುನಿಕ ಯುಗದಲ್ಲಿ ಕೌಟುಂಬಿಕ ಮೌಲ್ಯದ ಕುಟುಂಬದ ಪಾತ್ರ ಅದರಲ್ಲಿ ಹೆಣ್ಣಿನ ಪಾತ್ರ ಎಂಥಹದ್ದು ಎಂಬುದನ್ನು ಇವರ ಕಾವ್ಯ ಧ್ವನಿಸುತ್ತದೆ.

ಸ್ತ್ರೀವಾದವನ್ನು ನಮ್ಮ ಪ್ರಸ್ತುತ ಕನ್ನಡ ಕಾವ್ಯದಲ್ಲಿ ಹೆಚ್ಚಾಗಿ ಚರ್ಚಿಸಿದ ವಿಷಯವಾಗಿದೆ. ಸ್ತ್ರೀವಾದ ಕುಟುಂಬದ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬ ಹೆಣ್ಣು ತನ್ನ ಅನುಭವಿಸುವ ಯಾತನಾ ಸಂಕಟವನ್ನು ಪ್ರಶ್ನಿಸಿದೆ ಹಾಗೂ ಆಕೆಯ ಸ್ಥಾನಮಾನದ ಕುರಿತು ಮಾತಾಡುತ್ತದೆ. ಸ್ತ್ರೀವಾದ ಈಗಾಗಲೇ ಪಾಶ್ಚಾತ್ಯದಲ್ಲಿ ವಿವಿಧ ಭಾಷೆ, ಸಂಸ್ಕಾರಕ್ಕೆ ತಕ್ಕಂತೆ ಚರ್ಚೆಗೆ ಒಳಗಾಗಿ ಹೇಳಲಾಗಿರುವ ಪರಿಕಲ್ಪನೆ ಭಾರತೀಯ ಸಂದರ್ಭದಲ್ಲಿ ಇನ್ನು ಸಿದ್ದಾಂತದ ಚರ್ಚೆಗೆ ಒಳಗಾಗಿ ಹೇಳಲಾಗಿರುವ ಪರಿಕಲ್ಪನೆ. ಭಾರತೀಯ ಸಂದರ್ಭದಲ್ಲಿ ಇನ್ನು ಸಿದ್ಧಾಂತದ ಹಂತದಲ್ಲೇ ಇರುವ ಇತ್ತೀಚಿನ ಕವಯಿತ್ರಿಯರಲ್ಲಿ ಪ್ರಯೋಗಕ್ಕೆ ಒಳಗಾಗುತ್ತಿರುವ ಪರಿಕಲ್ಪನೆಯಾಗಿದೆ. ಹೀಗಾಗಿ ಈ ಸಿದ್ಧಾಂತವನ್ನು ನವ್ಯದಿಂದೀಚೆಗೆ ಬರೆಯುತ್ತಿರುವ ಲೇಖಕಿ ಕವಯಿತ್ರಿಯರ ಸಾಹಿತ್ಯಕ್ಕೆ ಸಂಬಂಧಪಟ್ಟದ್ದಾಗಿದೆ. ಇದರರ್ಥ ನಿರ್ದಿಷ್ಟ ನವ್ಯದಿಂದ ಹಿಂದಿನವರ ಸಾಹಿತ್ಯದಲ್ಲಿ ಸ್ತ್ರೀಪರ ಕಾಳಜಿ ಇರಲಿಲ್ಲವೆಂದಲ್ಲಿ ಇದ್ದರೂ ನಿರ್ದಿಷ್ಟ ಪರಿಕಲ್ಪನೆಯ ಅಡಿಯಲ್ಲಿ ಗುರುತಿಸಲ್ಪಡಲಿಲ್ಲ. ಬದಲಾಗಿ ಮುಂದಿನವರು ಸಾಹಿತ್ಯರಚನೆಗೇ ಅದರ ಬೆಳವಣಿಗೆಗೆ ಪೂರಕವಾಗಿ ನಮ್ಮ ಪೂರ್ವದ ಹಿರಿಯ ಲೇಖಕಿಯರು ಅಡಿಗಲ್ಲಿಡುವ ಕಾರ್ಯ ನಿರ್ವಹಿಸಿದರು. ಪ್ರಸ್ತುತ ಕನ್ನಡ ಕಾವ್ಯದಲ್ಲಿ 'ಸ್ತ್ರೀವಾದ' ಪರಿಕಲ್ಪನೆಯ ಹುಡುಕಾಟಕ್ಕೆ ತೊಡಗಿದರೆ ಮಹತ್ವವಾದ ವಿಷಯಗಳು ದೊರೆಯುತ್ತವೆ. ಈ ಹೊತ್ತಿನ ಮಹಿಳಾ ಕಾವ್ಯದ ಕ್ಯಾನ್ವಾಸ್ ವಿಶಾಲವಾದ ಹದವನ್ನು ಹೊಂದಿದ್ದು ಕಂಡುಬಂದಿದೆ. ಪುರುಷ ನಿರ್ಮಿತ ಸಮಾಜ ವ್ಯವಸ್ಥೆಯಲ್ಲಿ ಪ್ರಣಯ, ಮದುವೆ, ಸಂಸಾರ ಮಕ್ಕಳು ಎಂಬ ಕಲ್ಪನೆಗಳು ಹೆಣ್ಣನ್ನು ಶೋಷಿಸುತ್ತಿದ್ದರೂ ಪ್ರತಿಭಟಿಸಲಾರದೆ, ಶೋಷಣೆಯ ಪ್ರಜ್ಞೆಪೂರ್ವಕವಾಗಿಯೇ ಒಪ್ಪಿಕೊಂಡ ಮನಸ್ಥಿತಿಯ ಕುರಿತು ಮಹಿಳಾಕಾವ್ಯ ನುಡಿಯುತ್ತಿದೆ. ಕುಟುಂಬ ವ್ಯವಸ್ಥೆಯಲ್ಲಿ ಪುರುಷ ಪ್ರಧಾನ ಚಿಂತನೆಗಳು ಆಕೆಯನ್ನು ಯಾವ ರೀತಿಯಾಗಿ ನಿರ್ಬಂಧಿಸಿವೆ ಹೆಣ್ಣಿಗಂದೆ ಸೃಷ್ಟಿಸಿರುವ ಕೆಲವು ಸಂಪ್ರದಾಯದ ನಿಯಮಗಳನ್ನು ಏರಿ ಆಕೆಯನ್ನು ಒಬ್ಬ 'ಸ್ವತಂತ್ರ ಜೀವಿ' ಎಂಬುದನ್ನು ಮರೆತು ತಾನು ಆಶಿಸುವ ವಸ್ತು ಎಂಬ ಭಾವನೆ ಮೂಡಿಸುವ

ಹುನ್ನಾರು ನಡೆಯುತ್ತಿದೆ. ಇಂಥ ದುರಂತವನ್ನು ಕಾವ್ಯ ಚಿತ್ರಿಸಿದೆ. ಇದಕ್ಕೆ ವಿರುದ್ಧವಾಗಿ ಹೆಣ್ಣು ಬದುಕಬೇಕಾಗಿರುವುದು ಭೋಗದ ವಸ್ತುವಾಗಿ ಅಲ್ಲ ಬೋಧಿಸುವ ವಸ್ತುವಾಗಿ ಎಂಬುದನ್ನು ಕಾವ್ಯ ಅಭಿವ್ಯಕ್ತಿಸುತ್ತಿದೆ.

ಪುರುಷ ನಿರ್ಮಿತ ಸಮಾಜ ಹೊಂದಿರುವ ಒತ್ತಡಗಳನ್ನು ಸಾರಾಸಾಗಟವಾಗಿ ಪ್ರತಿಭಟಿಸುವ ಮಾದರಿ ಕಾವ್ಯ ಮಹಿಳಾ ಕಾವ್ಯವಾಗಿದೆ. ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ವೈಯಕ್ತಿಕವಾಗಿ ಹೊಂದಿರುವ ಒತ್ತಡಗಳನ್ನು ಮುರಿದು ಹೊಸ ಮಾದರಿಯ ಜೀವಂತಿಕೆಯನ್ನು ಸೃಷ್ಟಿಸಿಕೊಂಡ ಬಾಳಲು ಪ್ರೇರಣೆ ನೀಡುತ್ತದೆ. ಇದಕ್ಕೆ ಪ್ರಾಶ್ಚಾತ್ಯ ಮಹಿಳಾ ಚಿಂತನೆ ಮತ್ತು ವೈಚಾರಿಕ ಬರಹಗಳ ಪ್ರೇರಣೆ ಇರುವುದು ಕಂಡುಬಂದಿದೆ. ಮಹಿಳಾಕಾವ್ಯ ಕೇವಲ ಮಹಿಳೆಯ ಕುರಿತಾಗಿ ಚಿಂತನೆ ಮಾಡದೆ ದೇಶ ಭಾಷೆ, ಸಂಸ್ಕೃತಿ, ನೆಲೆ, ಜಲ, ಬದುಕು, ಸಮಾಜದ ಕುರಿತಾಗಿಯೂ ಮಾತೃ ಹೃದಯ ತಾಳುವುದು ಹೇಗೆ ಎಂಬುದನ್ನು ಸಹ ಕಲಿಸುತ್ತಿದೆ.

ಇಲ್ಲಿ ಹಕ್ಕಿಗಳು ಕಿಚಗುಡುತ್ತವೆ
ಬಣ್ಣ ಬಣ್ಣದ ಕನಸುಗಳ ಚಿಟ್ಟೆ
ರೆಕ್ಕೆ ಬಡಿಯುತ್ತದೆ
ಸದ್ದಿಲ್ಲದೆ ಅರಳುತ್ತವೆ ಹೂವು
ಇದು ಮಗುವಿರುವ ಮನೆ
ಮೊದಲ ಮಳೆಗೆ ಹುರಿಯ ಭೂಮಿ[೧೮]

ಕನ್ನಡ ಕಾವ್ಯಕ್ಕೆ ಮಹಿಳಾ ಕವಯಿತ್ರಿಯರು ಹೊಸ ಬಗೆಯ ಚಿಂತನೆಯ ದಾರಿಗಳನ್ನು ನೀಡಿದ್ದಾರೆ. ಹೊಸ ಬಗೆಯ ರೂಪಗಳು ಸೃಷ್ಟಿಸಿ ಹೊಸ ಸಂವೇದನೆಯ ಬಗೆಯನ್ನು ವ್ಯಕ್ತಪಡಿಸಿರುವುದು ಕಂಡುಬಂದಿದೆ. ಇಲ್ಲಿ ಹಕ್ಕಿಗಳು ಕಿಚಗುಡುತ್ತವೆ ಅನ್ನುವ ರೂಪಿಕ ಹೆಣ್ಣುಮಕ್ಕಳ ಅಂತರಂಗದ ಮೊದಲನೆಯ ಸೂಚಕವಾಗಿದೆ. ಬಣ್ಣ ಬಣ್ಣದ ಕನಸುಗಳು ಆಶಯದ ಸಂಕೇತವಾಗಿವೆ. ಅವು ರೆಕ್ಕೆ ಬಡಿದು ಹಾರಲು ಬದುಕಲು ಬಯಸುವುದನ್ನು ಸೂಚಿಸಿದಂತಿದೆ. ಇವೆಲ್ಲವೂ ಸದ್ದಿಲ್ಲದೆ ಅರಳುವ ಹೂಗಳಿವೆ. ಸದ್ದು ಮಾಡಿದರೆ ಸದ್ದನ್ನು ಆ ಹೋರಾಟವನ್ನು ಚಟಪಡಿಕೆಯನ್ನು ಚಿಂತನೆಯನ್ನು ಹಡಗಿಸುವ ದುರಂತದ ಕಾಲಘಟ್ಟಲ್ಲಿ ನಾವಿದ್ದೇವೆ. ಆದ್ದರಿಂದ ಆ ಮನಸ್ಸುಗಳಿಗೆ ಸಿಗದಂತೆ ಸದ್ದಿಲ್ಲದೆ ಅರಳಿ ಹೊಸ ಬೆಳಕನ್ನು ಬೀರುತ್ತವೆ. ಆ ಬೆಳಕಲ್ಲಿ ಜೀವಸಂಪಿಗೆಯನ್ನು ಕಾಣುತ್ತೇವೆ ಎಂಬ ಆಶಯ ಸೂಚಿಸಿರುವುದು ವ್ಯಕ್ತಗೊಂಡಿದೆ ಹಾಗೇ ಮುಂದುವರೆದು ಇದು ಮಗುವಿನ ಮನೆ ಎಂಬುದು ಮಮಕಾರದ ಸಂಕೇತ ಕುಟುಂಬದ ಸಂಕೇತ ತಾಯಿತನವನ್ನು ಕುಟುಂಬದಲ್ಲಿ ಮಹತ್ತರ ಸ್ಥಾನ ಪಡೆದಿವೆ. ಜ್ಞಾನಕ್ಕೆ ಸ್ಪಂದಿಸಿ ಅರಳಲು ಬಿಡಿ ಎಂದು ಹೇಳಿದಂತಿದೆ. ಮಹಿಳೆಯ ಸಂವೇದನೆ, ಚಿಂತನೆಗಳು ಮೊದಲ ಮಳೆಗೆ ಹುಡಿಯಾದ ಮಣ್ಣು ಯಾವ ರೀತಿಯಾಗಿ ವಾಸನೆಯನ್ನು ಬಿಡುತ್ತದೆಯೋ ಅದೇ ರೀತಿ ತಮ್ಮ ಸಂವೇದನೆಗಳು ಎಂದು ಹೇಳಿದಂತಿದೆ.

ಕುಟುಂಬದಲ್ಲಿ ಗಂಡು ಹೆಣ್ಣು ಎಷ್ಟು ಒಲುಮೆಯಿಂದ ಕೂಡಿರಬೇಕು ಎಂಬುದಕ್ಕೆ ತಿಳಿಸುತ್ತದೆ. ಆಧುನಿಕ ಸಂದರ್ಭದಲ್ಲಿ ವಿಭಕ್ತ ಕುಟುಂಬಗಳು ಕುಟುಂಬ ಎಂದರೆ ಗಂಡ ಹೆಂಡತಿ, ಮಕ್ಕಳು ಇಷ್ಟು ಎಂಬ ವ್ಯಾಖ್ಯಾನಿಸಿದೆ ಇದರಂತೆ ನಗರದಲ್ಲಿನ ಕುಟುಂಬಗಳಲ್ಲಿ ಹೆಣ್ಣು, ತನ್ನ ಸ್ಥಾನವನ್ನು ವಿಶೇಷವಾಗಿ ನಿಭಾಯಿಸುತ್ತಿದ್ದಾಳೆ. ಕೆಲಸ ಮಾಡಿ ಬಂದು ಮನೆಯ ಕುಟುಂಬದ ಜವಾಬ್ದಾರಿಯನ್ನು ಹೊತ್ತ ಸಮರ್ಥವಾಗಿ ಕಾರ್ಯನಿರ್ವಹಿಸುವುದು ಕಂಡುಬಂದಿದೆ. ಮಹಿಳೆಯ ಕೆಲಸ ಅದು ದಿನ ಕೂಲಿಕೆಲಸ ಮನೆಗೆಲಸ, ಆಫೀಸ್ ಕೆಲಸ ಇವು ಹಲವು ಬೇರೆ ಬೇರೆ ರೀತಿಯಲ್ಲಿ ಆಧುನಿಕತೆಯನ್ನು ಹೊಂದಿರುತ್ತವೆ ತಮ್ಮ ತಮ್ಮ ವ್ಯವಸ್ಥೆಯಲ್ಲಿ ವಲಯಲ್ಲಿ ಆಗುವ ಹಿಂಸೆಯನ್ನು ಸಹಿಸಿಕೊಂಡು ಮತ್ತೆ ತನ್ನ ಕುಟುಂಬದ ಏಳಿಗೆಗಾಗಿ ಸಮನ್ವಯತೆಗಾಗಿ ಯಾವ ರೀತಿಯ ಜವಾಬ್ದಾರಿಯನ್ನು ಹೊಂದಿದ್ದಾಳೆ ಎಂಬುದನ್ನು ಕಾವ್ಯ ಅಭಿವ್ಯಕ್ತಿಸುತ್ತದೆ. ಕುಟುಂಬದಲ್ಲಿ, ಸಮಾಜದಲ್ಲಿ, ಪ್ರೀತಿಗಾಗಿ ಪ್ರೀತಿಯ ಸಾಕ್ಷಾತ್ಕಾರಕ್ಕಾಗಿ ಚಡಪಡಿಸುವ ಸಂವೇದನೆಯು ಸಹ ವ್ಯಕ್ತಗೊಂಡಿರುವುದು ಕಾಣಬಹುದು. "ಬಹುಪಾಲು ವರ್ಣ-ವರ್ಗ-ಲಿಂಗಬೇಧಗಳಿಂದ ನಿರ್ಮಿತಗೊಂಡ ಮನಸ್ಸನ್ನು ಛಿದ್ರಗೊಳಿಸುವುದಾಗಿದೆ. ಬದಲಾವಣೆಗೆ ತಮ್ಮನ್ನು ಒಡ್ಡಿಕೊಳ್ಳಲಾರದ, ಜಡಗೊಂಡ ಸಾಂಸ್ಥಿಕ ಮೌಲ್ಯಗಳ ನಡುವೆ ನಲುಗಿ ನುಜ್ಜುಗುಜ್ಜಾದ ಪ್ರೇಮವನ್ನು ಅದು ಇದ್ದ ರೂಪದಲ್ಲೇ ಹೊರ ಎಸೆಯುವ ಕೆಲಸ ಮಾಡಲಾಗಿದೆ." ಎಚ್.ಪುಷ್ಪ ಅವರ ಹೇಳಿದನಂತೆ ಪ್ರೀತಿಗಾಗಿ ಹಂಬಲಿಸುವುದು ಮೂಲ ಆಶಯ ಮಹಿಳಾಕಾವ್ಯದ ಎಂದಿದ್ದಾರೆ. ಪ್ರೀತಿ ಎಂದರೆ ಗಂಡು ಹೆಣ್ಣಿನ ನಡುವೆ ಇರುವ ಪ್ರೀತಿ ಒಂದು-ಬಗೆಯದಾದರೆ ಅದನ್ನು ಮೀರಿ ಸಮಾಜ ಹೆಣ್ಣನ್ನು ಗೌರವಿಸಿ ಪ್ರೀತಿಸುವುದನ್ನು ಸಹ ಒಳಗೊಂಡಿದೆ. ಕುಟುಂಬದಲ್ಲಿ ಹೆಣ್ಣು ಪ್ರೀತಿಯಿಂದ ವಾತ್ಸಲ್ಯದಿಂದ ದೂರ ಇದ್ದಾಳೆ. ಇದಕ್ಕೆ ಪ್ರತಿಯಾಗಿ ಹೆಣ್ಣಿಗೆ ಪ್ರೀತಿ ವಾತ್ಸಲ್ಯ ಅವಳ ಜೀವ ಬದ್ಧವಾದ ಹಕ್ಕು ಎಂಬುದನ್ನು ಮೌಲ್ಯಯುತವಾಗಿ ಹೇಳಿದೆ. ಬಹುತೇಕ ಕವಿತೆಗಳಲ್ಲಿ ಎಳೆ ಜೀವಿಗಳ ಪ್ರಣಯ ಸಮಾಜ ಬಿಗಿಮುಷ್ಟಿಯ ನಡುವೆಯೂ ಅಲ್ಲಲ್ಲಿ ಮಿಡಿಯುವ ಮಿನುಗುವ ಎಳೆಗಳಾಗಿ ಕಾಣಸಿಗುತ್ತದೆ. ಬೇಂದ್ರೆ ಅವರ ಪ್ರೇಮ ಸ್ವರೂಪವನ್ನು ಸಹ ಮಹಾಕಾವ್ಯದಲ್ಲಿ ನೆರಳಂತೆ ಕಂಡಿದೆ. ವಿಶೇಷವಾಗಿ ಹೆಣ್ಣಿನ ಹೃದಯವನ್ನೇ ವಿಶೇಷ ರೀತಿಯಲ್ಲಿ ವ್ಯಕ್ತಪಡಿಸಲಾಗಿದೆ. ಹೆಣ್ಣೆಂದರೆ ಏನು? ಎಂಬುದನ್ನು ಈ ಸಮಾಜ ಸಿದ್ಧ ಮಾದರಿಯ ರೂಪದಲ್ಲಿ ಹೇರಿಕೊಂಡ ಬಂದಿರುವ ವ್ಯಾಖ್ಯಾನವನ್ನು ಮುರಿದು ಆಧುನಿಕ ಹೊಸ ವ್ಯಾಖ್ಯಾನವನ್ನು ಬರೆಯಲು ಮುಂದಾಗಿದೆ ಮಹಿಳಾಕಾವ್ಯ ಕುಟುಂಬದಲ್ಲಿ ಹೆಣ್ಣನ್ನು ನೋಡುವ ದೃಷ್ಟಿಕೋನವನ್ನು ಸಹ ಬದಲಿಸಿದ್ದಾಗಿದೆ. ಕುಟುಂಬದ ಜವಾಬ್ದಾರಿ ಯಾವ ರೀತಿಯಲ್ಲಿ ಹೊತ್ತಿ ನಿಭಾಯಿಸಲಾಗಿದೆ ಎಂಬುದನ್ನು ಸಹ ವ್ಯಕ್ತಪಡಿಸಿರುವುದು ಕಂಡುಬಂದಿದೆ.

ಸಾಂಸ್ಕೃತಿಕ ಸ್ತ್ರೀವಾದವು ಎಲ್ಲಾವರ್ಗದ ಮಹಿಳೆಯರನ್ನು ಒಳಗೊಳ್ಳಲು ಅನುವಾಗುವಂತೆ ತನ್ನ ತಾತ್ವಿಕ ಹಾಗೂ ಪ್ರಾಯೋಗಿಕ ಭಿತ್ತಿಯನ್ನು ವಿಸ್ತರಿಸಿಕೊಳ್ಳುತ್ತಿರುವ ರೀತಿ ಹಾಗೂ ಪಡೆಯುತ್ತಿರುವ ಯಶಸ್ಸು ಪಡೆಯುವಂತಿದೆ. ಸಾಂಸ್ಕೃತಿಕ ಸ್ತ್ರೀವಾದದ ಮೂಲ ಪ್ರಮೇಯವೆಂದರೆ

ಸ್ತ್ರೀತ್ರದ ಮೌಲ್ಯಗಳನ್ನು ಪುರುಷವಾದಿ ಮೌಲ್ಯಗಳು ಅಪಮೌಲ್ಯಗೊಳಿಸುವ ಮತ್ತ ದಮನಿಸಿವೆ. "ಆಕ್ರಮಕಾರಿ" ಮುನ್ನುಗ್ಗುವಿಕೆ ಜಗಳ ನಿಯಂತ್ರಣ ಸ್ಪರ್ಧೆ ದಬ್ಬಾಳಿಕೆಗೆ ಮತ್ತು ದೈಹಿಕ ಹಂತೆಯ ಈ ಅಪಾಯಕಾರಿ ಮೌಲ್ಯಗಳನ್ನು ತೆಲೆಕಳಗು ಮಾಡಿದರೆ ಹೆಣ್ಣು ಮತ್ತು ಗಂಡು ಇಬ್ಬರೂ ರೂಪಿಸಿಕೊಳ್ಳಬಹುದಾದ ಹೊಂದಬಹುದಾದ ಸ್ತ್ರೀತ್ವದ ಗುಣಗಳಪೋಷಣೆ ಬೆಂಬಲ ಅಂತರ ಅವಲಂಬನೆ ಮತ್ತು ನಿರಾಕ್ರಮಣ ಮೌಲ್ಯಗಳ ಸಾಂಸ್ಕೃತಿಕ ಸ್ತ್ರೀವಾದಿಗಳಾಗಿವೆ. ಹೆಣ್ಣಿನ ಇತಿಹಾಸದ ಮತ್ತು ಹೆಣ್ಣಿನ ದಾರಿಗಳ ಪುನರ್ ಸಂಪಾದನೆಯ ಹಂಬಲ ಮಹಾಕಾವ್ಯದಲ್ಲಿ ವ್ಯಕ್ತಗೊಂಡ ಬಗೆ ಈ ರೀತಿಯಾದದ್ದು.

ತಾಯಿದೆಯಲ್ಲಿ ಜೋಗುಳವ
ಯಾರು ಬರೆದರೂ ಶಿವನೆ?
ತೂಗುವ ಗಾಳಿಸುರಿವ ಮಳೆ
ಬೊಬ್ಬಿಡುವ ಸಾಗರವೆ?
ಕಣ್ಣಿಡುವ ಚಿಕ್ಕಿ
ಸಕಳೆ ಬಿಚ್ಚುವ ಜಾಜಿ
ಗರಿಕೆ ಚಿಗಿವ ಸದ್ದುಗಳೇ?[೧೯]

ಕವಯತ್ರಿ ಡಾ. ವಿನಯಾ ಅವರು ತಮ್ಮ ಕವಿತೆಯಲ್ಲಿ ತಾಯಿಯ ಕುರಿತಾಗಿ ಹೇಳಿರುವುದು ವಿಶೇಷವಾಗಿದೆ. ತಾಯಿಗೆ ಕಾಯಿಲೆಗಳೆ ಇರುವುದಿಲ್ಲ ಎಂಬ ಕವಿತೆಯ ಶೀರ್ಷಿಕೆ ವಿಶಿಷ್ಟವಾಗಿದೆ. ಕುಟುಂಬದಲ್ಲಿ ತಾಯಿಯು ಒಂದು ಬೌದ್ಧಿಕ ಸಂಪತ್ತಿನ ಸೂಚಕವಾಗಿದೆ. ತಾಯಿಯ ಎದೆಯಲ್ಲಿ ಪ್ರೀತಿ ಮಮಕಾರ, ವಾತ್ಸಲ್ಯದ ಜೋಗುಳಗಳು ಇವೆ. ಅಲ್ಲಿ ಯಾವುದೇ ದರ್ಪ, ಹಿಂಸೆ, ಅಸಮಾನತೆ, ಮೋಸ ಇಲ್ಲ ಆಕೆ ಏಸುವಿನ ಶಾಂತಿಯ ಸೂಚಕವಾಗಿದೆ. ತಂಪಾಗಿ ಬೀಸುವ ಗಾಳಿ, ಇಳೆಗೆ ತಂಪೆರೆದು ಜೀವ ಕಳೆ ಹೆಚ್ಚಿಸಿ ಕೃಷಿಗೆ ನೆರಳಾಗುವ ಮಳೆಯ ಸ್ಥಾನ ತಾಯಿಗೆ ಇದೆ. ತಾಯಿಯಲ್ಲಿ ಪ್ರೀತಿ ಸಾಗರದಂತಿದೆ ಆ ಪ್ರೀತಿಯಲ್ಲಿ ಮಾನವೀಯ ಮೌಲ್ಯಗಳ ಜೀವಂತಿಕೆ ಇದೆ. ಸಾಮಾಜಿಕ ಕಳಕಳಿ ಇದೆ. ಕುಟುಂಬದಲ್ಲಿ ಸಾಮರಸ್ಯ ಸಮನ್ವಯತೆಯ ಅಂಶಗಳು ಇರುವುದು ಕಂಡುಬಂದಿದೆ. ಇಂದ್ರಿಯಾನುಭವಗಳ ಲೋಕ ಭಾವಲೋಕ ಮತ್ತು ಆಲೋಚನೆಗಳ ಲೋಕಗಳ ಸಂಗಡ ಒಟ್ಟಿಗೆ ಸಂವಾದ ನಡೆಸುತ್ತಾರೆ ಮಹಿಳಾ ಕವಯಿತ್ರಿಯರು ತಮ್ಮ ಕವಿತೆಯಲ್ಲಿ ಶತಮಾನಗಳ ಏಕಾಂತದಿಂದ ನಿಧಾನವಾಗಿ ಹೊರಬರುತ್ತಿರುವ ಹೆಣ್ಣುಜೀವಗಳಿಗಂತೂ ಇದು ಮಧುರ ಯಾತನೆಯಾಗಿದೆ. ಒಂದು ಕವಿತೆಯಲ್ಲಿ ನೂರಾರು ಹೆಣ್ಣುಗಳ ಸಾವಿರಾರು ನೋವುಗಳು ಬಿಡುಗಡೆಗಾಗಿ ಹಾತೊರೆಯುತ್ತಿರುವ ಆಶಯ ಕವಿತೆಯಲ್ಲಿ ವ್ಯಕ್ತಗೊಂಡಿದೆ. ನೆಲದಲ್ಲಿ ಹುದುಗಿಹೋದ ವೈಯಕ್ತಿಕ-ಸಾಮಾಜಿಕ ದುರಂತಗಳಿಗೆ ಹಾಡಿದ ದೀಪ ಮಹಿಳಾಕಾವ್ಯವಾಗಿದೆ. ಧರ್ಮದ ಕ್ರೌರ್ಯ, ಹಣದ ಅಟ್ಟಹಾಸಗಳನ್ನು ಹೇಳುತ್ತಲೇ ತಾಯಿಗೆ ಕಾಯಿಲೆಗಳಿಲ್ಲವೆಂಬ ನಂಬಿಕೆಯ ಹಣತೆಯನ್ನು ಹಿಡಿಯುತ್ತಾರೆ ಕವಯತ್ರಿ ವಿನಯದವರು.

ಹೆಣ್ಣು ಮನೆಯೊಂದರಲ್ಲಿ ಎಲ್ಲ ಸಂಕಟವನ್ನು ಮರೆಯುವುದು ತಾಯಿಯಾಗಿ ತನ್ನ ಮಗುವಿನ ನಗುವಿನಲ್ಲಿ ತನ್ನ ನೋವು ಅವಮಾನ, ಹಿಂಸೆ ಎಲ್ಲವನ್ನು ತನ್ನ ಮಗುವಿನ ಮುಗ್ಧ ಮುಖ ನೋಡುವುದರ ಮೂಲಕ ಅದರ ಲಾಲನೆ-ಪಾಲನೆ ಮಾಡುವುದರಲ್ಲಿ ಮರೆತುಬಿಡುತ್ತಾಳೆ ತನ್ನ ಎದೆಗಂಟಿದ ಸಂಕಟ ತನ್ನ ಎಲ್ಲಾ ಆಸರಕಿ ಬ್ಯಾಸರಕಿಯನ್ನು ಮಗುವಿನ ಪುಟ್ಟ ಸ್ಪರ್ಶದಲ್ಲಿ ಕಳೆದುಕೊಳ್ಳುತ್ತಾಳೆ. ನಿದ್ದೆಗಣ್ಣಲ್ಲಿ ಮಗುವಿಗೆ ತವದಿಸುವ ತಾಯಿತನ ಶಿವನನ್ನು ಬೆಚ್ಚಿಬೀಳಿಸುತ್ತದೆ ಎಂಬ ಆಶಯವನ್ನು ಕವಯಿತ್ರಿ ವಿನಯ ಅವರು ತಮ್ಮ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ಎಂಥ ಸಂಕಟವನ್ನಾದರೂ ಸಹಿಸಿ ಕುಟುಂಬದ ಜವಾಬ್ದಾರಿಯನ್ನು ಹೊಸತ್ತು ನಿಭಾಯಿಸುವಳು ತಾಯಿಯಾಗಿ ತಾಯಿಗೆ ಕುಟುಂಬ ನಡೆಸುವ ಮುನ್ನೆಡೆಸುವ ಶಕ್ತಿ ವಿಶೇಷವಾದದ್ದು ಎಂದು ಮಹಿಳಾಕಾವ್ಯ ಧ್ವನಿಸುತ್ತದೆ.

ತಾಯಿತನದ ಸಾಹಿತ್ಯ ಮಹಿಳಾ ಸಾಹಿತ್ಯವಾಗಿದೆ. ಕವಯಿತ್ರಿಯರಲ್ಲಿ ವ್ಯಕ್ತಗೊಳ್ಳುವ ಮಮಕಾರ, ಪ್ರೀತಿ ಈ ಜಗತ್ತನ್ನೇ ಒಂದು ಮನೆಯಾಗಿಸಿ ಅಲ್ಲಿ ತಾನೂ ಜೀವ ಸಂರಕ್ಷಣೆಯಾಗಲು ಬಯಸಿದಂತಿದೆ. ತಾಯಿತನ ಎನ್ನುವುದು ಒಂದು ತಾತ್ವಿಕ ಸಂಕೇತವಾಗಿದೆ ಅಲ್ಲಿ ದೋಷ, ಅಪಮಾನ, ಅಸಮಾನ, ಅವಮಾನ ಹಿಂಸೆ ಯಾವುದೂ ಇಲ್ಲಿ ಅಲ್ಲಿರುವುದು ಕರುಳು ಬಳ್ಳಿಯ ಪ್ರೀತಿ ಮಾತ್ರ ಆ ಪ್ರೀತಿಯನ್ನು ಇಡೀ ಜಗತ್ತಿಗೆ ಬಿತ್ತಲು ಮತ್ತು ಆ ಪ್ರೀತಿಯಿಂದ ಜಗತ್ತನ್ನು ನೋಡಲು ಬಯಸಿದ ಕಾವ್ಯ ಮಹಿಳಾಕಾವ್ಯವಾಗಿದೆ. ಎಲ್ಲಿ ಜೀವಪರ ಚಿಂತನೆ ಇದೆಯೋ ಅದು ಮಹಿಳಾ ಕಾವ್ಯ ಮಹಿಳಾ ಸಾಹಿತ್ಯ ಎಂದಿದ್ದಾರೆ. ಮಹಿಳೆ ಎಂದರೆ ಲಿಂಗದ ಆಧಾರದ ಮೇಲೆ ಅಲ್ಲಿ ಅದು ಜೀವ ಸಂಕುಲದ ಸೂಚಕವಾಗಿದೆ. "ಸ್ವತಂತ್ರಪೂರ್ವ ಮಹಿಳಾ ಸಾಹಿತ್ಯ ರಚನೆಗೆ ಹಲವು ಕಾರಣಗಳಿವೆ. ಬ್ರಿಟಿಷರ ಆಗುವುದರಿಂದ ಭಾರತದಲ್ಲಿ ಉಂಟಾದ ಹೊಸ ಶಿಕ್ಷಣ ಪದ್ಧತಿ ರಾಷ್ಟ್ರೀಯ ಆಂದೋಲನಗಳ ಮುಖ್ಯವಾದವು"[೨೦] ಕೈಗಾರಿಕಾಕ್ರಾಂತಿ ಮಹಾಯುದ್ಧ ಇದರೊಂದಿಗೆ ರಾಷ್ಟ್ರದ ಆಂತರಿಕ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಬೇಕಾದ ತುರ್ತು ಇತ್ತು. ಉಪದ್ರತೆ, ಬಡತನ, ವರದಕ್ಷಿಣೆ, ಬಾಲ್ಯವಿವಾಹ, ಕೇಶಮುಂಡಣೆ ಮುಂತಾದ ಇಂಥ ಹಲವು ಸಮಸ್ಯೆಗಳ ಜನರನ್ನು ಪ್ರೇರೇಪಿಸಿದ್ದವು. ಮಹಿಳೆ ಪುರುಷನಂತೆಯೇ ಒಬ್ಬ ಮನುಷ್ಯಳು ಅವಳು ಗಂಡಸಿನ ಕೈಯಲ್ಲಿಯ ಆಟಿಕೆಯಲ್ಲ. ಸ್ತ್ರೀಗುಣ ಪುರುಷನಂತೆಯೋ ಸಂವೇದನೆಗಳಿವೆ. ಆಕೆ ವ್ಯಕ್ತಪಡಿಸುವ ಭಾವನೆಗಳಿಗೆ ವಿಚಾರಗಳಿಗೆ ಸಮಾನ ಮಹತ್ವವಿದೆ ಎಂದು ಸಿಮೋದಾ ಬೋವಾ ನೀಡಿದ ಹೇಳಿಕೆಯಾಗಿ ಕವಯಿತ್ರಿಯವರಲ್ಲಿದ್ದ ಆಸೆ, ಆಕಾಂಕ್ಷೆಗಳನ್ನು ಆಕೆ ಭಾವನೆಯನ್ನು ಹೊರಹಾಕಲು ಸಾಧ್ಯವಾಯಿತು. ಇದು ಒಂದು ಬಗೆಯ ಸ್ತ್ರೀವಾದವಾದರೆ ಭಾರತೀಯ ನೆಲದಲ್ಲಿನ ಸ್ತ್ರೀವಾದ ಇನ್ನೊಂದು ಬಗೆಯದ್ದಾಗಿದೆ. ಇಲ್ಲಿ ಸಂಸಾರ ಕುಟುಂಬ ಮನೆ ಸಂಪ್ರದಾಯ ಇವುಗಳು ಹಿನ್ನೆಲೆಯಲ್ಲಿ ಈ ನೆಲದ ಜೀವಂತಿಕೆಯನ್ನು ಉಳಿಸಿಕೊಂಡು ಸ್ತ್ರೀಯ ಕುಟುಂಬದಲ್ಲಿ ಸಮಾನತೆಯನ್ನು ಬಯಸಿರುವುದು ಕಂಡುಬಂದಿದೆ. ಕುಟುಂಬದಲ್ಲಿ ಹೇರಿರುವ ಸಂಪ್ರದಾಯನ್ನು ವಿಚಾರತಾಯಿತನೆಯ ಫಲವಾಗಿ

ಅವುಗಳ ಮೂಲ ಪ್ರದಾನವನ್ನು ಬದಲಾಯಿಸಿ ಸಮಾನತೆಯ ಜೊತೆಗೆ ಈ ನೆಲದ ನೆಲಮೂಲ ಸಂಸ್ಕೃತಿಯ ಜೊತೆ ಜೊತೆಯಲ್ಲಿ ಪ್ರಭುತ್ವದ ಆಶಯದಲ್ಲಿ ಕಂಡುಕೊಂಡಿರುವುದು ಗಮನಿಸಬಹುದು.

ಈಗಾಗಲೇ ಲೋಕವೇ ಒಪ್ಪಿಕೊಂಡಿರುವಂತೆ ಕವಿತೆ ಒಂದು ಹೆಣ್ಣು ಹೆಣ್ಣು ಎಲ್ಲಾ ನಯ ನಾಜೂಕುತನ ಸದ್ದಿಲ್ಲದೆ ಕವಿತೆಯಾಳಗಿದೆ. ಕವಿತೆಗೆ ಒಂದು ಸಹಜ ಗುಣವಿದೆ. ಅದರಂತೆ ಹೆಣ್ಣು ಸ್ವತಂತ್ರ ಜೀವಿಯಂತೆ ನೋಡುಬೇಕೆಂಬ ಬಯಕೆ ವ್ಯಕ್ತಪಡಿಸಿರುವುದು ಕಾಣುತ್ತೇವೆ. ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಕುರುಹುಗಳನ್ನು ಮುರಿದು ಕಟ್ಟಿ ಹೊಸ ಬಗೆಯಲ್ಲಿ ಉದ್ಭವಿಸಿರುವುದರ ಜೊತೆಗೆ ಕುಟುಂಬದಲ್ಲಿನ ಸಾಮರಸ್ಯ ಯಾವ ರೀತಿಯಾಗಿ ಕಾಪಾಡಬೇಕು, ಹೆಣ್ಣು ಕುಟುಂಬದಲ್ಲಿರುವ ಸಹಬಾಳ್ವೆ ಸಮಾನತೆಗಾಗಿ ಆಕೆ ಯಾವ ಬಗ್ಗೆ ಕನಸ್ಸು ಕಟ್ಟಿದ್ದಾಳೆ ಎಂಬುದಾಗಿ ವ್ಯಕ್ತಪಡಿಸಿರುವುದು ಕಾಣುತ್ತವೆ.

### ೬.೪. ಆತ್ಮಸಂಗಾತ

ಆಧುನಿಕ ಕನ್ನಡ ಕಾವ್ಯ ಪರಂಪರೆಯಲ್ಲಿ ಮಹಿಳಾ ಕಾವ್ಯ ವಿಶೇಷ ಸ್ಥಾನ ಪಡೆದಿದೆ. ಇದರ ಅಭಿವ್ಯಕ್ತಿಯ ಹಿನ್ನೆಲೆ, ಆಶಯದ ಹಿನ್ನೆಲೆ ರೂಪಕದ ಹಿನ್ನೆಲೆಯಿಂದ ಹೊಸ ದಾರಿಗಳನ್ನು ಸೃಷ್ಟಿಸಿದ ಬಗೆಯನ್ನು ಗುರುತಿಸಬಹುದಾಗಿದೆ. ಸ್ವಗತದ ಮಾದರಿ ಮಹಿಳಾಕಾವ್ಯದ ವಿಶೇಷ ಶಕ್ತಿಯಾಗಿದೆ. ತನ್ನ ಅಂತರಂಗಕ್ಕೆ ತಾನು ಹೇಳಿಕೊಳ್ಳುವ, ಸಾಂತ್ವಾನ ನೀಡುವ ಆತ್ಮಸ್ಥೈರ್ಯ ತುಂಬುವ ಮಹತ್ವದ ಕೆಲಸವಾಗಿದೆ. ತನಗೆ ತಾನೇ ಹೇಳಿಕೊಳ್ಳುವ ಆತ್ಮಾವಲೋಕನ ಮಾಡಿಕೊಳ್ಳುವ ಬಗೆ ಹಲವು ಚಿಂತನೆಗೆ ಸ್ಫೂರ್ತಿ ನೀಡಿದೆ. ತನ್ನ ಕೂಗನ್ನು ಯಾರಿಗೆ ಹೇಳಬೇಕು ಹೇಳಿದರೂ ಕೇಳುವ ಕಿವಿಗಳಿಲ್ಲ, ಕೇಳಿದರೂ ಸ್ಪಂದಿಸುವ ಹೃದಯಗಳಿಲ್ಲ ಸ್ಪಂದಿಸಿದರು ತಮ್ಮ ಆಧಿಪತ್ಯದ ಮೂಲ ನೆಲೆಯಲ್ಲೇ ಸ್ಪಂದನೆ, ಕನಿಕರ, ಕರುಣೆಯ ಮೂಲಕ ಸ್ಪಂದಿಸುವುದಾಗಿದೆ. ಅದಕ್ಕಾಗಿ ಇದ್ಯಾವುದನ್ನು ಬಯಸದ ತನ್ನಷ್ಟಕ್ಕೆ ತಾನೇ ಹೇಳಿಕೊಂಡು ಹೊಸ ಚೈತನ್ಯ, ಹೊಸ ಆಲೋಚನೆಯನ್ನು ಪಡೆಯುತ್ತಿದ್ದೇವೆ. ಜೊತೆಗೆ ತನ್ನಂತೆ ನೊಂದ ಜೀವಿಗಳಿಗೆ ಸ್ಫೂರ್ತಿ ತುಂಬಿ ಬದುಕುವ ಕಲೆಯನ್ನು ಕಲಿಸುತ್ತಿದೆ. ಮಹಿಳಾ ಕಾವ್ಯದಲ್ಲಿ ಇತ್ತೀಚೆಗೆ ಆತ್ಮಸಂಗಾತಿಯ ಮಾದರಿಯು ವಿಶೇಷವಾಗಿ ಅಭಿವ್ಯಕ್ತಗೊಳ್ಳುತ್ತಿದೆ. ತನಗೆ ಆಪ್ತವಾದ ಮನಸ್ಸನ್ನು ತನ್ನ ಅಂತರಂಗದಲ್ಲೇ ಒಲುಮೆಯನ್ನು ತೋರಿಸಿ ತನ್ನಾಸೆಯಂತೆ ಜೀವನ ಕಾಣುವ ನೂತನ ಕ್ರಮವಾಗಿದೆ. ಇತ್ತೀಚಿನ ಮಹಿಳಾ ಕಾವ್ಯದಲ್ಲಿ ಈ ಅಭಿವ್ಯಕ್ತಿ ಕ್ರಮ ಹೆಚ್ಚಾಗಿ ಕಂಡು ಬಂದಿದೆ. ತನ್ನ ಒಲವಿನ ಸಂಗಾತಿಗೆ ತನ್ನ ಅಂತರಂಗದಲ್ಲೇ ಬಯಕೆ ಬೇಡಿಕೆಗಳನ್ನು, ಕನಸುಗಳನ್ನು ಆಶಯವನ್ನು ಹೇಳಿ ಮಿಡಿಯುವ ಮನಸ್ಸುಗಳಿಗೆ ಹೊಸ ಜೀವನದ ಕನಸು ಕಾಣುವುದಾಗಿದೆ.

ಪಿ. ಚಂದ್ರಿಕಾ ಅವರು ಹೇಳಿದಂತೆ ಇದು ಒಬ್ಬಳೇ ಆಡುವ ಆಟವಾಗಿದೆ. ಇಲ್ಲ ಪ್ರೀತಿ, ಮಮತೆ, ವಾತ್ಸಲ್ಯ, ನೋವು ಸಂಕಟ, ವೇದನೆ, ನಗು, ಕನಸು, ಬಯಕೆ ಬೇಡಿಕೆಗಳು ತನ್ನ ಆತ್ಮ ಕೈಹಿಡಿದು ನಡೆಸುವ ಕೈಯೊಂದಿಗೆ ಒಬ್ಬಳೇ ಗುನುಗುವ ಆಡುವ ಆಟವಾಗಿದೆ. ಆಟದಲ್ಲಿ

ಅವಳದೇ ನಿಯಮ, ತೀರ್ಮಾನ, ಅವಳೇ ಅಂತಿಮ ಕಣ್ಣು ಮುಂದಿರುವ ಈ ಸಮಾಜ ಅವಳನ್ನು ಪರಕೀಯಳೆಂದು ನೋಡುವ ಅವಮಾನಿಸುವ ದುರಂತಕ್ಕೆ ಇಲ್ಲಿ ಜಾಗವಿಲ್ಲ. ಅವಳದೇಯಾದ ಸಾಮ್ರಾಜ್ಯ ಅವಳ ಅಂತರಂಗದ ನುಡಿಗಳೇ ಅಂತಿಮವಾಗಿ ಪ್ರತಿಧ್ವನಿಸುತ್ತಿರುತ್ತವೆ ಅವಳದೇ ಆದ ಹೆಜ್ಜೆಗಳು ಸದ್ದುಗಳು, ನುಡಿಗಳು ಅಲ್ಲಿ ಜೀವಂತಿಕೆಯನ್ನು ಪಡೆದಿರುತ್ತದೆ. ತನ್ನ ಪ್ರಿಯಕರನನ್ನು ಒಲಿಸುವ ಮಾದರಿಯು ಹೊಸದಾಗಿರುತ್ತವೆ. ಅದು ಅವಳೇ ಸೃಷ್ಟಿಸಿಕೊಂಡ ಜೀವ ಸಂಪಿಗೆಯ ಮಾದರಿಗಳಾಗಿರುತ್ತವೆ. ತನ್ನೊಳಗೆ ತಾನೇ ಮರುಹುಟ್ಟ ಯಾವ ರೀತಿಯಾಗಿ ಪಡೆಯುತ್ತದೆ ಎಂಬುದನ್ನು ಆತ್ಮಸಂಗಾತಿಯ ಮೂಲಕ ಅಭಿವ್ಯಕ್ತಿಗೊಳ್ಳುವುದು ಮಹಿಳಾಕಾವ್ಯದಲ್ಲಿ ಕಂಡು ಕಾಣುತ್ತೇವೆ.

ಕನಸಿನ ಹುಳುಗಳು<br>
ಗೂಡ ಕಟ್ಟವೆ<br>
ಹೊಂಬಣ್ಣದ ಚಿಟ್ಟೆಯಾಗುವ<br>
ಆಶೆಯಲ್ಲಿ<br>
ಹೊರಗಿನ ಕುದಿತಕ್ಕೆ<br>
ಒಳಗೆ ಚಡಪಡಿಸಿ<br>
ಸಾಯುತ್ತವೆ. ಪಾಪ

ಜೀವ ತಂತಿಯಲಿ<br>
ಸಾವಿನೆಳೆಗಳ ಕಸೂತಿ<br>
ಹೆಣದ<br>
ಕುಲಶ ಕರ್ಮಿಯಾರೋ<br>
ಹೆಣಗೆಯ ಮರ್ಮವೇನೆ?[೨೧]

ಕವಯಿತ್ರಿ ದು. ಸರಸ್ವತಿಯವರು ತಮ್ಮ ಅಂತರಂಗದಲ್ಲಿ ಹುಟ್ಟಿದ ಭಾವನೆಗಳನ್ನು ತನ್ನ ಆತ್ಮದೊಂದಿಗೆ ಮಾತುಕತೆ ನಡೆಸಿದಂತಿದೆ. ಒಳ ಸಂವೇದನೆಗಳಿಗೆ ಕನ್ನಡಿ ಹಿಡಿದಂತಿದೆ. ಕವಯಿತ್ರಿಯ ಅಂತರಂಗದ ಕನಸುಗಳು ಹೂಗಳಾಗಿ ಅರಳಿವೆ. ಹಾಗೂ ಒಲವಿನ ಗೂಡು ಕಟ್ಟಿವೆ. ಹೊಂಬಣ್ಣದ ಚಿಟ್ಟೆಯಾಗಿ ಹಾರಲು ಬಯಸಿವೆ ಎಂಬುದನ್ನು ತನ್ನ ಒಲವಿಗೆ ಮಿಡಿಯುವ ಮನಸ್ಸಿಗೆ ಹೇಳಲಾರದೆ ತನ್ನ ಆತ್ಮದಲ್ಲೇ ತನ್ನ ಸಂಗಾತಿಯನ್ನು ನೆನಸಿಕೊಂಡು ಕಾಣುವ ಕನಸಿನಾಟವಾಗಿದೆ. ಹೇಳಿದರೆ ಧ್ವನಿಗೊಡದೆ ಇರುವ ದುರಂತದ ಸ್ಥಿತಿಗೆ ಒಳಗೊಳ್ಳಗೆ ಕುದಿಯುವ ಕನಸುಗಳ ಒಳಗೊಳಗೆ ಚಡಪಡಿಸುತ್ತಿರುವ ವೇದನೆಯು ಸಾಯುವ ಹಂತವೆ ಎಂದು ನೋವಿನಿಂದ ನುಡಿದಂತಿದೆ. ಆ ಕನಸಿನ ಭಾವನೆಗಳನ್ನು ಹೆಣದ ಕುಶಲಕರ್ಮಿಯರೂ ಹೆಣೆಯುವ ಹುಟ್ಟುವ ಸಂವೇದನೆಗಳ ಮರ್ಮ ಎಂಥಹದ್ದೋ ಎಂದು ಅಚ್ಚರಿ ಪಟ್ಟಂತಿದೆ. ಈ ಮಾದರಿ ಹೆಣ್ಣಿನ ಅಂತರಂಗಕ್ಕೆ ಸಮಾಧಾನ ತರುವ ಮಹತ್ತರವಾದ ಮಾದರಿಯಾಗಿದೆ.

ತಾನೇ ಮಿಡಿಯುವ ತನಗಾಗಿ ಮಿಡಿಯುವ ಮನಸ್ಸಿಗೆ ಏನೂ ಹೇಳಿಕೊಳ್ಳಬೇಕೊ ಏನನ್ನು ಪಡೆಯಬೇಕೋ ಎಂಬುದನ್ನು ತನ್ನ ಅಂತರಂಗದಲ್ಲೇ ಪಡೆಯುತ್ತದೆ.

ಹೆಣ್ಣಿಗೆ ತನ್ನ ಅಂತರಂಗದಲ್ಲಿ ಹುಟ್ಟಿದ ಭಾವನೆಗಳಿಗೆ ಮಿಡಿಯುವ ಮತ್ತೊಂದು ಜೀವನವನ್ನು ಕರೆಯುವ ಪರಿ ವಿಶೇಷತೆಯಿಂದ ಕೂಡಿದೆ. "ಯಾರಾದರೂ ಬರಲಾರದೆ ಹಾಗೇ ಬೆರಳಾಡಿಸಿ ನವಿರಾಗಿ ಬಿಡಿಸಿ ಹೊಂಬಣ್ಣ ಚಿಟ್ಟೆಯಾಗಿ ಜೊತೆಗೂಡಿ ಹಾಡಬಾರದೆ' ಆ ಜೀವಿಯ ಬರುವಿಕೆಗೆ ಆಶೆಯಿಂದ ಕಾದಿದೆ ಈ ಮನ ಎಂಬುದನ್ನು ಇಲ್ಲಿ ವ್ಯಕ್ತಪಡಿಸಿರುವುದು ಕಾಣುತ್ತೇವೆ. ಒಲವಿನ ಗೂಡಿನೊಳಗೆ ಜೋಡು ಜೀವ ಜೀವಿಸುವ, ಉಸಿರಾಡುವ ಹೊಸ ಲೋಕ ಕಾಣಲು ತನ್ನ ಅಂತರಂಗದಲ್ಲೇ ಧ್ವನಿ ಇರದೇ ಪದವಿರದೆ ನುಡಿಯುವ ನುಡಿಯಾಗಿ ಆತ್ಮಸಂಗಾತಿಯ ನುಡಿಯಾಗಿವೆ. ಈ ಸಂಜೆ ಏಕಾಂತಕ್ಕೆ ಜೀವ ತುಂಬಲು ನೀನು ಬೇಕು ಎನ್ನುವ ಬಯಕೆ ಜೀವ ಮಿಡಿತರ ಸದ್ದಿನ ಮಿಡಿತವಾಗಿದೆ. ಇಲ್ಲಿ ಮಿಡಿಯುವ ಜೀವ ಯಾವ ಅಂತರ ಬೇರವಿಲ್ಲದೆ ನಡೆಯುವುದಾಗಿದೆ.

ಪ್ರೀತಿ ಎಂದರೇನು?, ಪ್ರೇಮ ಎಂದರೇನು?, ನಗು ಎಂದರೇನು? ಹೀಗೆ ಹಲವು ಒಲವಿನ ಪ್ರಶ್ನೆಗಳನ್ನು ಕೇಳಿಕೊಂಡು ಅಂತರಂಗದಲ್ಲೇ ಉತ್ತರ ಕಾಣಲು ಬಯಸುತ್ತಾರೆ. ಕಂಡುಕೊಂಡ ಉತ್ತರ ತನ್ನ ಅಸ್ತಿತ್ವ, ಅಸ್ಮಿತೆಯ ಭಾಗವಾಗಿರುತ್ತದೆ. ಪ್ರೇಮ, ತ್ಯಾಗ, ಸಂಸಾರ, ಕುಟುಂಬ, ಧರ್ಮ ಹೀಗೆ ಹಲವು ಬಗೆಯಲ್ಲಿ ತನ್ನ ಪ್ರಶ್ನಿಸಿರುವುದು ವ್ಯಕ್ತಗೊಂಡಿದೆ. ಹಾಗೂ ಅವುಗಳಿಗೆ ಹೊಸಬಗೆ ಅರ್ಥವನ್ನು ವ್ಯಾಖ್ಯಾನಿಸಿರುವುದು ಕಂಡುಬಂದಿದೆ. ಮಹಿಳಾ ಕಾವ್ಯ ಆರಂಭದಲ್ಲಿದ್ದ ಅಳುಕು, ಮುಜುಗರ, ಸಂಕೋಚಗಳಿಂದ ಬಿಡಿಸಿಕೊಂಡು, ಗೃಹಿಣಿಯರಾಗುತ್ತಾ, ಪ್ರಬುದ್ಧರಾಗುತ್ತಾ ಮುನ್ನಡೆದಿದ್ದಾರೆ. ತಮ್ಮನ್ನು ಸಮಾಜವನ್ನು ಏಕಕಾಲದಲ್ಲಿ ಎಲ್ಲ ಬಗೆಯ ಟೀಕೆ, ತಮಾಷೆ, ವ್ಯಂಗ್ಯ, ವಿಮರ್ಶೆಗಳಿಗೆ ಗುರಿಪಡಿಸುತ್ತಾ ತಮ್ಮ ಗಟ್ಟಿತನವನ್ನು ಸ್ಥಾಪಿಸಿಕೊಳ್ಳುತ್ತಾ ತಮ್ಮ ಸ್ಥಿತಿಯನ್ನು ಮಾತ್ರದಲ್ಲಿ ಸಾಧ್ಯತೆಗಳನ್ನು ತೋರುತ್ತಾ, ಅವರು ತಮ್ಮ ಅಭಿವ್ಯಕ್ತಿಯ ಸ್ವರೂಪದಲ್ಲಿ ಅನನ್ಯತೆಯನ್ನು ಕಾಣಿಸುವಿಕೆ ತಮ್ಮ ನಿತ್ಯ ಬದುಕಿನ ಸಾಮಾನ್ಯ ವಿವರಣೆಗಳಲ್ಲೇ ಮಾತಾನಾಡುತ್ತಾ ವಿವರಗಳನ್ನೇ ಪ್ರತೀಕಗಳಾಗಿಸುವ ಸೃಜನಶೀಲತೆಯನ್ನು ಅವರು ಪ್ರಕಟಿಸಿದ್ದಾರೆ. ಮನೆಗೆಲಸ, ಆಹಾರ, ಪ್ರಧಾನ ಉಡುಪು, ಮಧ್ಯಮವರ್ಗ, ಆಶೆ, ನಿರಾಸೆ, ಕನಸು, ಗೋಳುಗಳ ಪ್ರಪಂಚದಲ್ಲೇ ತೆರೆದಿಟ್ಟರೂ ಅವುಗಳ ಮೂಲಕವೇ ಬದಲಾಗುತ್ತಿರುವ ಆಸ್ಮಿತೆಯ ಸ್ವರೂಪವನ್ನು ಆಶೋತ್ತರಗಳನ್ನು ಅವರು ಧ್ವನಿಸತೊಡಗಿದ್ದಾರೆ. ಸ್ತ್ರೀ ಸಂವೇದನೆ ಎಂಬುದು ಕವಿತೆಗಳಲ್ಲಿ ನಿತ್ಯ ಮಾತಾಗಿದೆ. ಅಂತರ್ಮುಖತೆ ಮತ್ತು ಬಹಿರ್ಮುಖತೆ ಎರಡೂ ನೆಲೆಗಳಲ್ಲಿ ಯಶಸ್ವಿಯಾಗಿರುವ ಮಹಿಳಾ ಕಾವ್ಯ, ಇತ್ತೀಚಿನ ದಿನಮಾನಗಳಲ್ಲಿ ಹೊಸ ಚಿಂತನೆಗೆ ದಾರಿ ಮಾಡಿಕೊಟ್ಟಿದೆ.

ಸ್ತ್ರೀವಾದ ಸರಣಿಯೂ ಏಕಘನಾಕೃತಿಯ ಆಕಾರದಲ್ಲಿ ಬದಲಾಗಿ ಅನೇಕ ರೀತಿಯ ಸಂಕೀರ್ಣತೆಗಳಿಂದ ಕೂಡಿದೆ. ಅನೇಕ ಆಯಾಮಗಳನ್ನು ಬಹುಸ್ತರಗಳ ಸಂವೇದನೆಯನ್ನು

ಹೊಂದಿದೆ. ವಿಭಿನ್ನ ಶಾಖೆಗಳನ್ನು ಸ್ತ್ರೀವಾದ ಒಳಗೊಂಡಿದೆ. ಗಂಡು ಹೆಣ್ಣೆಂಬ ವರ್ಗೀಕರಣ ದೈಹಿಕ ಭಿನ್ನತೆಗೆ ಸಂಬಂಧಿಸಿದುದ್ದಾದರೂ ಅವುಗಳಿಂದಲೇ ಪ್ರತಿವಾದಂತೆ ಮೇಲ್ನೋಟಕ್ಕೆ ಕಂಡುಬರುವ ಸ್ತ್ರೀ ಪುರುಷತ್ವವೆಂಬ ಲಿಂಗಪ್ರಭೇದವು ಸಾಮಾಜಿಕವಾಗಿ, ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಟ್ಟಲ್ಪಟ್ಟ ಅರ್ಥಕಲ್ಪನೆಯಾಗಿದೆ ಎಂಬುದು ಸ್ತ್ರೀವಾದಿ ಚಿಂತಕಿಯರ ಅಭಿಪ್ರಾಯ. ಹೀಗೆ ಗಂಡು ಹೆಣ್ಣು ಜೈವಿಕ ವ್ಯತ್ಯಾಸಗಳಿಗೆ ಸಮಾಜದ ಆಯಾಮ ದೊರೆತು ಅದೇ ಲಿಂಗಬೇಧತೆಯ ಹುಟ್ಟಿಕೊಂಡಿದೆ. ಆತ್ಮಸಂಗಾತಿ ಎಂಬ ಪರಿಕಲ್ಪನೆಯು ಮಹಿಳಾ ಕಾವ್ಯದಲ್ಲಿನ ಹೆಚ್ಚಿಗೆ ಕಂಡು ಬರುವುದಕ್ಕೆ ಅಂತರಂಗದ ತಳಮಳವಾಗಿದೆ. ಖಾಸಗೀತನದ ಭಾವನೆಗಳನ್ನು ಒಂದು ಕಲ್ಪಿತ ಮಾತುಗಳನ್ನು ಕಲ್ಪಿಸಿಕೊಂಡು ಅಥವಾ ಹೇಳಲಾಗದೆ ಇರುವ ಒಲವಿನ ಜೀವನಕ್ಕೆ ಸದಾ ಧ್ಯಾನಸ್ಥಳಾಗಿ ತನ್ನ ಭಾವನೆಗಳನ್ನು ಹಂಚಿಕೊಳ್ಳುವ ಪರಿ ಆತ್ಮಸಂಗಾತಿಯಾಗಿದೆ

ಗುರುತ ಮರೆತು
ಬೆರತು ಹೋಗು ಬಾ ಎಂದು ಕರೆ
ಯಿತ್ತ ಆ ಜೀವಧ್ವನಿ
ಅನುಕರಣಿಸಿ ರಸಹನಿಸಿ
ಹಿಮಗಟ್ಟಿದ ನೋವೆಲ್ಲ ದ್ರವಿಸಿ
ಕಲಕಿ ಕಲಕಲ ಹರಿದದ್ದು
ನದಿಯಾಗೋ... ನಾದವಾಗೋ?[೨೩]

ಕವಯಿತ್ರಿ ಗೀತ ವಸಂತರವರು ಜೀವಧ್ವನಿ ಎಂಬ ಕವಿತೆಯಲ್ಲಿ ಆತ್ಮಸಂಗಾತದ ಧ್ವನಿಗಾಗಿ ಮಿಡಿಯುವುದು ಕಂಡು ಬರುತ್ತದೆ. ಗುರುತು ಮರೆತು ಬೆರತು ಹೋಗು ಬಾ ಎಂದು ಆತ್ಮ ಕರೆಯುತ್ತಿದೆ ಎಂದು ನುಡಿಯುತ್ತಿದ್ದಾರೆ. ಗುರುತು ಎಂದರೆ ಇದ್ದ ಸಂಪ್ರದಾಯ, ಚೌಕಟ್ಟು, ರೂಪ ಎಲ್ಲವೂ ಮರೆತು ಗಡಿದಾಟಿ ಬೆರೆತು ಕೂಡು ಬಾ ಎಂದು ತನ್ನ ಒಲವಿನ ಜೀವ ಧ್ವನಿಗೆ ಧ್ವನಿಗೂಡಿಸು ಬಾ ಎಂದು ಕರೆಯಲಾಗಿದೆ. ತನ್ನ ಘನವಾದ ಮೂಲ ಅಂತರಾಳದಲ್ಲಿ ಏನೋ ಕಂಪಿಸುತ್ತಿದೆ, ಸಂಚರಿಸಿದಂತಾಗುತ್ತದೆ ಕಲಕಲ ಹರಿಯುತ್ತಿದೆ. ನದಿಯಂತೆ ಹರಿದು ನಾದ ಹೊಮ್ಮಿಸುತ್ತದೆ. ತನ್ನ ಅಂತರಂಗದಲ್ಲಿ ಒಲವಿನ ಧ್ವನಿಯೊಂದಿಗೆ ನದಿಯಂತೆ ಹರಿಯಲು, ಹಕ್ಕಿಯಂತೆ ಹಾರಲು, ಆಕಾಶದ ನಕ್ಷತ್ರವಾಗಿ ಜೀವಿಸಲು, ಕತ್ತಲಲ್ಲಿ ಬೆಳಕನ್ನು ಬಿತ್ತಿ ನಡೆಯುವ ಕನಸು ಕಾಣುವುದು ಇವರ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಕಣ್ಣಿಗೆ ಕಾಣುವ ಬಣ್ಣಗಳ ಮಡುವಿನಲ್ಲಿ ಕುಂಚದಂತಿದ್ದ ಕಲಸಿ ಹೊಸದೊಂದು ಚಿತ್ರಬರೆಯಲು ಆ ಚಿತ್ರ ಈ ಲೋಕ ನೋಡಲಾರದಂತೆ ಕಾಮನ ಬಿಲ್ಲಿನ ಚಿತ್ರದಂತಿರಬೇಕು ಎಂಬ ಆಸೆ ಇವರದ್ದಾಗಿದೆ. ಇಂತಹ ಆಸೆಗಳನ್ನು ತಮ್ಮ ಮನಸ್ಸಿನಲ್ಲೇ ಒಲಿದು ಮನಸ್ಸಿನೊಂದಿಗೆ ಸಂವಾದ ನಡೆಸುವುದು ಇವರ ಕಾವ್ಯದಲ್ಲಿ ಗೋಚರಗೊಂಡಿದೆ. ಕಾಳಕತ್ತಲೆಯಲ್ಲಿ ತಬ್ಬಿ ಬೆಳಕಿನ ಸ್ಪರ್ಶದ ದೀಪ ಹಚ್ಚಿ ಆ ಬೆಳಕಲ್ಲೇ ಲೋಕ ಹೊಸ ಜೀವ ಪಡೆಯಬೇಕೆಂಬ ಹಂಬಲ ಕಾಣುತ್ತೇವೆ. ಗಾಳಿಯೂ ಬೀಸದ

ನಿರ್ವಾತ ಸ್ಥಳದಲ್ಲಿ ಸುಗಂಧದ ಪರಿಮಳ ಬೀಸಬೇಕು ಅದು ತಮ್ಮಿಬ್ಬರ ಒಲುಮೆಯಲ್ಲಿ ಜನಿಸಿದ ಗಾಳಿಯಾಗಬೇಕು. ಅಂತರಾಳದಲ್ಲಿ ಹೊಸ ಶಕ್ತಿ ಚಿಮ್ಮುವ ಚಿಲುಮೆಯಂತಿರಬೇಕು ಎಂದು ಆಸೆಪಟ್ಟಂತಿದೆ. ಗೀತಾ ವಸಂತ ಅವರು ಕಾವ್ಯದಲ್ಲಿ ಒಲೆಯ ಬೆಂಕಿ, ಗೋಡೆಯ ಮೇಲೆ ಬರೆದ ಚಿತ್ರದಲ್ಲಿ ಹೆಣ್ಣಿನ ರೂಪ ಕಂಡು ಬೆಂಕಿಯೊಳಗೆ ಹೆಣ್ಣೇ ಹೆಣ್ಣಿನೊಳಗೆ ಬೆಂಕಿಯೇ ಎಂಬ ಜಿಜ್ಞಾಸೆಯಲ್ಲಿ ಬರೆಯುತ್ತಾರೆ. ಬರೆಯುತ್ತಾ ಹೊಸ ಪರಿಮಳದ ಬೀಜವನ್ನು ಬಿತ್ತಲು ಹೊರಟಿದ್ದಾರೆ. ಆ ಜೀವ ಈ ನೆಲದಲ್ಲಿ ಹೊಸ ರೂಪ ಪಡೆದು ಆ ರೂಪದಿಂದ ಹೊಸ ಪರಿಮಳದ ಬೀರಬೇಕು. ಆ ಪರಿಮಳದಲ್ಲಿ ಎಲ್ಲ ಮನಸ್ಸುಗಳ ತನ್ನ ತನವನ್ನು ಪಡೆದು ನೆಮ್ಮದಿಯ ನಗುವನ್ನು ಚೆಲ್ಲಬೇಕು ಎಂದಿದ್ದಾರೆ. ಹೆಣ್ಣು ತನ್ನ ಅಂತರಂಗದಲ್ಲಿ ಅಡಗಿದ ಜೀವಿಯೊಂದಿಗೆ ಒಂದು ಆಪ್ತಸಂವಾದ ನಡೆಸುವ ಒಲುಮೆಯ ಬೆಳಕನ್ನು ಮುಂದೆ ನಿಂತು ಮಾತನಾಡುವುದೇ ಆತ್ಮಸಂಗಾತಿಯಾಗಿದೆ.

ಕಾವ್ಯ ಹೊಸದಾಗಿ ರೂಪಗೊಳ್ಳುತ್ತಿರುವ ಸಮಯದಲ್ಲಿ ಹೊಸ ಹೊಸ ಮಾದರಿಗಳು ಹೊಸ ಸಂವೇದನೆಯೊಂದಿಗೆ ವಿಶಿಷ್ಟ ರೀತಿಯಲ್ಲಿ ಕಾವ್ಯ ಪಯಣ ಮುಂದುವರೆದಿದೆ. ಕವಯಿತ್ರಿ ತನ್ನ ಆಪ್ತ ಭಾವನೆಗಳನ್ನು ಗೆಳಯ ಗೆಳತಿಯನ್ನು ತನ್ನೊಳಗೆ ಸೃಷ್ಟಿಸಿಕೊಂಡು ಸಂವಾದದ ರೀತಿಯಲ್ಲಿ ತನ್ನ ಆಶಯವನ್ನು ವ್ಯಕ್ತಪಡಿಸುವ ರೀತಿ ವಿಶಿಷ್ಟವಾಗಿ ಅಭಿವ್ಯಕ್ತಗೊಳ್ಳುತ್ತಿದೆ. ತನ್ನೊಳಗೆ ತಾನೇ ಹೇಳಿಕೊಳ್ಳುವ ಒಂದು ಬಗೆಯ ಸ್ವಗತದ ಮಾದರಿಯದ್ದಾಗಿದೆ. ಹೊಸ ಭಾಷಾ ಬಳಕೆಯನ್ನು ಇಲ್ಲಿ ಬಳಸಿಕೊಂಡು ದುಃಖ, ಸಂತೋಷ ಆಪ್ತ ವಿಚಾರಗಳನ್ನು ಹೊರ ಚೆಲ್ಲುವ ಬಗೆ ಹೊಸ ಮಾದರಿಯದ್ದಾಗಿದೆ. ಕವಯಿತ್ರಿ ತನ್ನ ಆಲೋಚನೆಗಳಿಗೆ ಸೂಕ್ತವಾದ ಮನಸ್ಸೊಂದನ್ನು ಸೃಷ್ಟಿಸಿಕೊಂಡು ಆ ಮನಸ್ಸಿನೊಂದಿಗೆ ಮುಖಾಮುಖಿಯಾಗಿ ಒಂದು ಬಗೆ ಏಕಾಭಿನಯ ಪಾತ್ರದ ರೀತಿಯಲ್ಲಿ ವ್ಯಕ್ತಿಸುವುದಾಗಿದೆ. ತನ್ನೊಳಗೆ ತಾಳಿದ ಒಳನೋಟಗಳನ್ನು ಸಮಾಜಕ್ಕೆ ನೇರವಾಗಿ ಹೇಳದೆ ತನ್ನೊಳಗೆ ತಾನೇ ಗುನುಗುವ ರೀತಿಯಂತೆ ತಾನಾಗೆ ತಾನು ಹೇಳಿಕೊಳ್ಳುವ ರೀತಿಯಲ್ಲಿ ಖಾಸಗಿತನದಿಂದ ಸಾಮಾಜಿಕತೆಗೆಡೆಗೆ ಸಾಗಬೇಕಾದ ಹೊಸ ಮಾರ್ಗ ಇದಾಗಿರುವುದು ಹೊಸ ತಲೆಮಾರಿನ ಮಹಿಳಾ ಕವಯಿತ್ರಿಯರಾದ, ವಿಭಾ, ತಾರಿಣಿ ಶುಭದಾಯಿಣಿ, ಅನುಪಮಾ, ಸಂಧ್ಯಾದೇವಿ, ಅಕ್ಷತಾ, ಭಾರತಿದೇವಿ, ಚಂದ್ರಿಕಾ ಪಿ., ದೀಪಾ ಗಿರೀಶ್, ಗೀತಾ ವಸಂತ, ಲಲಿತಾ ಸಿದ್ಧಬಸವಯ್ಯ, ಪ್ರಜ್ಞಾ ಮತ್ತೀಹಳ್ಳಿ ಮುಂತಾದ ಕವಯಿತ್ರಿಯವರು ನೂತನ ಪ್ರಯೋಗಗಳನ್ನು ತಮ್ಮ ಕಾವ್ಯಾಭಿವ್ಯಕ್ತಿಯಲ್ಲಿ ಮಾಡುತ್ತಿರುತ್ತಾರೆ.

ಕಾವ್ಯ ಎನ್ನುವುದು ಭಾಷೆಯ ಒಂದು ಸಂಸ್ಕೃತಿಯ ನಿರ್ಮಿತವಾದ್ದರಿಂದ ಅದಕ್ಕೆ ಒಂದು ಸಮಷ್ಟಿಯ ಛಾಪು ಬರುತ್ತದೆ. ಆ ಮೂಲಕ ಸಾಮುದಾಯದ ಆಶೋತ್ತರಗಳು ಕವಿತೆಯೊಳಗಡೆ ಹೋಗುವ ಹಾಗೆ ಆಗುತ್ತದೆ. ಹೀಗೆ ಒಂದು ರೀತಿಯ ಸಮುದಾಯಿಕತೆ ಲಭ್ಯವಾದಾಗ ಕವಿತೆಯಲ್ಲಿ ಸುಖ ದುಃಖ, ಕಷ್ಟ ನಷ್ಟ ಎಲ್ಲದ್ದಕ್ಕೂ ನಾವೆಲ್ಲರೂ ಭಾಗಿದಾರರಾಗುತ್ತೇವೆ.

ಕವಿತೆಯಲ್ಲಿ 'ನಾನು' ಎಂದು ಪುನರುತ್ತಿಯಾಗುವುದು ಸ್ವಗತವಾದರೆ ತನ್ನೊಳಗಿನ ಇನ್ನೊಂದು ಆಪ್ತ ಜೀವಿಯನ್ನು ಕಲ್ಪಿಸಿಕೊಂಡು ಸಂವಾದ ಮಾಡುವುದು ಆತ್ಮ ಸಂಗಾತಿಯಾಗಿದೆ. ತನ್ನ ಅಂತರಂಗದ ಜೊತೆಗಾರನ ಜೊತೆಯಲ್ಲಿ ಒಲವಿನ ಸಂಭಾಷಣೆಯು ಆತ್ಮ ಸಂಗಾತಿಯಾಗಿದೆ. ಸಮಕಾಲೀನ ಕನ್ನಡ ಕಾವ್ಯದಲ್ಲಿ ವ್ಯಕ್ತಿ ತನ್ನತನದ ಮೂಲಕ ಸಮುದಾಯದ ಸಂಕಟಗಳನ್ನು ಮುಖಾಮುಖಿಯಾಗಿಸುವುದು ಕಂಡು ಬಂದಿದೆ. ಅನೇಕ ಕವಯಿತ್ರಿಯರು ತಳ ಸಮುದಾಯದಿಂದ ಬಂದು ಆ ಸಮುದಾಯದ ಸಂಕಟಗಳನ್ನು ಸಮಾಜಕ್ಕೆ ಮುಖ್ಯ ನೆಲೆಗೆ ತರುವಲ್ಲಿ ಈ ಒಂದು ಮಾದರಿಯೂ ಸಹಕಾರಿಯಾಗಿದೆ. ಸಮಕಾಲೀನ ಅನೇಕ ಕವಯಿತ್ರಿಯರು ಆತ್ಮಸಂಗಾತಿಯರ ನೆಲೆಯಲ್ಲಿ ಕಾವ್ಯಾಭಿವ್ಯಕ್ತಿಸುವುದು ಹೆಚ್ಚಾಗಿ ಕಂಡು ಬಂದಿದೆ.

ತಾನು ಕುದುರೆಯಾಗುವುದು
ಕುದುರೆ ತಾನಾಗುವುದು
ಕಾಲನ ಓಟದಲ್ಲಿ ನಿಂತು
ಗಾಳಿಯನು ಕರೆದಂತೆ
ಅಲೆ ಎದ್ದು ಕುಸಿದು ಹರಡುವುದು
ಅಂತಃಕರಣದ ಕುದುರೆ
ಕಡಲ ಕುದಿತವ ಕಡೆಗಮಿಸಿ
ಋತವ ಹೊತ್ತು ಓಡುತಿಹುದು
ನೀರೊಳಗಿನ ನೆಲ
ನೆಲದೊಳಗಿನ ನೀರ ಸಾರುತಿಹುದು.[೨೪]

ಕವಯಿತ್ರಿ ಕವಿತಾ ರೈ ಅವರು ತಮ್ಮ ಸದದಲ್ಲಿ ಅಂಕರಂಗದ ಅಂತಃಕರಣವನ್ನು ಕುದುರೆಯಾಗಿಸಿ ಮಾತನಾಡುವುದು ವಿಶೇಷವಾಗಿದೆ. ಇನ್ನೊಂದು ಬಗೆಯ ಆತ್ಮಸಂಗಾತಿಯಾಗಿದೆ. ತನ್ನ ಸಂಗಾತಿಯನ್ನು ಓಡುವ ಕುದುರೆಗೆ ಹೋಲಿಸಿ ಸಂಭಾಷಣೆ ಮಾಡುವುದು ವ್ಯಕ್ತವಾಗಿದೆ. ತಾನು ಕುದುರೆಯಾಗುವುದು, ಕುದುರೆ ನಾನಾಗುವುದು ಇಲ್ಲಿ ಎರಡು ಬೇರೆ ಬೇರೆ, ಬೇರೆ ಬೇರೆಯಾದದ್ದು ಏಕವಾಗುವುದು ವಿಶೇಷವಾಗಿದೆ. ತನ್ನ ಅಂತರಂಗದಲ್ಲೇ ನುಡಿಯುವ ಮಾತುಗಳಿಗೆ ತಾನೇ ಮುಖಾಮುಖಿಯಾಗಿ ಅದನ್ನು ಓಡುವ ಕುದುರೆಯಾಗಿ ಸವಾರಿ ಮಾಡುವ ಕನಸು ಕಾಣುತ್ತಿದ್ದಾರೆ. ಓಡುವ ಕುದುರೆ, ಗಾಳಿ, ನೆಲೆ, ಅಂತಃಕರಣ, ಕುದಿಯುವ ಕಡಲು, ಕಾಲ, ನೀರು, ನೆಲ ಇವು ವಿಶಿಷ್ಟ ರೀತಿಯ ರೂಪಕಗಳಾಗಿವೆ. ಈ ರೂಪಕಗಳು ಅಂತರಂಗದ ತಳಮಳ ಮತ್ತು ತಲ್ಲಣವನ್ನು ಚಿತ್ರಿಸುತ್ತದೆ.

ಗಾಳಿಯನ್ನು ಕರೆತಂದು ಅದರೊಂದಿಗೆ ತನ್ನ ಒಲವಿನ ಆಶಯವನ್ನು ಅಭಿವ್ಯಕ್ತಿಸಿ ಗಾಳಿಯೊಂದಿಗೆ ಏಕವಾಗುವುದಾಗಿದೆ. ಕೂಡಿದರೆ ಕುರುಹು ಗೆಟ್ಟಗೆ ಕೊಡಬೇಕು ಎನ್ನುವ ರೀತಿಯಲ್ಲಿ ಗಾಳಿಯೊಂದಿಗೆ ಕೂಡಬೇಕು ಅದು ಅಂತರಂಗದ ಕನಸ್ಸುಗೊಂದು ಅಭಿವ್ಯಕ್ತಿಸಿದಂತಿದೆ.

ಹಾಗೇ ಅಂತರಂಗದಲ್ಲಿ ಕುದಿಯುವ ಇನ್ನೊಂದು ಮನಸ್ಸನ್ನು ಕಡೆಗಣಿಸಿ ಅದನ್ನು ಧಿಕ್ಕರಿಸಿ ತನ್ನ ಇಚ್ಛೆಯಂತೆ ಓಟವನ್ನು ಮುಂದುವರೆಸಬೇಕೆನ್ನುವುದು ಕಾಲದ ಅಭಿಲಾಷೆಯಂತೆ ಅಭಿವ್ಯಕ್ತಿಸಿದ್ದಾರೆ. ನೀರೊಳಗಿನ ನೆಲ, ನೆಲದೊಳಾಗಿನ ನೀರು ತನ್ನೊಳಗಿನ ಆತ್ಮ ಆತ್ಮದೊಳಗಿನ ತಾನು ಏಕವಾಗಿ ಜೀವಿಸುವ ಸ್ವರೂಪ ಕಾಣುತ್ತೇವೆ. ಬರವಣಿಗೆಯ ಆಪ್ತವಾದ ಮಾಧ್ಯಮವಾಗಿದೆ ಅದರಲ್ಲಿ ವಿಶಿಷ್ಟವಾಗಿ ಕಾವ್ಯವು ತನ್ನ ಅಂತರಂಗವನ್ನು ಹೊರಹಾಕಲು ಸಮರ್ಥವಾದ ಮಾಧ್ಯಮ ಉಳಿದ ಪ್ರಕಾರಗಳಾದ ಕಥೆ ಕಾದಂಬರಿಯಲ್ಲಿ ಕಾವ್ಯದಲ್ಲಿ ವ್ಯಕ್ತಗೊಳ್ಳುವ ಆಪ್ತತೆ ಅಲ್ಲಿ ಇರುವುದಿಲ್ಲ. ಯಾಕೆಂದರೆ ಕಾವ್ಯದ ಭಾಷೆ ರೂಪಕ, ಸ್ವರೂಪ ಅಂತಹದ್ದು ಅದರಲ್ಲಿ ಆತ್ಮ ಸಂಗಾತಿಯ ಪರ ಹೆಚ್ಚಾಗಿ ಕಾವ್ಯದಲ್ಲಿ ಅದರಲ್ಲಿ ವಿಶಿಷ್ಟವಾಗಿ ಮಹಿಳಾ ಕಾವ್ಯದಲ್ಲಿ ಕಂಡು ಬರುತ್ತದೆ.

ಹೆಣ್ಣಿನ ಕಾವ್ಯದಲ್ಲಿ ಅನೇಕ ಬಾರಿ ವಾಚ್ಯಾರ್ಥಕ್ಕಿಂತ ಭಿನ್ನವಾದ ಶರೀರಾರ್ಥವೂ ಇರುತ್ತದೆ. ಹಾಗೆಯೇ ಪದಗಳ ನಡುವಿನ ಮೌನವೂ ಹೆಣ್ಣಿನ ಕಾವ್ಯದಲ್ಲಿ ಪ್ರಧಾನ ಪಾತ್ರ ವಹಿಸುತ್ತಿರುತ್ತದೆ. ಕಾವ್ಯವು ಹೆಣ್ಣಿನ 'ಅಡಗು ತಾಣ' ಎನ್ನುತ್ತಿರುವಾಗ ಹೇಳಬೇಕಾದುದೆನ್ನೆಲ್ಲ ರೂಪಕಗಳಲ್ಲಿ ಅಡಗಿಸಿ, ಅಡಕವಾಗಿಸಿ ಧ್ವನಿಪೂರ್ಣವಾಗಿ ಹೇಳುವ ಹೆಣ್ಣಿನ ಕಾವ್ಯದ ರೂಪಕಗಳು ಕೇವಲ ಸೌಂದರ್ಯ ಮೀಮಾಂಸೆಯ ಗೆಲುವಿನ ಪತಾಕೆಗಳಲ್ಲಿ ಅವು ಅವಳ ಬದುಕಿನ ವಿನ್ಯಾಸದ ರೂಪಕಗಳೂ ಹೌದು. ಹೆಣ್ಣಿನ ಕಾವ್ಯ ಭಾಷೆಯೇ ವಿಶಿಷ್ಟವಾದದ್ದೆ ಅಲ್ಲಿ ಬಳಸುವ ರೂಪಕ, ಸಂವೇದನೆ, ಆಶಯ ಎಲ್ಲವೂ ಮಾತ್ರ ಸ್ವರೂಪದಲ್ಲಿರುತ್ತದೆ. ಆದರೆ ಪ್ರಸ್ತುತದಲ್ಲಿ ಆ ನಿಯಮವನ್ನು ಮೀರಿ ಹೊಸದೊಂದು ಭಾಷೆಗಾಗಿ ಹಂಬಲಿಸುತ್ತಿರುವುದು ಕಂಡು ಬಂದಿದೆ. ಪ್ರಸ್ತುತದಲ್ಲಿ ವ್ಯವಹಾರದಲ್ಲಿರುವ ಭಾಷೆ ಅವರ ಸಂವೇದನೆಗಳನ್ನು ಹೊರ ಹಾಕಲು ಶಕ್ತವಾಗಿಲ್ಲ ಎನ್ನುವುದು ಅನೇಕ ಲೇಖಕಿಯರ ಅಭಿಪ್ರಾಯವಾಗಿದೆ. ಅದೆಷ್ಟೋ ಬಾರಿ ಕಿವಿಯಿಲ್ಲದವರೊಂದಿಗೆ ಮಾತಾಡಬೇಕಾದ, ವ್ಯಕ್ತಿತ್ವ ಮತ್ತು ಅಭಿವ್ಯಕ್ತಿ ಎರಡನ್ನು ದಟ್ಟ ನಿರ್ಬಂಧಗಳಲ್ಲಿ ನಿಭಾಯಿಸಬೇಕಾದ ಹೆಣ್ಣು ಅವಳ ಏಕಾಂಗಿತನದ ಒಳ ಲೋಕದ ಸಂತೋಷ ಮತ್ತು ಬಿಕ್ಕಟ್ಟುಗಳ ಅಭಿವ್ಯಕ್ತಿಗಾಗಿ ಕಾವ್ಯವನ್ನು ಆಶ್ರಯಿಸುತ್ತಾಳೆ. ಕಾವ್ಯದ ಮೂಲ ದ್ರವ್ಯವೇ ಅನುಭವದ ಅಭಿವ್ಯಕ್ತಿ ಅಂತಹ ಅನುಭವವನ್ನು ತನ್ನ ಅಂತರಂಗದಲ್ಲಿ ಧ್ಯಾನಿಸುತ್ತ. ಇನ್ನೊಂದು ಮನಸ್ಸಿಗೆ ಮುಟ್ಟಿಸಬೇಕಾದ ರೀತಿಯಲ್ಲಿ ಮುಟ್ಟಿಸುವ ಆತ್ಮ ಸಂಗಾತದ ಮಾದರಿಯಾಗಿದೆ. ಇಲ್ಲಿ ಪ್ರೀತಿ, ದ್ವೇಷ, ಬಯಕೆ ಎಲ್ಲವೂ ಇದೆ. ಆಕೆ ಹೆಣ್ಣಿನ ಕಾವ್ಯ ಜೀವನ ಮತ್ತು ಆತ್ಮದ ಅಧಿಕೃತವಾಣಿ, ಹೆಣ್ಣಿನ ತನ್ನ ನೋವು-ನಲಿವು ಪ್ರತಿಭಟನೆಯನ್ನು ಒಳಗೊಳಗೆ ಧ್ವನಿಸುವುದು ಆತ್ಮ ಸಂಗಾತಿಯಾಗಿದೆ. 'ಸಂಗಾತ' ಎಂಬುದು ತಾನು ಹಂಬಲಿಸುವ ಜೀವ, ದೇಹ, ಮನಸ್ಸು, ಪ್ರೀತಿಯಾಗಿದೆ. ಅಂತಹ ಜೀವದೊಂದಿಗೆ ತಾನು ಇರಬೇಕಾದ ರೀತಿ ಯಾವ ಬಗೆಯದ್ದಾಗಿದೆ ಎಂಬುದನ್ನು ತನ್ನ ಮಾತಲ್ಲೇ ಒಲವಿನಲ್ಲೇ ಅಭಿವ್ಯಕ್ತಿಸುವದಾಗಿದೆ.

"ಕವಿತೆ ಎನ್ನುವುದು ಅವಸರದ ಪ್ರತಿಕ್ರಿಯೆಗೆ ಕೇವಲ ಒಂದು ವಾಹಕವಲ್ಲ. ಅದೊಂದು ನಿರಂತರ ಶೋಧದ ಪ್ರಯೋಗಶೀಲತೆಯ, ಆತ್ಮಸಿದ್ಧಿಯ ಸಂಗಾತಿಯಾಗಿದೆ. ಸಿದ್ಧಿ ಬಂಧಕ್ಕಿಂತ

ಭಾಷೆಯೊಳಗಣ ಹುಡುಕಾಟವೇ ಇವರಿಗೆ ಮುಖ್ಯವಾದಂತಿದೆ."[೨೫] ಈ ನಿಲುವಿನಲ್ಲೇ ಕಾವ್ಯ ಅಭಿವ್ಯಕ್ತಿಸುವುದು ವಿಶೇಷವಾಗಿದೆ. ಸಾಧನೆಯ ದಾರಿಯನ್ನು ಇವರು ಕಷ್ಟದಿಂದ ಕ್ರಮಿಸುವ ಪ್ರಯತ್ನಗಳು ಮಹಿಳಾ ಕಾವ್ಯದಲ್ಲಿ ಗಮನ ಸೆಳೆಯುತ್ತವೆ. ಕೆಲವು ಕಡೆ ಆಪ್ತಮಿತ್ರನಂತೆ, ಸದಾ ಮುನಿಸಿಕೊಂಡಿರುವ ಪ್ರಿಯಕರನಂತೆ, ಮತ್ತೆ ಕೆಲವು ಕಡೆ ಹಠ ಹಿಡಿದ ಮಗುವಿನಂತೆ, ಮಗದೊಂದು ಕಡೆ ರಾಧೆಯ ಸುಖ ಜಾರ ಕೃಷ್ಣನಂತೆ ಕವಿತೆಗಳು ಕಾಡುತ್ತವೆ. ಎಂದು ಸ್ವತಃ ಕವಯಿತ್ರಿ ಎಚ್.ಎಲ್. ಪುಷ್ಪಾರವರು ಹೇಳಿಕೊಡಿದ್ದಾರೆ 'ಆತ್ಮಸಂಗಾತಕ್ಕೆ ನೀನುಂಟು' ಎಂಬ ಕವಿತೆಯಲ್ಲಿ,

"ಈ ದೇಹದ ತುಂಬಾ ನಿನ್ನದೇ
ಕೊಳಲ ನುಡಿ ನರನರವೂ ಬಿಗಿದು ಕೂಗಿದೆ
ಶಾಮಾ, ಓ ಶಾಮಾ
ಹೆರಲಾರದ ವಿಚಿತ್ರ ನೋವು
ಅಂತರಂಗದಲ್ಲಿ ಜಿನುಗುವ
ಮಾತುಗಳಿಗೆ ಪದದ ಅರ್ಥಕ್ಕೆ
ಸಿಕ್ಕದೆ ಮಣುಚಿಕೊಳ್ಳುತ್ತಿದೆ"[೨೬]

ಸೃಷ್ಟಿಯ ಅಂಚಿನ ಇಂಥ ಇಕ್ಕಟ್ಟಿನಲ್ಲಿ ಕಾವ್ಯ ಹುಟ್ಟಬೇಕಾಗಿದೆ. ಸೂಕ್ಷ್ಮವಾಗಿ ನೋಡಿದರೆ ಇಲ್ಲಿ ಕಾವ್ಯದ ಹುಟ್ಟು ಎಂದರೆ ಅತೀತದ ಸ್ಪರ್ಶವೇ. ಹಾಗಾಗಿ ಕವಿತೆಯನ್ನು ಕುರಿತು ಧ್ಯಾನವು ಅತೀತವನ್ನು ಮುಟ್ಟುವ ಬಯಕೆಯೇ ಆಗಾ ಕಾವ್ಯ ಮತ್ತು ಆಧ್ಯಾತ್ಮವು ಏಕತ್ವಗೊಳ್ಳುವ ಹಲವು ಅರ್ಥಪೂರ್ಣಗಳಿಗೆಗಳನ್ನು ಸಮಕಾಲೀನ ಮಹಿಳಾ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಎಚ್.ಎಲ್.ಪುಷ್ಪ ಅವರ ಕವಿತೆಗಳ ಕುರಿತು ಮುನ್ನುಡಿಯಲ್ಲಿ ಈ ಸಂಗ್ರಹದ ವೈಶಿಷ್ಟ ಅಲ್ಲಿಯ ಮಹತ್ವದ ಕವಿತೆಗಳ ಆಧ್ಯಾತ್ಮಿಕ ಗುಣ. ಆ ಗುಣ ಅಡಿಗರ ನಂತರದ ಕವಿಗಳಲ್ಲಿ ಬಹುಶಃ ಎಚ್.ಎಸ್. ಶಿವಪ್ರಕಾಶರನ್ನು ಒಟ್ಟಾರೆ ಕಾಣಿಸಿಕೊಂಡಿದ್ದು ಅಪರೂಪ ಎಂದಿದ್ದಾರೆ. ಆದರೆ ಮಹಿಳಾ ಕಾವ್ಯದ ಬಗ್ಗೆ ತುಸು ವಿಸ್ತರಿಸಿ ನೋಡುವುದಾದರೆ ಇಂದು ಕವಿತೆಗಳನ್ನು ರಚಿಸುತ್ತಿರುವ ಹಲವು ಸಮಕಾಲೀನ ಕವಿಗಳಲ್ಲಿ ಈ ಆಯಾಮವು ಎದ್ದು ಕಾಣುವಂತಿಯೇ ಇದೆ ಅನಿಸುತ್ತದೆ. ರಚನೆ ಮತ್ತು ಸಿದ್ಧತೆಗಳಲ್ಲಿ ಪರಸ್ಪರ ವ್ಯತ್ಯಾಸಗಳು ವಿಪುಲವಾಗಿದ್ದರೂ ಸವಿತಾ ನಾಗಭೂಷಣ, ಸಂಧ್ಯಾದೇವಿ, ಪುಷ್ಪರವರ ಕಾವ್ಯದ ಒಂದು ಸಾಮಾನ್ಯ ಲಕ್ಷಣವಾಗಿದೆ. ಅದರಂತೆ ಆರೀಫ್ ರಾಜರ ಕವಿತೆಯನ್ನು ಗಮನಿಸಿದಾಗಲೂ ಆಧ್ಯಾತ್ಮದ ಬೆಳಕು ಕಾಣುತ್ತದೆ. ಬರವಣಿಗೆ ಕಾವ್ಯ ಸೃಷ್ಟಿಯನ್ನು ಒಂದು ಆಧ್ಯಾತ್ಮವೆಂದು ನಂಬಿಕೊಂಡು ಬರೆಯುತ್ತಿದ್ದಾರೆ. ವಾಚ್ಯಸ್ವರೂಪೀ ಸಾಮಾಜಿಕ ಇಲ್ಲವೇ ರಾಜಕೀಯ ಕಾವ್ಯಕ್ಕಿಂತ ತುಸು ಭಿನ್ನವಾದ ಒಂದು ವಲಯ ಇಂದು ಕನ್ನಡ ಕಾವ್ಯದಲ್ಲಿ ಗಣನೀಯವಾಗಿ ಕಾಣಿಸಿಕೊಳ್ಳುತ್ತಿದೆ. ಕವಯಿತ್ರಿ 'ಎಚ್.ಎಲ್. ಪುಷ್ಪ' ಅವರು ಈ ಕಷ್ಟದ ದಾರಿಯನ್ನು ತುಳಿದಿದ್ದಾರೆ ಎಂದು ಅವರ ಕವಿತೆ ಮೂಲಕ ಗುರುತಿಸಬಹುದಾಗಿದೆ.

ಕನ್ನಡ ಕಾವ್ಯ ಲೋಕವನ್ನು ಈಗಷ್ಟೇ ಪ್ರವೇಶಿಸುವ ಅನೇಕ ಕವಿಗಳು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳಾಚೆ ಒಂದು ಆಧ್ಯಾತ್ಮಿಕ ಸ್ವರೂಪ ಗುಣ ತಾಳಿರುವುದು ಅವರ ಕಾವ್ಯದ ಮೂಲಕ ತಿಳಿಯುತ್ತಿದೆ. ನೆಲಮೂಲ ಸಂಸ್ಕೃತಿಯ ಮರು ಸೃಷ್ಟಿ, ಮರು ಜೀವ, ಹಾಗೂ ವಚನ ಸಾಹಿತ್ಯ, ದಾಸ ಸಾಹಿತ್ಯದ ಸಾರವು ಪ್ರಜಾಪ್ರಭುತ್ವದ ಆಶಯದಲ್ಲಿ ವ್ಯಕ್ತಪಡಿಸಿರುವುದು ಗಮನಿಸಬಹುದಾಗಿದೆ.

ಹೊಸ ಸಮಾಜದ ನಿರ್ಮಾಣದ ಕಡೆಗೆ ಮಹಿಳಾಕಾವ್ಯ ತುಡಿಯುತ್ತಿದೆ. ಅನೇಕ ತಳಸಮುದಾಯದ ಸಂವೇದನೆಗಳು ಮುಖ್ಯ ನೆಲೆಗೆ ಬರುತ್ತಿವೆ. ಮತ್ತು ಅವುಗಳಲ್ಲಿ ಸಂಘಟಿತ ಜಾಗೃತೆಯನ್ನು ಮೂಡಿಸುತ್ತಿವೆ. ಸಮುದಾಯಗಳ ಜೀವನ, ಸಾಂಸ್ಕೃತಿಕ, ನಡೆ–ನುಡಿ, ಆಚಾರ–ವಿಚಾರಗಳಲ್ಲಿ ಭಿನ್ನತೆಗಳನ್ನು ಕಂಡುಬರುತ್ತವೆ. ಜೊತೆಗೆ ಒಲವಿಗಾಗಿ ಹಂಬಲಿಸುವುದು ಹೆಚ್ಚಿನ ರೀತಿಯಲ್ಲಿ ವ್ಯಕ್ತಗೊಂಡಿದೆ. ಆಧುನಿಕ ಸಮಾಜದಲ್ಲಿ ತಂತ್ರಜ್ಞಾನದ ಪ್ರಭಾವ ಅತಿಯಾಗಿದೆ. ಈ ಪ್ರಭಾವಕ್ಕೆ ಕಾವ್ಯ ಭಾಷೆಯು ಬದಲಾಗಿದೆ. ವ್ಯಕ್ತಗೊಳ್ಳುವ ರೂಪಕವು ಹೊಸದಾಗಿ ಅಭಿವ್ಯಕ್ತಗೊಂಡಿವೆ. ಆತ್ಮ ಸಂಗಾತದಲ್ಲಿ ತನ್ನ ಒಲವಿಗಾಗಿ ನೀನಿದ್ದರೇ ನನ್ನೊಂದಿಗೆ, ಮೌನ ಮಾತಾಡಿಸಬಹುದಿತ್ತು. ಇಬ್ಬನಿಯನ್ನು ನಕ್ಕು ನಲಿಸಬಹುದಿತ್ತು. ಹೊಸ ಹೂವೊಂದು ಅರಳಿಸಬಹುದಿತ್ತು. ಅದು ಮಮಕಾರ, ಮನುಷ್ಯತ್ವ ಪ್ರೀತಿಯ ಸುಗಂಧ ಸೂಸುವ ಹೂವೊಂದನ್ನು ಅರಳಿಸಬಹುದಿತ್ತು. ನೀನಿದ್ದರೆ ಈ ಜಗತ್ತಿನ ಪಥವನ್ನು ಚೂರು ಬದಲಿಸಬಹುದಿತ್ತು ಎಂಬ ಆಶಯವನ್ನು ಮಹಿಳಾಕಾವ್ಯ ತನ್ನ ಅಂತರಂಗದಲ್ಲೇ ಮಿಡಿಯುವುದು ಕಂಡುಬಂದಿದೆ. ನೀನಿದ್ದಿರೆ ಸಾಗರದ ಅಲೆಗಳನ್ನು ಒಂದೊಂದಾಗಿ ಎಣಿಸಬಹುದಿತ್ತು. ಚಿಗುರುವ ಎಲೆಯ ಮೇಲೆ ನನ್ನ ನಿನ್ನ ಹೆಸರನ್ನು ಬರೆಯಬಹುದಿತ್ತು. ಆ ಹೆಸರು ವಿಶೇಷವಾದದ್ದು, ಅಲ್ಲಿ ಜಾತಿ, ಲಿಂಗ, ಬೇರೆ ಯಾವುದು ಇರುವುದಿಲ್ಲ. ನಿರಾಕಾರದ ಹೆಸರೊಂದನ್ನು ಕೆತ್ತಬಹುದಿತ್ತೆಂಬ ಆಶಯ ವ್ಯಕ್ತಪಡಿಸುತ್ತಾರೆ. ನೀನಿದ್ದರೆ ನನ್ನೊಂದಿಗೆ ಬದುಕಿನ ಹೊಸ ಬಾಳು, ಹೊಸ ಚಿಗುರು, ಹೊಸ ಭೂಮಿ, ಹಸಿರು, ಹೊಸ ಉಡುಗೆ, ಹೊಸ ಆಹಾರ ಎಲ್ಲವನ್ನು ಹೊಸದಾಗಿ ಸೃಷ್ಟಿಸಬಹುದಿತ್ತು. ಈ ಸದ್ಯ ಇರುವ ಚಿತ್ರಣಕ್ಕೆ ವಿರುದ್ಧವಾಗಿ ಜೀವ ನೆಲೆಯಲ್ಲಿರುತ್ತಿತ್ತು ಎನ್ನುವ ಹೆಣ್ಣಿನ ಬಯಕೆಯನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿರುವುದು ಕಾಣುತ್ತೇವೆ. ಹೊಸ ಆಶಯದೊಂದಿಗೆ ಆಕಾಶ ಚುಕ್ಕಿ ಬಳೆ ತೊಟ್ಟ ಸೀಮಂತದ ಬರವಣಿಗೆಯಲ್ಲಿ ಕವಿತೆ ಹೆರಿಗೆಯಾಗುತ್ತಿತ್ತು ಅದು ತಾಯಿತನದ ಮಹತ್ವದ ಪ್ರೀತಿ ಹೊಂದಿರುತ್ತಿತ್ತು. ನೀನಿದ್ದರೇ ನನ್ನೊಂದಿಗೆ ಮನಸ್ಸು ಕನ್ನಡಿಯಲ್ಲಿ ಮೂಡಿ ನಿನ್ನ ನಿಜಬಿಂಬ ಸ್ವರ್ಗವೇ ಮನಮಂದಿರವಾಗಿ ಮಾತು ನೀನಾಗಿ ಕವಿಯು ನಿಗುತ್ತಿದೆ ಎನ್ನುವ ಆಶಯವನ್ನು ಮಹಾಕಾವ್ಯ ಒಳಗೊಂಡಿದೆ. ಈ ಮೇಲಿನ ಅಂಶಗಳಲ್ಲಿ ಅಂತರಂಗದಲ್ಲಿ ತನ್ನ ಒಲವಿಗಾಗಿ ಮಿಡಿಯುವ ಮನಸ್ಸಿನೊಂದಿಗೆ ಸಂಭಾಷಣೆ ನಡೆಸಿ ತಾನು ಬಯಸುವುದು ತನ್ನೊಂದಿಗೆ ಇದ್ದಿದ್ದರೇ ಏನೆಲ್ಲಾ ಮಾಡುತ್ತಿದೆ ಎಂಬುದನ್ನು ಮಹಾಕಾವ್ಯದಲ್ಲಿ ಕಂಡುಬಂದಿದೆ. ನೀನು ಪುರುಷವಾಗಿರಬಹುದು, ತಾನೂ ಬಯಸುವ ವ್ಯವಸ್ಥೆಯಾಗಿರಬಹುದಾಗಿದೆ. ಪ್ರಸ್ತುತ ದಿನಮಾನದಲ್ಲಿ ಬಂಡವಾಳಶಾಹಿಗಳಿಂದ ಈ ಜಗತ್ತು ಎಲ್ಲವೂ ವ್ಯಾಪಾರೀಕರಣಗೊಂಡಿದೆ.

ಇಂತ ದುರಂತಕ್ಕೆ ಧಿಕ್ಕಾರ ಹೇಳಿ ಮಮಕಾರ, ಪ್ರೀತಿ, ವಾತ್ಸಲ್ಯ ಬಿತ್ತಲು ಮುಂದಾಗಿದೆ ಮಹಿಳಾಕಾವ್ಯ.

ಒಟ್ಟಾರೆ ಸಮಕಾಲೀನ ಮಹಿಳಾ ಕಾವ್ಯ ತಾಯಿತನದ ಮಮಕಾರವನ್ನು ಹೊಂದಿ ಹೊಸ ಜಗತ್ತನ್ನು ಕಾಣಲು ತನ್ನ ಅಂತರಂಗದಲ್ಲೇ ತನಗಾಗಿ ಮಿಡಿಯುವ ಒಲಿಯುವ ಮನಸ್ಸಿನೊಂದಿಗೆ ಆಪ್ತ ಸಮಾಲೋಚನೆ ನಡೆಸಿದಂತಿದೆ. ಕವಿತೆ ಸದಾ ತನ್ನ ಆಪ್ತ ಸಂಗಾತಿ ಮತ್ತು ಅಂತರಂಗದ ಗುರು. ಅದಕ್ಕೆ ತನ್ನ ನೋವು, ಸಂಕಟ, ಸಂತಾಪ, ವಿಷಾದ, ಮೌನ, ಸಿಟ್ಟು ಎಲ್ಲವೂ ಅರ್ಥವಾಗುತ್ತದೆ. ಅದರೊಂದಿಗೆ ಕವಿ ತನ್ನ ಪ್ರೀತಿಯನ್ನು ಹಂಚಿಕೊಳ್ಳುತ್ತಾ ಜಗಳವಾಡುತ್ತಾ, ಹಠಮಾಡುತ್ತಾ, ಪ್ರಶ್ನಿಸಿ ಕಾಡಿಸುತ್ತಾ, ಹಂಬಲ ತೋಡಿಕೊಳ್ಳುತ್ತಾ ತಾನಿರುವಂತೆಯೇ ತನ್ನನ್ನು, ಸುತ್ತಲೂ ಪ್ರಪಂಚವನ್ನು ತನ್ನೊಳಗೆ ವಿವರಿಸಿಕೊಳ್ಳಲು ಪರಿಭಾವಿಸಿಕೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ. ಸೃಷ್ಟಿ ಸತ್ಯಗಳು, ವೈಚಿತ್ರ್ಯಗಳು, ಮನುಷ್ಯ ಸಹಜತೆಯನ್ನು ಒಡೆಯುವ ಮುಖವಾಡದೊಳಗಿನ ಕಪಟ ಮನಸ್ಸುಗಳು, ಸಂವೇದನೆ ಕಳೆದುಕೊಂಡ ಜೀವಗಳು, ಇಂತಹ ಸಂವೇದನೆಗಳ ಕಾವ್ಯದಲ್ಲಿ ಒಡಮೂಡಿವೆ. ಜೊತೆಗೆ ಮಾನವೀಯ ಸಾಧ್ಯತೆಯ ಅಂತಃಕರಣದ ಸೆಲೆಯ ಹುಡುಕಾಟದಲ್ಲಿ ಕವಿತೆ ಸಂತೈಕೆಯಾಗಿ, ಸಮಾಧಾನವಾಗಿ, ಬಿಡುಗಡೆಯಾಗಿ, ಸಹಜ–ಮುಕ್ತದಾರಿಯಾಗಿ, ಹೊರಟಿದೆ. ಬುದ್ಧಿ ಮತ್ತು ಸಹಜ ಅಭಿವ್ಯಕ್ತಿ ಸಮಕಾಲೀನ ಮಹಿಳಾಕವ್ಯದಲ್ಲಿ ಕಂಡಿದೆ. ಕವಿಯಲ್ಲಿ ಕವಿತೆ ಕವಿ ಹೇಳುವಂತೆ ತನ್ನೊಳಗೆ ನೋವನ್ನೆದುರಿಸುವ ಆತ್ಮವಿಶ್ವಾಸವನ್ನು ಜೀವನ ಪ್ರೀತಿಯನ್ನು ಮನುಷ್ಯ ಪ್ರೀತಿಯನ್ನು ಸದಾ ಎಚ್ಚರಿಸುತ್ತಿದೆ. ಜೊತೆಗೆ ಹೊರಗಿನ ತಲ್ಲಣಗಳನ್ನು ಸೂಕ್ಷ್ಮವಾಗಿ ಆಲೋಚಿಸುವ ಪೂರ್ವಗ್ರಹಗಳಲ್ಲಿವೆ, ಅರಿಯುವ ಅರಿವನ್ನು ಮೂಡಿಸಿದೆ. ಹಾಗೆ ಕವಿತೆ ಓದುವ ಸಹೃದಯದಲ್ಲಿ ಇಂಥ ಅಂಶಗಳನ್ನು ಬಿಟ್ಟುವಲ್ಲಿ ಕವಿತೆ ಯಶಸ್ವಿಯನ್ನು ಪ್ರಾಮಾಣಿಕತೆಯನ್ನು ಕಂಡಿದೆ.

ಒಟ್ಟಾರೆ ಕಾವ್ಯವು ನಿಗೂಢಗಳ ಗೂಡಿನ ಗುಬ್ಬಚ್ಚಿಯಾಗಿದೆ ಹೊರಬಂದು ಹಾರಾಡತೊಡಗಿದೆ. ವಿಸ್ಮಯಗಳಲ್ಲಿ ಹೊತು ಹೋಗದೆ ಹುಡುಕಾಟದ ಒಳಗಿಂದಲೇ ಹೊಸದಿಕ್ಕು ದಕ್ಕಿಸಿಕೊಂಡಿದೆ. ವೈಯಕ್ತಿಕತೆ ಮತ್ತು ಸಾಮಾಜಿಕತೆಗಳನ್ನು ಬೆಸೆಯುವ ಹೊಸ ಹೊಳಪು ಪಡೆದಿದೆ. ಹೊಸ ಹುಟ್ಟಿನೊಂದಿಗೆ ಹೊಸ ವಸ್ತುವಿನ ಕವಿತೆಗಳು ಜನ್ಮ ತಾಳಿವೆ. ಪ್ರಸ್ತುತ ದಿನಮಾನಗಳಿಗೆ ತಕ್ಕಂತೆ, ಓದುಗನ ವಂಚನೆಗಳಿಗೆ ತಕ್ಕಂತೆ ಕನ್ನಡಿ ರೂಪದಲ್ಲಿ ಕಾವ್ಯ ರಚನೆಗೊಳ್ಳುತ್ತಿದೆ. ಜೊತೆಗೆ ಅದಕ್ಕೆ ಭೂತ ಮತ್ತು ಭವಿಷ್ಯತ್ತಿನ ಕೊಂಡಿ ಹಾಕಿಕೊಳ್ಳುತ್ತಿದೆ. ಒಟ್ಟಾರೆ ಮಹಿಳಾ ಕಾವ್ಯದಲ್ಲಿ ಅಂತರಂಗದ ನುಡಿಗಳು ಆತ್ಮಸಂಗಾತಿಯಲ್ಲಿ ಹೊರ ಬಂದಿವೆ ಎಂಬುದು ಕಾಣಬಹುದಾಗಿದೆ.

**೬.೫. ಆಧುನಿಕತೆ ಮತ್ತು ಪರಂಪರೆ**

ಸಮಕಾಲೀನ ಕನ್ನಡ ಕಾವ್ಯ ಅನೇಕ ವಿಚಾರಧಾರೆ. ಚಿಂತನೆಯ ಪ್ರಭಾವ ಪ್ರೇರಣೆಯನ್ನು ಒಳಗೊಂಡು, ವೈಚಾರಿಕ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತಿದೆಂದು ಯಾವುದೇ ಒಂದೇ ಸಿದ್ಧಾಂತ

ದೇಶಿ, ಅಂತಹ ಗಡಿರೇಖೆಯನ್ನು ಹಾಕಿಕೊಳ್ಳದೇ. ಜ್ಞಾನ ಯಾವ ಮೂಲೆಯಿಂದ ಬಂದರೂ ಜ್ಞಾನ, ಜ್ಞಾನವೇ ಅದು ಜೀವಪರ ಕಾಳಜಿಯೆನ್ನು ಹೊಂದಿದ್ದಾನೆ. ಅದು ನಮ್ಮದಾಗಿಸಿಕೊಳ್ಳಬೇಕು ಈ ನೆಲದ ಜ್ಞಾನವಾಗಿಸಿಕೊಳ್ಳಬೇಕು ಎಂಬ ನಿಯಮ ಸಮಕಾಲೀನ ಕನ್ನಡ ಕಾವ್ಯದ್ದಾಗಿದೆ. ಅದರಲ್ಲಿ ವಿಶೇಷವಾಗಿ ಮಹಿಳಾಕಾವ್ಯವು ಒಂದು. ಪರಂಪರೆಯಿಂದ ಹೇಳಿಕೊಂಡು ಬಂದಿರುವ ಅನೇಕ ಸಂಪ್ರದಾಯ ನೀತಿ, ನಿಯಮಗಳನ್ನು, ಆಚರಣೆಗಳನ್ನು, ಮೂಲಭೂತ ತನವನ್ನು ಆಧುನಿಕ ನೆಲೆಯಲ್ಲಿ ನಿಂತು ಅವಲೋಕಿಸಿ ಅವುಗಳನ್ನು ಮರುಚಿಂತನಗೆ ಹಚ್ಚಿದ ಹಾಗೂ ಅಂಥ ಸಂಪ್ರದಾಯಗಳನ್ನು ಧಿಕ್ಕರಿಸಿದೆ. ಜಗತ್ತಿನಲ್ಲಿ ಯಾವುದೇ ಮೂಲೆಯಲ್ಲಿ ನೋವು, ಅಪಮಾನ, ಶೋಷಣೆ ನಡೆದರೆ ಅದು ತನ್ನದೇ ಎಂಬ ಭಾವನೆ ಇರುವ ಕಾವ್ಯ ಭಾವಿಸಿ ಪ್ರತಿಕ್ರಿಯೆ ನೀಡುತ್ತಿದೆ. ಆಧುನಿಕಯ ಸ್ವರೂಪ ಸ್ವಲ್ಪ ಬರುವಿಕೆ ಕಂಡಿದೆ. ಪ್ರಸ್ತುತ ದಿನದಲ್ಲಿ ಆಧುನಿಕತೆ ಪ್ರಭಾವಕ್ಕೆ ವೇಷ ಭಾಷೆಯಲ್ಲಿ ಬದಲಾಗುವುದು ಕಂಡಿದೆ. ಮನಸ್ಸುಗಳ ಅದೇ ಸ್ಥಿತಿಯಲ್ಲಿ ವರ್ತಿಸುವುದನ್ನು ಕಾವ್ಯ ಪ್ರಶ್ನಿಸುತ್ತಿದೆ. ಮಹಿಳೆಯ ಸಮಾನತೆಗಾಗಿ, ಸೌಹಾರ್ದತೆಗಾಗಿ ಧ್ವನಿ ಎತ್ತಿರುವುದು ನೋಡಬಹುದು. ಕವಿ ಶೆಲ್ಲಿ ಕಲಾವಿದರನ್ನು ಕವಿಗಳನ್ನು 'ಅನಧಿಕೃತ ಶಾಸಕರು' ಎಂದು ಕರೆದಿದ್ದಾನೆ. ಪ್ರಭುತ್ವ ಮತ್ತು ಸಮಾಜದ ಓರೆಕೋರೆಗಳನ್ನು ತಿದ್ದುವ ಬಹು ದೊಡ್ಡ ಸಾಮಾಜಿಕ ಜವಾಬ್ದಾರಿ ಕವಿಗಳ ಕಲಾವಿದರ ಮೇಲಿದೆ ಎಂಬುದನ್ನು ಆತನ ದೃಢವಾದ ನಂಬಿಕೆ. ಸಮಾಜವನ್ನು ತಿದ್ದುವುದು, ಕಟ್ಟುವುದು ಕವಿಯನ್ನು ಲೇಖಕರ, ಸಾಹಿತಿಗಳ ಕರ್ತವ್ಯವೆಂದು ಅರಿತು ಬದುಕುವುದು ನಿಜವಾದ ಸಾಹಿತಿಯ ಗುಣ, ಆಕಾರಣದಿಂದಲೇ ಕವಿ ಕಲಾವಿದರಿಗೆ ಸಮಾಜದಲ್ಲಿ ವಿಶೇಷವಾದ ಮನ್ನಣೆ ಇದೆ.

ಪ್ರಭುತ್ವ ತನ್ನ ಪ್ರಬಲತೆಯನ್ನು ಸಾಧಿಸುವುದಕ್ಕೆ ಅನೇಕ ಅಮಾನವೀಯ ಅಂಶಗಳನ್ನು ಸೃಷ್ಟಿಸಿ, ಶೋಷಣೆ ಮಾಡುತ್ತೀವೆ. ಸ್ವಾತಂತ್ರ್ಯ ಸಮಾನತೆ, ಅಭಿವ್ಯಕ್ತಿಯನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡು ಅಧಿಕಾರ ನಡೆಸುತ್ತವೆ. ಇದನ್ನೇ ಕಾವ್ಯ ಪ್ರಶ್ನಿಸುತ್ತದೆ. ಈ ಪರಂಪರೆಯಿಂದ ಬಂದಿರುವ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಸಾಮಾಜಿಕ ಅಪಮಾನತೆಗಳನ್ನು ಖಂಡಿಸುತ್ತೇವೆ. ಧರ್ಮ ಮತಾಂಧತೆಯ ಕ್ರೌರ್ಯಕ್ಕೆ ಸಿಲುಕಿ ಗಾಸಿಕೊಂಡ ಮನಸ್ಸುಗಳನ್ನು ಕಾವ್ಯ ಎಚ್ಚರಿಸುತ್ತಿವೆ. ಆ ಕ್ರೂರತೆಯನ್ನು ಚಿತ್ರಿಸುತ್ತಿದೆ. ಸಮಾಜದ ಬಗ್ಗೆ ಉದಾತ್ತ ಚಿಂತನೆಗಳನ್ನು ಹೊಂದಬೇಕು ಜೀವಪರ ಚಿಂತನೆಗಳನ್ನು ಯೋಚಿಸಬೇಕು ವೈಚಾರಿಕ ತಿಳುವಳಿಕೆಯನ್ನು ಹೇಗೆ ಬಿತ್ತಬೇಕು, ಅದರಿಂದ ಸುಂದರ ಸಮಾಜದ ಸಮ ಸಮಾಜವನ್ನು ಕಾಣುವ ಕನಸನ್ನು ಸಮಕಾಲೀನ ಮಹಿಳಾಕಾವ್ಯ ಹೊಂದಿದೆ.

ಪಿಸುನುಡಿಯದೆ ಉಗುರಿಗೆ
ರೆಪ್ಪೆಗೆ–ಕೊನ್ನೆಗೆ–ತುಟಿಗೆ ಬಣ್ಣ
ತಾಗಿಸದೇ ಕಣ್ಣ ಕಾಡಿಗೆಯಿಲ್ಲದೇ
ಹುಬ್ಬಿನ ನಡುವೆ ಪುಟ್ಟ ಕುಂಕುಮವಿಡದೇ
ನತ್ತನ್ನು ನಗುವಾಗ ತೋರದೇ ಸೀಳ

ಹುರಿಗೊಳಿಸದೇ
ನಾಚದೇ ನುಲಿಯದೇ ಬಳುಕದೇ
ಹಾರದೇ ತಣಿಯದೇ ಓಲೈಸದೇ
ಒಮ್ಮೆ
ನಿನ್ನ ಮುಂದೆ ಬರುತ್ತೇನೆ.[೨]

ಕವಯಿತ್ರಿ ಕಾವ್ಯ ಕಡೆಗೆ ಅವರು ಕವಿತೆಯಲ್ಲಿ ಆಧುನಿಕತೆಯ ಸಮಕಾಲೀನ ಮಹಿಳೆಯ ಚಿತ್ರಣ ವ್ಯಕ್ತಪಡಿಸಿದ್ದಾರೆ. ಈ ಹಿಂದೆ ಸಂಪ್ರದಾಯಸ್ಥ ಮನಸ್ಸುಗಳ ಹೆಣ್ಣಿಗೊಂದು ಸಂವಿಧಾನ ಬರೆದಿದ್ದರು. ತಮ್ಮ ತಮ್ಮ ಹಿತಾಸಕ್ತಿಗೆ ತಕ್ಕಂತೆ ಚೌಕಟ್ಟನ್ನು ಹಾಕಿದ್ದಾರೆ. ಆದರೆ ಸಮಕಾಲೀನ ಮಹಿಳಾ ಕಾವ್ಯ ಅದನ್ನು ಮುರಿದು ಹೊಸದಾದ ರೂಪ ಸ್ವರೂಪ ಚಿತ್ರಿಸುತ್ತಿದೆ. ತಾನು ಈ ಮೇಲ್ಕಾಣಿಸಿದ ರೀತಿಯಲ್ಲಿ ಬದುಕಲು ಹಂಬಲಿಸುವುದು ಕಂಡು ಬಂದಿದೆ. ಕವಯಿತ್ರಿ ತಮ್ಮ ಕವನ ಸಂಕಲನದಲ್ಲಿ ಅನೇಕ ಕವಿತೆಗಳ ಈ ತಂತ್ರಜ್ಞಾನದ ಸ್ವಭಾಷೆಯನ್ನು ಬಳಸಿಕೊಂಡು ರೂಪಕವಾಗಿಸಿಕೊಂಡು ಹೊಸ ಸಂವೇದನೆಯನ್ನು ವ್ಯಕ್ತಪಡಿಸಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಆಧುನಿಕ ಯುಗದಲ್ಲಿಯೂ ಹೆಣ್ಣಿನ ಸಂವೇದನೆಗಳು ಸಂಕಟಗಳು ಬೇರೆ ರೀತಿಯಾಗಿವೆ. ಈ ಹಿಂದೆ ಇದ್ದ ಸಂಕಟಗಳು ಸ್ವರೂಪ ಒಂದು ಬಗೆಯದ್ದಾಗಿದ್ದರೆ ಇಂದು ಆಧುನಿಕ ಸಂಕಟಗಳು ಬಗೆಯದ್ದು ಮತ್ತೊಂದರ ರೀತಿಯಾಗಿದೆ. ಆದರೂ ಈ ಹಿಂದೆ ಇದ್ದ ಸಂಪ್ರದಾಯಗಳು ಸಡಿಲಿಸಿಕೊಂಡು ಈ ಸಮಾಜದ ಮುಂದೆ ಬಂದಿದ್ದೇವೆ ಎಂದು ಹೇಳಿದ್ದಂತಿದೆ. ಹೆಣ್ಣೆಂದರೆ ಸೀರೆ ತೊಟ್ಟುಕೊಂಡು ಬಳೆ, ಹೂ, ಕುಂಕುಮ, ಮೂಗುತಿ, ತನ್ನ ಅಂದವೆಲ್ಲ ಪುರುಷನಿಗಾಗಿ ಇನ್ನೊಂದು ಜೀವಕ್ಕಾಗಿ ತನ್ನ ಸ್ವತಂತ್ರವನ್ನು ಕಳೆದುಕೊಂಡು ಇನ್ನೊಬ್ಬರ ಬಯಕೆಯಂತೆ ಬದುಕುವ ದುರಂತ ಚಿತ್ರಣಕ್ಕೆ ಧಿಕ್ಕಾರ ಹೇಳಿ. ತನ್ನ ಕಣ್ಣುಗಳಿಗೆ ಹುಬ್ಬು ತೀಡಿ; ಗೆಜ್ಜೆ ಕುಣಿಸದೆ ಉಗುರಿಗೆ, ರೆಪ್ಪೆಗೆ, ಕೆನ್ನೆಗೆ, ತುಟಿಗೆ ಬಣ್ಣ ಹೊಸ ಬಣ್ಣ ಬಳಿದುಕೊಂಡಿದ್ದಾಳೆ. ಅವು ನಿಮಗಾಗಿ ಅಲ್ಲ ನನಗಾಗಿ ನನ್ನಿಚ್ಛೆಯಂತೆ ಅವುಗಳನ್ನು ಹೊಸ ರೀತಿಯಲ್ಲಿ ಸಿಂಗರಿಸಿಕೊಂಡಿದ್ದೇನೆ. ಎಂದು ಹೇಳಿದ್ದಾರೆ. ಕುಂಕುಮ ಇಡದೇ, ನತ್ತನ್ನು ತೊರದೆ ನಾಚದೇ, ನುಲಿಯದೇ ಒಂದು ಜೀವವಾಗಿ ಈ ಸಮಾಜದಲ್ಲಿ ನಿಮ್ಮ ಮುಂದೆ ಬಂದು ನಿಲ್ಲುತ್ತೇನೆ. ಅದು ಹೆಣ್ಣಾಗಿ ಅಲ್ಲ ಒಂದು ಜೀವವಾಗಿ ನಿಂತಿದ್ದೇನೆ ಎಂದು ಹೇಳುತ್ತಾಳೆ ಕವಿಯತ್ರಿ ತಮ್ಮ ಕವಿತೆಯಲ್ಲಿ ಹಾರದೇ, ತಣಿಯದೇ, ಓಲೈಸದೇ ಒಮ್ಮೆ ನಿಮ್ಮ ಮುಂದೆ ಬರುತ್ತೇನೆ. ಆಗ ನೀವು ಯಾಕೆ ಬೆವರಬೇಕು ಎಂದು ಪ್ರಶ್ನಿಸುತ್ತಿದ್ದಾರೆ.

ವರ್ತಮಾನದ ಸಂಕಟಗಳಿಗೆ ಇತ್ತೀಚಿನ ಕಾವ್ಯಭಾಷೆ ಹೊಸ ಲೋಕ ಸೃಷ್ಟಿಸುತ್ತದೆ. ಇಂಗ್ಲಿಷ್ ಪದ ಬಳಕೆ ಹಾಗೂ ತಂತ್ರಗಾರಿಕೆಯಲ್ಲಿ ವಿಶೇಷತೆ ಹೊಂದಿರುವುದು ಕಂಡು ಬಂದಿದೆ. ಕಾವ್ಯ ಕಡಿಮೆ ಅವರ ಧ್ಯಾನಕೆ ತಾರೀಖಿನ ಹಂಗಿಲ್ಲ ಎಂಬ ಸಂಕಲನದಲ್ಲಿ ಹೆಣ್ಣು ಋತುಮತಿಯಾಗುವುದನ್ನು ವಿಶೇಷವಾಗಿ ಅಭಿವ್ಯಕ್ತಿಸಿದ್ದಾರೆ. ಅದೊಂದು ಹೊಸ ಹುಟ್ಟು ಹೊಸ

ಚೈತನ್ಯ ಎಂಬ ಅರ್ಥದಲ್ಲಿ ಅಭಿವ್ಯಕ್ತಿಸುತ್ತಾರೆ. ಹೆಣ್ಣು ಋತುಮತಿಯಾದಾಗ ಆಕೆಯನ್ನು ಧಾರ್ಮಿಕ ಕಾರ್ಯದಿಂದ ದೂರ ಇಟ್ಟು ನೋಡುವ ಮನಸ್ಸುಗಳಿಗೆ ಸರಿಯಾದ ಉತ್ತರ ನೀಡುತ್ತಾರೆ. ತಮ್ಮ ಕವಿತೆಯ ಮೂಲಕ ಅದೊಂದು ಜೈವಿಕ ಕ್ರಿಯೆ ಅದಕ್ಕೆಂದೇ ದೂರ ಇಟ್ಟ ಮಡಿ ಮೈಲಿಗೆ ಮಾಡುವ ಅಮಾನವೀಯ ಎಂದು ಸಾರಿದ್ದಾರೆ. ತನ್ನನ್ನು ಜಗತ್ತು ಹೇಗೆ ಕಾಣಬೇಕು ಎಂಬುದರ ಬಗ್ಗೆ ಹೊಸದಾಗಿ ನುಡಿದಿದ್ದಾರೆ. ಇದು ಸಾಮಾನ್ಯ ಗ್ರಹಿಕೆಗಳನ್ನು ಪೂರ್ವಾಗ್ರಹಗಳನ್ನು ಒಡೆದು ಪುರುಷ ಪ್ರಧಾನ ಜಗತ್ತಿನಲ್ಲಿ ಹೆಣ್ಣನ್ನು ನೋಡುವ ಕಾಣಿಸುವ ಹೊಸ ದೃಷ್ಟಿಯನ್ನು ಸಮಕಾಲೀನ ಮಹಿಳಾ ಕಾವ್ಯ ಸೃಷ್ಟಿಸಿದೆ. ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಹಾಗೆ ಸ್ಪಂದಿಸಬೇಕು ಎಂಬುದನ್ನು ನುಡಿದಿದ್ದು ಕಂಡು ಬರುತ್ತದೆ. ಸ್ಥಾಪಿತವಾದ ಸಂಪ್ರದಾಯಸ್ಥ ಮೂಲಗಳಿಂದ ಸಮಾಜ ಯಾವ ರೀತಿಯಾಗಿ ಕಲುಷಿತಗೊಂಡಿದೆ. ಇಂತ ವಾತಾವರಣದಿಂದ ಮುಕ್ತಿ ಪಡೆಯುವುದು ಹೇಗೆ ಎಂಬುದನ್ನು ಆಧುನಿಕ ಹೊಸ ಚಿಂತನೆಗಳನ್ನು, ಆಲೋಚನ ಕ್ರಮಗಳನ್ನು ಸೃಷ್ಟಿಸಿರುವುದು ಮಹತ್ವದ ಕಾರ್ಯ. ಅರಿಯಬೇಕಾದ, ಮೀರಬೇಕಾದ ಸತ್ಯ ಅರಿವು ಕಾವ್ಯ ಹೇಗೆ ಅಭಿವ್ಯಕ್ತಿಸಿದೆ ಎನ್ನುವುದಕ್ಕೆ ಸಮಕಾಲೀನ ಕಾವ್ಯ ಸಾಕ್ಷಿಯಂತಿದೆ.

ಸಾಮಾನ್ಯವಾಗಿ ತರುಣ ಕವಿಗಳು ಇಂದಿನ ಜಾಗತಿಕ ಸಂದರ್ಭದಲ್ಲಿ ಈ ಜಗತ್ತನ್ನು ಒಂದೇ ಅಂಗಳವೆಂದು ಭಾವಿಸಿ ನಡೆಯುವ ಎಲ್ಲಾ ಬದಲಾವಣೆಗಳನ್ನು ಅನುಸರಿಸಿ ಅದಕ್ಕೆ ತಮ್ಮದೇ ಆದ ಹೊಸ ಆಲೋಚನ ಕ್ರಮವನ್ನು ಸಮೀಕರಿಸಿ ಹೊಸ ಹೊಸ ಪ್ರಯೋಗಗಳನ್ನು ಕಾವ್ಯದಲ್ಲಿ ಪ್ರಯೋಗಿಸುತ್ತಿರುವುದು ವಿಶೇಷವಾಗಿದೆ. “ಇಂದು ಕನ್ನಡದಲ್ಲಿ ಮಹಿಳಾ ಕವಿಗಳು ಹೊಚ್ಚ ಹೊಸ ಸಂವೇದನೆಯಿಂದ ಬರೆಯುತ್ತಿದ್ದಾರೆ. ಹೊಸ ಜಗತ್ತಿನಲ್ಲಿ ಮಹಿಳೆ ತೆರೆಯಲ್ಪಡುತ್ತಿರುವ ಅವಕಾಶಗಳೂ ಅದನ್ನು ದಬ್ಬಲು ಪ್ರಯತ್ನಿಸುವ ಸಾಂಪ್ರದಾಯಿಕ ಪ್ರಯತ್ನಗಳೂ ಇದಕ್ಕೆ ಪರೋಕ್ಷವಾಗಿ ಕಾರಣವಾಗಿವೆ.”[೨] ಸಮಾಜದ ಬಗ್ಗೆ ಹೊಸ ಒಳನೋಟಗಳು ಮಹಿಳಾ ಕಾವ್ಯದಿಂದಲೇ ಬರುತ್ತಿವೆ ಎನ್ನುವುದು ವಿವೇಕ ಶಾನುಭೋಗರವರು ನುಡಿಯುತ್ತಾರೆ. ಒಂದು ರೀತಿಯಲ್ಲಿ ನಿಜವಾಗಿದೆ ಇಂದು ಅಪಮಾನ, ಶೋಷಣೆಗೆ ಹೆಣ್ಣು ಒಳಗಾಗುತ್ತಿದ್ದಾರೆ ಇದಕ್ಕೆ ಪ್ರತಿಭಟನೆ ರೂಪದಲ್ಲಿ ಧಿಕ್ಕರಿಸಿ ನೈಜ ಸಂವೇದನೆಗಳ ಕಣ್ಣೀರಿನ ಕರಗುವ ಸಂವೇದನೆಗಳೂ ಸೃಷ್ಟಿಯಾಗುತ್ತಿವೆ. ಒಂದು ಮೂಲ ನೆಲೆಯನ್ನು ಹುಡುಕಲು ಪ್ರಯತ್ನಿಸುತ್ತೇವೆ. ಈ ಹಿಂದೆ ಇದ್ದ ಸಂಪ್ರದಾಯಸ್ಥ ಮಾದರಿಯನ್ನು ಅಭಿವ್ಯಕ್ತ ಕ್ರಮವನ್ನು ಮುರಿದು ಹೊಸ ಮಾದರಿಯಲ್ಲಿ ಕಾವ್ಯ ರೂಪಗೊಳ್ಳುತ್ತದೆ ಅಷ್ಟೇ ಅಲ್ಲದೆ ಎಲ್ಲ ವಲಯದಲ್ಲಿ ಕೆಲಸ ಮಾಡುವ ಮಹಿಳೆಯರು ಕಾವ್ಯ ರಚನೆಯಲ್ಲಿ ತೊಡಗಿರುವುದರಿಂದ ಆಯಾ ವಲಯದ ಭಾಷೆ, ಬದುಕಿನ ಚಿತ್ರಣ ವಲಯ ಪರಿಭಾಷೆಗಳು ಸಂವೇದದ ಸ್ವರೂಪವಾಗಿ ಹೊಸ ರೀತಿಯಲ್ಲಿ ಅಭಿವ್ಯಕ್ತಿಸಿ ಮಾತೃ ಸ್ವರೂಪವನ್ನು ತಾಳಿವೆ.

ಮಹಿಳಾಕಾವ್ಯ ತನ್ನ ಸ್ವರೂಪ ಆಕಾರ ಮತ್ತು ಶಕ್ತಿಯ ಕುರಿತು ಸುಧಾ ಚಿದಾನಂದಗೌಡ ಅವರ ಬಯಲು ಧ್ಯಾನ ಎಂಬ ಸಂಕಲನದಲ್ಲಿ ದಾರಿ ಬಿಡಿ ಎಂಬ ಕವಿತೆಯಲ್ಲಿ ತಮ್ಮ ಕವಿತೆಯ ಘನತೆಯ ಬಗ್ಗೆ ಈ ರೀತಿಯಾಗಿ ಅಭಿವ್ಯಕ್ತಿಸಿದ್ದಾರೆ.

ಪಾತಾಳಗರಡಿ ಸೋಸಿ
ಮಣ್ಣು ನೆಲ ಹೂ ಮೂಸಿ
ನುಸಿದು ಕಾಲ ದೇಶಗಳ ಪಾದದಡಿಯಲ್ಲಿ
ಬೆಳ್ಳಿಚುಕ್ಕಿಗೂ ಮುಂಚೆ
ಕನಸಿನ ರಂಗೋಲಿಗೆ
ಬಣ್ಣ ತುಂಬುವುದಿದೆ
ದಾರಿ ಬಿಡಿ ಅವಳಿಗೆ[೨೮]

ಸಮಕಾಲೀನ ಸಂದರ್ಭದಲ್ಲಿ ಹೊಸ ಸಂವೇದನೆಗಳಿಗೆ ಈ ನೆಲ, ಗಾಳಿ, ಮಳೆ ಎಲ್ಲವೂ ಹೊಸದಾಗಿ ಕಾಣಿಸಿಕೊಳ್ಳುತ್ತಿದೆ. ಮಹಿಳೆ ತನ್ನ ನಿರ್ಬಂಧಿತ ಚೌಕಟ್ಟನ್ನು ಮುರಿದು ಆಧುನಿಕ ಮಹಿಳೆಯಾಗಿ ಜನ್ಮತಾಳಿ ತನ್ನ ಆಗಮನ ಹೊಸ ರೀತಿಯಿಂದ ಕೂಡಿದ್ದು ಎಂದು ಅಭಿವ್ಯಕ್ತಿಸಿದ್ದಾರೆ. ದಾರಿ ಬಿಡಿ ದಯವಿಟ್ಟು ಸಾಗರದ ತಳಹೊಕ್ಕ ಮುತ್ತು ಹವಳ ತೆಗೆಯಬೇಕೆಂದೆ. ಈ ಆಕಾಶವನ್ನು ಮುಟ್ಟಿ ಮೋಡಗಳೊಂದಿಗೆ ಮಾತನಾಡಬೇಕಿದೆ. ಪುಸ್ತಕದಲ್ಲಿ ಹೇಳಿಕೊಂಡ ಬಂದಿರುವ ಅಮಾನವೀಯತೆಗೆ ಮಂಗಳ ಹಾಡಿ ಹೊಸ ಅಕ್ಷರದ ಪುಸ್ತಕ ಬರೆಯಬೇಕಿದೆ. ಹೊಸ ಶಬ್ದಕ್ಕೆ ಹೊಸ ಅರ್ಥದ ವಿವರಣೆ ನೀಡುವ ಅಗತ್ಯವಿದೆ ಪದ್ಯ ಕಟ್ಟಿ ಮನುಷ್ಯತ್ವ ರಾಗ ಹಾಡಬೇಕಿದೆ. ಆ ರಾಗಕ್ಕೆ ಹೊಸ ಹೆಜ್ಜೆ ಹಾಕಿ ಹೊಸ ದಾರಿ ಮಾಡಬೇಕಿದೆ ದಾರಿ ಬಿಡಿ ಎಂದು ತಮ್ಮ ಕವಿತೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಇದು ಕೇವಲ ಕವಯಿತ್ರಿಯ ಆಗಮವಾಗದೆ ಇಡೀ ಮಹಿಳಾ ಕಾವ್ಯದ ಆಗಮನವಾಗಿದೆ. ಪಾತಾಳಗರಡಿಯನ್ನು ಸೋಸಿ ಮಣ್ಣು, ನೆಲ, ಹೂ ಮೂಸಿ ಹಲವು ದೇಶಗಳ ಜ್ಞಾನವನ್ನು ಪಡೆದು ಅಂತಹದೊಂದು ಹೊಸ ಜ್ಞಾನದ ಹೂವೊಂದನ್ನು ಈ  ನೆಲದಲ್ಲಿ ಅರಳಿಸುವುದು ಸಜ್ಜಾಗಿದಂತಿದೆ. ಆಕಾಶದ ಚುಕ್ಕಿಗಳನ್ನು ರಂಗೋಲಿಯಾಗಿಸಿ ಹೊಸ ಬಣ್ಣ ತುಂಬುವುದಿದೆ ದಾರಿ ಬಿಡಿ ಎಂದು ಹೇಳಿರುವುದು ಹೊಸ ಬಣ್ಣ ಇಲ್ಲಿ ಹೊಸ ಸಂವೇದನೆ, ಆಶಯ ಮತ್ತು ಚಿಂತನೆಗಳಾಗಿವೆ. ಈ ಸಂಕಲನದಲ್ಲಿ ರೂಪಾಂತರ, ಪ್ರಾರ್ಥನೆ, ಪ್ರಶ್ನೆ ಧ್ಯಾನಸ್ಥೆ ಚಂಚಲತೆ, ವಾಸ್ತವ ಎಂಬ ಪಠ್ಯಗಳು ಆಧುನಿಕತೆಯನ್ನು ಎತ್ತಿ ಹಿಡಿದು ಅದರ ಅದಮ್ಯದ ಕುರಿತು ಮಾತನಾಡುತ್ತವೆ ಹಾಗೂ ಮಹಿಳೆಯ ಅಂತರಂಗ ಮಾತುಗಳಂತಿವೆ.

ಈ ಲೋಕದೆದರು ತುಟಿಬಿಚ್ಚಿ ಹೇಳಿಕೊಳ್ಳಲಾಗದ ಹೆಣ್ಣಿನ ಒಳತುಟಿಯನ್ನು ತನ್ನ ಅಂತರಂಗದ ತುಮುಲಗಳನ್ನು ಕವಯಿತ್ರಿ ಇಲ್ಲಿ ಬಿಚ್ಚಿಟ್ಟಿದ್ದಾರೆ. ಸ್ಥಾಪಿತ ನೆಲೆಗಳು ಹೆಣ್ಣಿನ ಬದುಕನ್ನು ಯಾವ ಯಾವ ಬಗೆಯಲ್ಲಿ ಸ್ಥಿರಗೊಳಿಸಿವೆ ಹೇಗೆ ಸ್ಥಿರಗೊಂಡ ಸಂಕೋಲೆಗಳು ಹೆಣ್ಣನ್ನು ದೈಹಿಕ,

ಮಾನಸಿಕ ಸಾಮಾಜಿಕವಾಗಿ ಎಷ್ಟೆಲ್ಲಾ ಶೋಷಿಸುತ್ತಿವೆ ಎಂಬುದನ್ನು ತಮ್ಮ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ತನ್ನೊಳಗಿನ ನೋವು, ಅವಮಾನಗಳು, ಗುಪ್ತಗಾಮಿನಿಯಾಗಿ ತನ್ನ ಅಂತರಂಗಗಳಲ್ಲಿ ಮಿಸುಕಾಡಿದರೂ ಅವಳ ಸಿಟ್ಟು ಆಕ್ರೋಶ, ಬಿರಿ ಕುದಿಸುವಲ್ಲಿಗೆ ನಿಂತು ಬಿಡುತ್ತದೆ. ಇತ್ಯಾದಿಯೂ ಪುರುಷನಿಲ್ಲದ, ಮಹಿಳೆಯರಿಗಷ್ಟೇ ಸೀಮಿತವಾಗಿರುವ ಶೀಲ ಅಥವಾ ಪಾವಿತ್ರ್ಯದ ಪ್ರಶ್ನೆಯನ್ನು ಮಹಿಳಾ ಕವಿಯತ್ರಿಯರು ಆಧುನಿಕ ಯುಗದಲ್ಲಿ ಪ್ರಶ್ನಿಸುರುವುದು ಸಮಾನತೆಯ ಸಂಕೇತವಾಗಿದೆ. ಪರಂಪರೆಯಿಂದ ಮಹಿಳೆಯ ಮೇಲೆ ಹೇರಲಾದ 'ಶೀಲದ' ಕುರಿತು ಅನೇಕ ನಂಬಿಕೆಗಳು ಆಕೆಯನ್ನು ಆ ಹಿನ್ನೆಲೆಯಲ್ಲಿ ಶೋಷಣೆ ಮಾಡಿ ಬಂಧನದಲ್ಲಿಟ್ಟುಕೊಳ್ಳುವ ದುರಂತಕ್ಕೆ ಮಹಿಳಾ ಕಾವ್ಯ ಪ್ರಶ್ನಿಸಿದೆ. ಶೀಲ ಕೇವಲ ಮಹಿಳೆ ಮಾತ್ರ ಯಾಕೆ ಅದು ಪುರುಷನಿಗೂ ಅನ್ವಯಿಸಲಿ, ಕೇವಲ ಮಹಿಳೆ ಒಬ್ಬಳಿಂದಲೇ ಶೀಲ ಕೆಡುವುದಿಲ್ಲ ಅದರಲ್ಲಿ ಪುರುಷನದು ಸಮಪಾಲು ಇರುತ್ತದೆ ಎನ್ನುವ ಪ್ರಶ್ನೆ ಎತ್ತುತ್ತಾರೆ. ಇತ್ತೀಚಿನ ಕವನಗಳಲ್ಲಿ ಹೊಸತೇ ನುಡಿಗಟ್ಟುಗಳಾಗಿ ತಮ್ಮ ಅಂತರ್ಯದಲ್ಲೇ ನಡೆಸುವ ವಿಶಿಷ್ಟ ಹುಡುಕಾಟವಿದೆ. ಭೂತ–ವರ್ತಮಾನಗಳ ವರ್ತನೆಗೆ ಮಿಡಿಯುವ ತಳಮಳದ ತಾಪವಿದೆ. ಪದ್ಯದ ಸಾಲು ಸಾಲುಗಳು ಸಾಗುತ್ತಿದ್ದಂತೆ ಥಟ್ಟನೆ ಕೆಲ ಸಾರ್ಥಕ ಪದಾರ್ಥಗಳನ್ನು ಹೊಳಪಿ ಅಲ್ಲೇ ಕ್ಷಣ ಕಾಲ ತಾಗಿ ಮೆಲುಕುವಂತೆ ಮಾಡುತ್ತವೆ.

ಸಮಕಾಲೀನ ಕನ್ನಡ ಕಾವ್ಯವನ್ನು ಅವಲೋಕಿಸಿದಾಗ ನಮಗೆ ಕಂಡುಬರುವ ಸಂಗಾತಿ ಅನೇಕ ಮಹಿಳಾ ಕವಯಿತ್ರಿಯರು ಸಾಮಾಜಿಕ ಹೋರಾಟಗಾರರಾಗಿದ್ದಾರೆ. ಇಂದು ಅವರ ಸಾಮಾಜಿಕ ಚಿಂತನೆ, ಕಳಕಳಿ, ಪ್ರತಿಭಟನೆ ಅವರ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಸಾಮಾಜಿಕ ಹೋರಾಟಗಾರರಷ್ಟೇ ಅಲ್ಲದೆ ಬೋಧಕ ವರ್ಗವು ಮಹಿಳೆಯ ಬಗ್ಗೆ ಚಿಂತನಾತ್ಮಕ ನೆಲೆಗಳನ್ನು ಸೃಷ್ಟಿಸುತ್ತಿದೆ. ಮಹಿಳೆಯರ ಸಮಾನತೆಗಾಗಿ, ಹಕ್ಕುಗಳಿಗಾಗಿ, ಅವಳ ಅಸ್ಮಿತೆಗಾಗಿ ಕಾವ್ಯ ಮಿಡಿದಿರುವುದು ಕಾಣುತ್ತೇವೆ. ಅಕ್ಕಮಹಾದೇವಿ, ಸಂಚಿಯ ಹೊನ್ನಮ್ಮ ಇತ್ಯಾದಿ ಮಹಿಳೆಯರಿಗೆ ಆಧ್ಯಾತ್ಮ ಚಿಂತನೆಯನ್ನು ಸಹ ಇಂದಿನ ಕವಯಿತ್ರಿಯರ ಕಾವ್ಯದಲ್ಲಿ ಒಡಮೂಡಿದೆ. ಸಾಹಿತ್ಯಕ್ಕಾಗಿ ಸಾಹಿತ್ಯ, ಕಾವ್ಯಕ್ಕಾಗಿ ಕಾವ್ಯರಚಿಸುವುದಿಲ್ಲ. ಕಾವ್ಯ ಅಂತರಂಗದ ಅಭಿವ್ಯಕ್ತಿಯೊಂದಿಗೆ ಸಮಾಜ ಬದಲಾವಣೆ, ಸಂಕಟಗಳ ನಿವಾರಣೆ ಮತ್ತು ಅಭಿವ್ಯಕ್ತಿಗಾಗಿ, ಸಮಾನತೆಗಾಗಿ, ಕಾವ್ಯ ರಚನೆಯಾಗುತ್ತಿರುವುದು ಕಂಡುಬಂದಿದೆ. ಮಹಿಳೆ ಆರ್ಥಿಕ ಗುಣಮಟ್ಟದ ಹಾಗೂ ಆಕೆ ದುಡಿಯುವ ಕೆಲಸದ ಕುರಿತು ಅದರಿಂದ ಬರುವ ಆದಾಯದಲ್ಲಿ ಆಕೆಯ ಅನುಭವಿಸುವ ಫಲವೆಷ್ಟು ಎನ್ನುವ ಪ್ರಶ್ನೆಯನ್ನು ಕಾವ್ಯ ಹಾಕುತ್ತಿದೆ. ಇಂದು ಹಳ್ಳಿಗಾಡಿನಲ್ಲಿ ಅನೇಕ ಮಹಿಳೆಯರು ಕೂಲಿ ಕೆಲಸ ಮಾಡಿ ಇಡೀ ಕುಟುಂಬದ ಜವಾಬ್ದಾರಿ ಮತ್ತು ಪೋಷಣೆಯನ್ನು ಮಾಡುತ್ತಾರೆ. ಆಕೆಯ ದುಡಿಮೆಯಿಂದ ಬಂದ ಆದಾಯ ಪುರುಷನ ಕೈ ಸೇರಿ ಅವನ ಸುಖಭೋಗಕ್ಕೆ ಬಳಸುತ್ತಿರುವ ದುರಂತವನ್ನು ಕಾವ್ಯ ಧಿಕ್ಕರಿಸಿ ಆಕೆಯ ಆದಾಯದ ಸಂಪೂರ್ಣ ಹಕ್ಕುದಾರಳು

ಎಂದು ಹೇಳಿದಂತಿದೆ ಇದು ಆಧುನಿಕ ಕಾಲಮಾನದ ಸಂಗತಿಯಾಗಿದೆ. ಮಹಿಳೆ ಒಂದೇ ವಲಯದಲ್ಲಿ ಕೆಲಸ ಮಾಡುವುದಿಲ್ಲ ಸರಕಾರಿ ಕೆಲಸ, ಖಾಸಗಿ ಕೆಲಸ, ಈ ಸರಕಾರಿ ಕೆಲಸದಲ್ಲಿ ಅನೇಕ ದರ್ಜೆಯಲ್ಲಿ ಅನೇಕ ತರಹದು ಕಿರುಕುಳ ಮತ್ತು ಕುಟುಂಬದ ಕಿರುಕುಳಕ್ಕೆ ಹೆಣ್ಣು ನಲುಗಿದ್ದಾಳೆ. ಆಕೆಯ ಸಂಕಟಕ್ಕೆ ಕೊನೆ ಇಲ್ಲ ಎನ್ನುವ ಆಶಯವನ್ನು ಕಾವ್ಯ ವ್ಯಕ್ತಪಡಿಸುತ್ತಿದೆ. ತಮ್ಮ ತಮ್ಮ ಕ್ಷೇತ್ರದಲ್ಲಿ ತಮ್ಮ ಅನುಭವಕ್ಕೆ ಬಂದ ವಿಚಾರಗಳು, ಕಲ್ಪನಾಲೋಕದಾಚೆಗೆ ನಿಜ ಜೀವನಕ್ಕೆ ಸಂಬಂಧಿಸಿರುವುದರಿಂದ ಕಾವ್ಯದಲ್ಲಿ ಬಿಸಿ ತಟ್ಟುತ್ತದೆ. ಹಾಗೂ ಪ್ರಾಮಾಣಿಕ ವೆನಿಸುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯ ಸ್ಥಾನಮಾನ ಇಂದಿಗೂ ಇರುವ ರೀತಿಯಲ್ಲಿ ಈ ಹಿಂದೆ ಇದ್ದಿಲ್ಲ. ಇಂದು ಮಹಿಳೆಯದ್ದೆ ಆದ ಚರಿತ್ರೆ ರೂಪಗೊಳ್ಳುತ್ತಿರುವ ಹೆಮ್ಮೆಯ ಸಂಗತಿ. ಈ ಚರಿತ್ರೆಯಿಂದ ಮಹಿಳೆಯ ಬದುಕಲ್ಲಿ ಬೆಳಕನ್ನು ಕಟ್ಟಬೇಕು, ಮಹಿಳೆಯ ಬಗ್ಗೆ ಇದ್ದ ಪೂರ್ವಗ್ರಹಗಳು ದೂರವಾಗಬೇಕು. ಜೈವಿಕ ಸ್ವಾತಂತ್ರ್ಯ ಮತ್ತು ಸಾಮಾಜಿಕ ಸ್ವಾತಂತ್ರ್ಯ ಹೊಂದಬೇಕು ಎನ್ನುವುದು ಮಹಿಳಾ ಕವಯಿತ್ರಿಯರ ಅಭಿವ್ಯಕ್ತಿಯಾಗಿದೆ. ಇಂದು ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯದ ಕುರಿತು ಪ್ರತೀಕವಾಗಿ, ವಿಶ್ಲೇಷಿಸುವ ಅಗತ್ಯವಿದೆ. ಸ್ತ್ರೀಪರವಾದ ವಿಮರ್ಶೆ ವಸ್ತುನಿಷ್ಟ ವಿಮರ್ಶೆಯಾಗಿದೆ. ನಿಜವಾದ ಮೌಲ್ಯಗಳು ಕಾಣಲು ಸಾಧ್ಯವಾಗುತ್ತದೆ. ಇಡೀ ಸಾಹಿತ್ಯ ಚರಿತ್ರೆಯಲ್ಲಿ ಗೌಣವಾಗಿ ಹೋಗುವ ಅಂಶಗಳು ಮುಖ್ಯ ನೆಲೆಗೆ ಬಂದು ಚರ್ಚೆಗೆ ಒಳಪಟ್ಟವರ ಸಂವೇದನೆಯನ್ನು ಸಮಾಜಕ್ಕೆ ಅರ್ಥೈಸುವ ಕೆಲಸವಾಗುತ್ತದೆ. ಮಹಿಳೆಗೆ ನಿಷ್ಕಾಮ ಪ್ರೇಮ, ನಿಷ್ಠೆ, ತ್ಯಾಗ, ಸಹನಶೀಲತೆ ಇತ್ಯಾದಿ ಪರಂಪರಾಗತ ಮೌಲ್ಯಗಳನ್ನು ಹೇರಿ ಹೊರಿಸಿದ ಹೊರೆಯ ಭಾರ ಇಳಿಸಲು ಸಹಾಯಕವಾಗುತ್ತದೆ.

ತಪ್ಪುಗಳಿವೆ
ಒಪ್ಪಗಳಿವೆ
ಒಪ್ಪ ಓರಣಗೊಳಿಸಿದ ಅಂಗಳವಿದೆ
ಅನಾಥವಾದ ಹಿತ್ತಿಲೂ ಇದೆ.
ಕೌದಿಯ ಮಡಿಕೆಯೊಳಗೆ ಬೆಟ್ಟಗೆ
ಬಿಡಿಸಲಾಗದ ಬಿಕ್ಕಗಳಿವೆ
ಅಳಿಸಲಾಗದ ಬಿಕ್ಕಳಿಕೆಗಳಿವೆ
ಶತಮಾನಗಳ ಚುಂಗು
ನೆನಪುಗಳ ಗುಂಗು
ಅರೆದೆರೆದ ಕಣ್ಣುಗಳಲ್ಲಿ
ನಾಭಿ ಮೂಲದ ನುಗುಗು[೨೫]

ಕವಯಿತ್ರಿ ಇಲ್ಲಿ ಪರಂಪರೆಯಿಂದ ಬಂದ ಒಪ್ಪುಗಳು ಮತ್ತು ತಪ್ಪುಗಳು ಕುರಿತು ಮಾತನಾಡುತ್ತಾರೆ. ಪರಂಪರೆ ಎಂದರೆ ಈ ಹಿಂದೆ ಇದ್ದ ಸಂಪ್ರದಾಯ ಮುಂದುವರಿಕೆಯ

ಭಾಗ ಒಂದು ಬಗೆಯದಾದರೆ, ಅದರ ಪ್ರಭಾವದಿಂದ ಸ್ವಲ್ಪ ಬದಲಾವಣೆ ಹೊಂದಿ ಕಾಲಮಾನಕ್ಕೆ ತಕ್ಕುವಂತೆ ಸೃಷ್ಟಿಸಿಕೊಳ್ಳುವುದು ಇನ್ನೊಂದು ಬಗೆಯದಾಗಿದೆ. ಯಾವುದೇ ದಿಢೀರನೆ ಜನ್ಮ ತಾಳುವುದಿಲ್ಲ ಅದಕ್ಕೆ ಪರಂಪರೆಯ ಬೆಳಕು ಇದ್ದೆ ಇರುತ್ತದೆ. ಅದರಂತೆ ಕವಯಿತ್ರಿ ಅವರು ಇಲ್ಲಿ ಪರಂಪರೆಯಲ್ಲಿ ಅಂಶಗಳ ಕುರಿತು ವಿಶ್ಲೇಷಿಸಿದ್ದಾರೆ. ಅಲ್ಲಿರುವ ತಪ್ಪುಗಳು ಯಾವುವು, ಒಪ್ಪಬಹುದಾದ ಸಮ್ಮತಿಸಬಹುದಾದ ಜೀವಪರ ಅಂಶಗಳು ಯಾವುವು ಎನ್ನುವುದು ಹೇಳುತ್ತಾರೆ. ಪರಂಪರೆಯಲ್ಲಿ ಮುಂದಾಗುವ ಅಂದರೆ ಭವಿಷ್ಯತ್ತಿನ ಹೊಸ ಗಳಿಗೆ ಅವಕಾಶವೂ ಇದೆ. ಹಾಗೇ ಚಟ್ಟಗಟ್ಟಿ ಕಟ್ಟಿ ಹಾಕಿಕೊಂಡು ಜಡತ್ವದ ಹಿತ್ತಲೂ ಇದೆ. ಇಲ್ಲಿ ಅಂಗಳ ಎನ್ನುವುದು ಅಭಿವೃದ್ಧಿಯ ಸಂಕೇತವಾಗಿದೆ. ಹಿತ್ತಲೂ ಎನ್ನುವುದು ಸಂಪ್ರದಾಯಸ್ಥ ಮನಸ್ಥಿತಿಯನ್ನು ಸೂಚಿಸುತ್ತದೆ. ಹಾಗೇ ಮುಂದುವರೆದು ಕೌದಿಯ ಎನ್ನುವ ರೂಪಕ ಮಹತ್ವದ ಅಂಶಗಳನ್ನು ಹೊರಚೆಲ್ಲುತ್ತದೆ. ಆಶ್ರಯ ಕೌದಿಯಲ್ಲಿ ಕನವರಿಕೆಗಳಿವೆ, ಕನಸುಗಳಿವೆ, ಹಾರೈಕೆಯಿದೆ ಹೀಗೆ ಅನೇಕ ಗಡಿ ರೇಖೆಗಳಿವೆ. ಹೆಣ್ಣು ಹೇಗೆ ಬದುಕಬೇಕು ಎನ್ನುವ ಸಂವಿಧಾನ ಕೌದಿಯಲ್ಲಿದೆ. ಬಣ್ಣ ಬಣ್ಣದ ಬಟ್ಟೆಗಳು ಆಕೆಯ ಕನಸುಗಳು, ಆ ಕನಸುಗಳನ್ನು ಪುರುಷ ಪ್ರಧಾನ ಮನದಲ್ಲಿಯು ಬಂಧಿಸಿ ಒಲಿಯುವ ಸಂಕೇತವಾಗಿದೆ. ಕೌದಿ ಪರಂಪರೆಗೆ ಒಂದು ದೊಡ್ಡ ರೂಪಕವಾಗಿದೆ. ಕವಯಿತ್ರಿ ಕೌದಿಯನ್ನು ರೂಪಕವಾಗಿ ಬಳಸಿಕೊಂಡಿದ್ದ ಕಾವ್ಯಸೃಷ್ಟಿಗೆ ಮೆರಗನ್ನು ತಂದಿದೆ. ಕೌದಿಯೊಳಗೆ ಬಿಡಿಸಲಾಗದ ಚುಕ್ಕಿಗಳು ಮಹಿಳೆಯ ಕನಸುಗಳು ಅಲಿಸಲಾಗದ ಬಿಕ್ಕಳಿಕೆಗಳು ಈ ಸಂದರ್ಭದಲ್ಲಿಯೂ ಶತ ಶತಮಾನದ ಹೆಣ್ಣಿನ ಆಕ್ರಂದನದ 'ಧ್ವನಿ ಪ್ರತಿನಿಧಿಸುತ್ತದೆ ಎಂದು ಕಾವ್ಯ ನುಡಿಯುತ್ತಿದೆ. ಕೌದಿಯ ಮೂಲಕ ಹೆಣ್ಣನ್ನು ಕಣ್ಣೀರು ಮುಕ್ತ ಬಿಕ್ಕಳಿಕೆಯನ್ನು ಹೊರಚೆಲ್ಲಿದ್ದಾರೆ. ಪರಂಪರೆಯುದ್ದಕ್ಕೂ ಆ ಕೌದಿಯಲ್ಲಿ ಹೆಣ್ಣಿಗೆ ಮಾಡಿದ ಅನ್ಯಾಯ ಅಪಮಾನ, ಶೋಷಣೆಯ ವಾಸನೆ ಇಂದು ಬರುತ್ತಿದೆ. ಇದಕ್ಕೆ ಸಾಕ್ಷಿ ಎನ್ನುವಂತೆ ವರ್ತಮಾನದಲ್ಲಿ ನಡೆಯುವ ಅನೇಕ ಅಮಾನವೀಯ ಕೃತ್ಯಗಳೇ ಸಾಕ್ಷಿ.

ವರ್ತಮಾನದ ಅಮಾನವೀಯ ಕೃತ್ಯಗಳು ಪರಂಪರೆಯನ್ನು ಚಿತ್ರಿಸುತ್ತಿವೆ ಹಾಗೂ ವಿಶ್ಲೇಷಿಸುತ್ತವೆ. ಆ ಮನಸುಗಳೇ ಮರುಸೃಷ್ಟಿಯಾಗಿ ಮರುಜನ್ಮ ಪಡೆದು ಆ ಇಂತಹ ಕೆಲಸಕ್ಕೆ ಮುಂದಾಗಿದೆ ಎನ್ನುವ ಸಂಗತಿಯನ್ನು ಕಾವ್ಯ ಧ್ವನಿಸುತ್ತವೆ. ಇಂದು ಅನೇಕ ತಂತ್ರಜ್ಞಾನ, ಆಧುನಿಕತೆ, ಬೆಳದಾಗಲೂ ಹೆಣ್ಣಿಗೆ ಶೋಷಣೆ ತಪ್ಪಲಿಲ್ಲ ಅಂದ ಮೇಲೆ ಈ ಹಿಂದೆ ಇದ್ದ ಸಂಪ್ರದಾಯವನ್ನು ಕಾಲಘಟ್ಟದಲ್ಲಿ ಹೆಣ್ಣಿನ ಶೋಷಣೆ ಸಂಕಟ ನೆನೆದರೆ ಉಸಿರು ಕಟ್ಟಿಟ್ಟಿದೆ ಎಂದು ಕವಿಯತ್ರಿ ತಮ್ಮ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ನೆನಪುಗಳ ಗುಂಗು ಎನ್ನುವಂತಹದ್ದು ಪರಂಪರೆಯನ್ನು ನೆನಪಿಸುವ ರೂಪಕವಾಗಿದೆ. ಪ್ರತಿಯೊಂದು ಕಣ್ಣಲ್ಲೂ ಕಣ್ಣೀರು ಆಕಾಶ ಮುಟ್ಟುವ ರೀತಿಯಲ್ಲಿವೆ. ಹಾಗೇ ಕಣ್ಣೀರು ಈ ನೆಲವನ್ನು ಮೀಟಿ ತೇಕುತ್ತೀವೆ. ಮೇಲೆಳಲು ಸಾಹಸ ಮಾಡುತ್ತಿವೆ. ಆಕಾಶದಲ್ಲಿ ತೇಲಲು ಬಯಸುತ್ತಿವೆ. ಅವರು ಕನಸ್ಸುಗಳು, ಮನಸ್ಸುಗಳು ಕಾಲ ಯಾವುದಾದರೇನು ಒಡಲು ಸೆಳೆತ ಒಂದೇ ಜೀವ ಸಂಕಟ ಒಂದೇಯಾಗಿದೆ. ಈ ನೆಲದಲ್ಲಿ ಹೊಕ್ಕ ಹೊಸದೊಂದು ಹೂ ಅರಳಿಸುವ ಬಯಕೆ ವ್ಯಕ್ತಪಡಿಸಿದ್ದಾರೆ. ಜೋಕಾಲಿ

ಎನ್ನುವ ಪದ್ಯ ಶೀರ್ಷಿಕೆಯೇ ಅದ್ಭುತವಾದ ರೂಪಕವಾಗಿದೆ ಅದು ವರ್ತಮಾನ ಭೂತ ಭವಿಷ್ಯತ್ತಿನ ಕೊಂಡಿಯಾಗಿಸುತ್ತದೆ. ಭೂತದ ನೆನಪಿನಿಂದ ಭವಿಷ್ಯತ್ತಿನ ಕನಸನ್ನು ವರ್ತಮಾನದಲ್ಲಿ ಏಣಿಯತ್ತಿರುವುದು ಸಾಕೇತವಾಗಿದೆ. ಪರಂಪರೆಯ ಪಾಠ ಮತ್ತು ಭವಿಷ್ಯತ್ತಿನ ಬೆಳಕಲ್ಲಿ ಮರುಕಳಿಸದಂತೆ ವಿಚಾರದಿಂದಿರಲೂ ಸಹಾಯಕವಾಗುತ್ತದೆ. ಕನ್ನಡದಲ್ಲಿ ಹೊಸ ಚರ್ಚೆ ಮತ್ತು ಸಂವೇದನೆಯನ್ನು ಹುಟ್ಟುಹಾಕುವ ಕಾರ್ಯ ಸಮಕಾಲೀನ ಮಹಿಳಾಕಾವ್ಯದ್ದಾಗಿದೆ. ಸಮಾಜ ಸುಧಾರಕರ ಚಿಂತನೆಯನ್ನು ಪ್ರಶ್ನಿಸಿ ಒಪ್ಪುವ ಸಮ್ಮತಿಸುವ ನಿರಾಕರಿಸುವ ಬಗೆಯನ್ನು ಕಾವ್ಯ ಧ್ವನಿಸುತ್ತಿದೆ.

ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರಣಗಳಿಂದಲೂ ಸಾಹಿತ್ಯಿಕ ಚಳುವಳಿ ಹುಟ್ಟಿಕೊಳ್ಳುತ್ತಿವೆ. ಇಂತಹ ಚಳುವಳಿಯ ಹಿನ್ನೆಲೆಯಲ್ಲಿ ಸಮಕಾಲೀನ ಸಂವೇದನೆಯ ಒತ್ತಡ ಇರುತ್ತದೆ. ಇಂತಹ ಸಂದರ್ಭದಲ್ಲಿ ಸಾಹಿತಿಗಳು, ಕವಿಗಳು, ಸಾಮಾಜಿಕ ಹಿನ್ನೆಲೆ, ಸಾಮಾಜಿಕ ಕಳಕಳಿ, ಸಾಮಾಜಿಕ ಕರ್ತವ್ಯದ ಬಗೆಗೆ ವಿಶೇಷವಾದ ಪ್ರಶ್ನೆ ಇರಬೇಕು ಅಂತ ಪ್ರಶ್ನೆ ಸಮಕಾಲೀನ ಕವಿಗಳಲ್ಲಿ ಸ್ವಲ್ಪ ಕಡಿಮೆಯಾದ್ದಾಗಿದೆ ಎಂದು ಅನಿಸುತ್ತವೆ. ವೈಯಕ್ತಿಕ ವಿಚಾರಧಾರೆಯನ್ನು ಸಾರ್ವತ್ರಿಕರಿಸುವುದು ಹೆಚ್ಚಾಗಿ ಕಂಡುಬರುತ್ತದೆ. ಇದೂ ಒಂದು ಬಗೆಯಲ್ಲಿ ಸರಿಯಾದರೂ ಸಾರ್ವತ್ರಿಕ ಹಿತಾಸಕ್ತಿಯ ಕಡೆಗೆ ಹೆಚ್ಚಿನ ಗಮನಹರಿಸಬೇಕು. 'ಸಂಸ್ಕೃತಿಯಲ್ಲಿ ಪರಂಪರೆಯು ಮಹಿಳೆಯನ್ನು ಯಾವಾಗಲೂ ಹಲವು ರೂಪದ ಅನಿಷ್ಟಗಳಾಗಿ ಕಾಡುತ್ತಲೇ ಬಂದಿದೆ.[೩೦] ನಮ್ಮ ದೇಶದಲ್ಲಿ ಮಹಿಳಾ ಸ್ವಾತಂತ್ರ್ಯ ಪರಂಪರೆಯ ಪ್ರಭಾವದಿಂದ ಎಷ್ಟೆಂದು ಮೊಟಕಾಗಿದೆ ಅನ್ನುವುದನ್ನು ಸಮೀಕ್ಷಿಸುವಾಗ ನಾವು ಸಾಮಾನ್ಯವಾಗಿ ಹೇಳುವ ವೇದಕಾಲದಲ್ಲಿ ಮಹಿಳೆಗೆ ಗಂಡಸಿನ ಸಮಾನ ಹಕ್ಕುಬಾಧ್ಯತೆಗಳಿದ್ದವು ಎನ್ನುವುದು. ಇದು ಕಾಲದ ಮುಂದುವರಿಕೆಯಲ್ಲಿ ಆ ಸ್ಥಾನ ಕಳೆದೋಗಿ ಅವಳನ್ನು ಅನುಭೋಗದ ವಸ್ತುವಾಗಿ ಕಾಣಲಾಯಿತು. ಅವಳ ಸ್ವತಂತ್ರ್ಯವನ್ನು ಕಸಿದುಕೊಳ್ಳಲಾಯಿತು ಎನ್ನುವ ಅಂಶ ನಮ್ಮ ಪರಂಪರೆ ಸೂಚಿಸುತ್ತದೆ.

ತಾಯಿತನದ ಬೇನೆಗೆ ಪರಂಪರಾಗತ ಬಂದಿರುವ ಸಂಕಟಕ್ಕೆ ಮುಕ್ತಿ ಯಾವಾಗ ಎನ್ನುವ ಆಶಯವನ್ನು ಭಾರತಿದೇವಿ ಅವರು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿರುವುದು ಈ ರೀತಿಯಾಗಿ,

ಎಲ್ಲರಿಗೂ ಜನ್ಮ ನೀಡಿ ಮಡಿಲಲ್ಲಿ ಸಾಕಿ ಸಲಹಿ ಪೊರೆದ
ತಾಯಿಯ ಒಡಲೆಲ್ಲ ಹುಣ್ಣಾಗಿ ಕೀವು ತುಂಬಿ
ಒಂದೇ ಮಗ್ಗಿಲು ಸಾಕಾಗಿ ಹೊರಳಲು ಯತ್ನಿಸುತ್ತಾಳೆ
ನೆಲಕ್ಕಂಟಿದ ಆಕೆಗೆ ಹೊರಳುವುದೂ ಸುಲಭವಲ್ಲ
ತನ್ನ ಮೈಗಂಟಿದ ಈ ಕಲೆಯನ್ನೆಲ್ಲ ಕಳೆಯುವುದು ಹೇಗೆ?
ದುರ್ಗಂಧ ತೊಳೆಯುವುದು ಹೇಗೆ?
ತುಂಬಿ ಬೋರ್ಗರೆದು ಎಲ್ಲವನ್ನು ಅಮರಿಕೊಳಲೇ
ಬತ್ತಿ ಬೇಯುತ್ತಿರುವ ತಾಯಿ ನೇತ್ರಾವತೀಗೀಗ
ಮುಂಗಾರಿನದೇ ಧ್ಯಾನ[೩೧]

ಹೆಣ್ಣಿನ ತಾಯಿತನದ ಪರಂಪರೆಯನ್ನು ಪ್ರಶ್ನಿಸುತ್ತದೆ ಈ ಕವಿತೆ, ಹೆಣ್ಣು ಜನ್ಮ ನೀಡಿದರೆ ಮಾತ್ರ ಮುಕ್ತಿ ಅವಳು ತಾಯಿಯಾಗದಿದ್ದರೆ ಅಮುಕ್ತಿ, ಬಂಜೆ ಎಂಬ ಪಟ್ಟಕಟ್ಟಲಾಗುತ್ತದೆ. ಇದಕ್ಕೆ ಏಕಮುಖವಾದ ಅಪವಾದಕ್ಕೆ ಗುರಿಯಾಗಬೇಕಾಗುತ್ತದೆ. ತಾಯಿಯಾಗುವುದೆಂದರೆ ಗಂಡು-ಹೆಣ್ಣು, ಎರಡು ಜೀವಗಳು ಸಮಾಗಮವಾಗಿ ಜನ್ಮ ನೀಡುವುದಾಗಿದೆ. ಹೆಣ್ಣು ತಾಯಿಯಾಗವುದಕ್ಕೆ ಗಂಡು ಜೀವದ ಸಹಕಾರ ಮುಖ್ಯವಾದದ್ದು. ಈ ಕಾರ್ಯ ಒಬ್ಬರಿಂದ ಅಸಾಧ್ಯ. ಆದರೆ ಹೆಣ್ಣನ್ನು ಮಾತ್ರ ಬಂಜೆ ಎಂದು ದೂಷಿಸಿ ಅಪಮಾನ ಮಾಡುವ ಮನಸ್ಸಿನ ವಿರುದ್ಧ ಧ್ವನಿ ಎತ್ತಿದಂತಿದೆ. ಹಾಗೇ ಜನ್ಮ ನೀಡುವದು ಹಿಂದಿನ ಸಂಕಟ ನೆನೆದು ಅದಕ್ಕೆ ಮುಕ್ತಿ ಯಾವಾಗ ಎಂದು ಪ್ರಶ್ನಿಸಲಾಗಿದೆ. ಒಂದು ವಿಷಾದದ ಸಂಗತಿಯೆಂದರೆ ಕನ್ನಡ ಮಹಿಳಾ ಕಾವ್ಯದಲ್ಲಿ ಪರಂಪರೆಯಿಂದ ಮಹಿಳೆ ಅನುಭವಿಸಿದ ದೌರ್ಜನ್ಯ ಅವಹೇಳನೆ, ಶೋಷಣೆ ಇತ್ಯಾದಿಗಳ ಬಗ್ಗೆ ನಿಜವಾದ ಕಳಕಳಿ ವ್ಯಕ್ತಗೊಂಡಿರುವುದು ಕಡಿಮೆ. ಇಂದು ಸಮಕಾಲೀನ ಕನ್ನಡ ಕಾವ್ಯದಲ್ಲಿ ಸ್ವಲ್ಪ ಬದಲಾವಣೆ ಕಂಡಿದೆ. ಪರಂಪರೆಯ ವಿರುದ್ಧ ಧ್ವನಿ ಎತ್ತಿದ ಕಾವ್ಯ ಸಮಕಾಲೀನ ಕಾವ್ಯದ್ದಾಗಿದೆ. ಪರಂಪರಾಗತ ಮೌಲ್ಯಗಳಾದ ಪತಿವ್ರತ ಧರ್ಮ, ತ್ಯಾಗ, ನಿಷ್ಠೆ ಸಹನೆ ಇವುಗಳನ್ನು ವೈಭವೀಕರಿಸುವ ಬರಹಗಳು ಒಂದು ರೀತಿಯಲ್ಲಿ ಇವೆ. ಪರಂಪರೆಯಲ್ಲಿ ಹುದುಗಿದ ಮೌಢ್ಯ ಅಂಧ ನಿಷ್ಠೆ ಹಾಗೂ ಪುರುಷನ ಪ್ರಾಬಲ್ಯವನ್ನು ಪ್ರಾಮಾಣಿಕವಾಗಿ ವಿರೋಧಿಸುವ ಪ್ರಯತ್ನ ಇಂದು ಕಾಣಬಹುದಾಗಿದೆ. ಇದಕ್ಕೆ ಕಾರಣ ಪಶ್ಚಿಮದ ಸಾಂಸ್ಕೃತಿಕ, ಶಿಕ್ಷಣ ವಿಚಾರಗಳಿಂದಾಗಿ ನಮ್ಮ ದೇಶದ ಮಹಿಳೆ ಜಾಗೃತಳಾಗಿದ್ದಾಳೆ. ಇಂದಿನ ಮಹಿಳೆ ಸಂಪೂರ್ಣವಾಗಿ ತನ್ನ ಹಕ್ಕುಬಾಧ್ಯತೆಗಳ ಬಗ್ಗೆ ತಿಳುವಳಿಕೆಯಿಂದ ಎಚ್ಚೆತ್ತು ಪ್ರಜ್ಞಾವಂತ ಮಹಿಳೆಯಾಗಿದ್ದಾಳೆ. ಪರಂಪರೆಯ ವಸ್ತುಸ್ಥಿತಿಯನ್ನು ನೋಡಿ ಅದಕ್ಕೆ ಧ್ವನಿ ಕೂಡಿಸುತ್ತಾಳೆ. ವೈವಾಹಿಕ ಜೀವನದಲ್ಲಿ ಹಿಂಸೆ ಎಲ್ಲಾ ವಿಷಯಗಳಲ್ಲಿ ತಮ್ಮ ಸೊಸೆ ಸಂಪೂರ್ಣ ವಿಧೇಯಳಾಗಿರಬೇಕೆಂದು ಅತ್ತೆ-ಮಾವಂದಿರು ಬಯಸುವುದು, ಗಂಡಿನ ಆಯ್ಕೆಯಲ್ಲಿ ಹಿರಿಯರದೇ ಅಂತಿಮ ತೀರ್ಮಾನ, ಹೆಣ್ಣು ಮಕ್ಕಳಿಗೆ ತಂದೆಯ ಆಸ್ತಿಯಲ್ಲಿ ಪಾಲು ಸಿಕ್ಕದೇ ಇರುವುದು, ಗಂಡು ಮಗುವೇ ಹೆಣ್ಣು ಮಗುವಿಗಿಂತ ಶ್ರೇಷ್ಠವಾದುದು ಎಂಬ ನಂಬಿಕೆ, ಮಹಿಳೆಯ ಕಾರ್ಯಕ್ಷೇತ್ರ ಆಕೆ ಉದ್ಯೋಗಸ್ಥೆಯಾಗಿದ್ದರೂ ಸಹ ಹೆಚ್ಚು ವಿಸ್ತಾರಗೊಳ್ಳಬಾರದು ಎಂದು ಗಂಡಂದಿರು, ಮತ್ತು ಎಲ್ಲಾ ಕಡೆ ಅಂದರೆ ರೇಲ್ವೆ ಸ್ಟೇಷನ್, ಬಸ್ಸು ನಿಲ್ದಾಣ, ಮಾರ್ಕೆಟ್ಟು, ಆಫೀಸು, ಸಿನಿಮಾ ಟಾಕೀಸು, ಸಭೆ-ಸಮಾರಂಭಗಳಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಕ್ರಮಗಳು ಹೀಗೆ ಎಲ್ಲಾ ಸಂದರ್ಭದಲ್ಲಿ ಮಹಿಳೆಗೆ ಮೀಸಲಾಗಿರುವ ಸ್ಥಾನ ದ್ವಿತೀಯ ಸ್ಥಾನವೇ ಆಗಿರುವುದು. ಇವೆಲ್ಲಾ ಪರಂಪರೆಯು ವಿವಿಧ ಅನಿಷ್ಟಗಳ ರೂಪದಲ್ಲಿ ಮಹಿಳೆಯನ್ನು ಇಂದಿಗೂ ಕಾಡುತ್ತಲೇ ಇರುವುದನ್ನು ಕಾವ್ಯ ತೋರಿಸುತ್ತಿದೆ. ವರದಕ್ಷಿಣೆ, ಸತಿಪದ್ಧತಿ ಇತ್ಯಾದಿ ಪರಂಪರೆಯ ಅನಿಷ್ಟಗಳ ಹಾಗೂ ಹುಟ್ಟುವ ಮಗು ಹೆಣ್ಣಾಗಿದ್ದರೆ, ಮೊದಲೇ ಗರ್ಭಪಾತ ಮಾಡಿಸುವ ಅಮಾನವೀಯ ಪದ್ಧತಿಗಳನ್ನು ಕಾನೂನಾತ್ಮಕವಾಗಿ ಖಂಡಿಸಲಾಗಿದ್ದರೂ ಅದು ಆಚರಣೆಯಲ್ಲಿ ಇನ್ನು ಜೀವಂತವಾಗಿದೆ. ಸಾಮಾಜಿಕ ಸಮಸ್ಯೆಯಾಗಿ ಇನ್ನು ಇರುವುದನ್ನು ಕಾವ್ಯ ಒತ್ತಿ ಹೇಳುತ್ತದೆ. ಹಾಗೂ ಅದರ ವಿರುದ್ಧ ಪ್ರತಿಭಟನೆ ನಡೆಸುತ್ತದೆ. ವಿಚ್ಛೇದನ,

ಜೀವನಾಂಶ ಆಸ್ತಿಯ ಹಕ್ಕುಬಾಧ್ಯತೆ ವಿವಾಹ ಈ ಮೊದಲಾದ ಮೂಲಭೂತ ಮಹತ್ವದ ವಿಷಯಗಳಲ್ಲಿ ದೇಶದಲ್ಲಿನ ಎಲ್ಲಾ ಧರ್ಮದ ಎಲ್ಲಾ ವರ್ಗದ ಮಹಿಳೆಯರಲ್ಲಿ ಸಮಾನಹಕ್ಕು ಸುಲಭ ಸೌಲಭ್ಯ ಸಿಗುವ ಏಕರೂಪ ಕಾಯ್ದೆ ಬರಬೇಕೆಂದು ಮಹಿಳಾಕಾವ್ಯ ಅಲ್ಲಿ ವ್ಯಕ್ತಿಸುತ್ತಿದೆ. ಇವೆಲ್ಲವನ್ನು ಪರಂಪರಾಗತವಾಗಿ ಮೂಲಭೂತ ಮನಸ್ಸುಗಳ ಮಹಿಳೆಯನ್ನು ಇವೆಲ್ಲವುಗಳಿಂದ ದೂರ ಇಟ್ಟುಕೊಂಡು ಬಂದಿರುವುದು ಕಾಣುತ್ತೇವೆ. ಆರ್ಥಿಕ ಸ್ವಾತಂತ್ರ್ಯ, ಸಮಾನ ಉದ್ಯೋಗ, ಸ್ಥಾನಮಾನ ಹೆಚ್ಚಿಸುವಲ್ಲಿ ಆಧುನಿಕ ಮನಸ್ಥಿತಿಯನ್ನು ಹೊಂದಬೇಕು ಪರಂಪರೆಯ ನೆರಳನ್ನು ನಾಶಮಾಡಿ ಹೊಸ ಬದುಕನ್ನು ಕಟ್ಟಬೇಕು ಎನ್ನುವ ಚಿಂತನೆಯು ಮಹಿಳಾ ಕಾವ್ಯದಲ್ಲಿವೆ. ನಮ್ಮ ದೇಶದ ಅನೇಕ ಭಾಗಗಳಲ್ಲಿ ಸಾಮಾಜಿಕ ಅನಿಷ್ಟ ರೂಢಿಯಲ್ಲಿವೆ. ಒಂದೆಡೆ ದೇವದಾಸಿ ಪದ್ಧತಿ ಇನ್ನೊಂದೆಡೆ ಬೆತ್ತಲೆಸೇವೆ ಪದ್ಧತಿ, ಮತ್ತೊಂದೆಡೆ ಸತಿಪದ್ಧತಿ ಇತ್ಯಾದಿ ಈ ಅನಿಷ್ಟಗಳನ್ನು ಕಂಡುಹಿಡಿದು ಅವುಗಳಿಂದ ಮಹಿಳೆರಿಗೆ ಆಗುವ ಅನ್ಯಾಯವನ್ನು ನಿವಾರಿಸಬೇಕು. ಪರಂಪರೆ ಮೌಲ್ಯದ ಹೆಸರಲ್ಲಿ ಅವು ಅನಿಷ್ಟಗಳನ್ನೆಲ್ಲಾ ಜೀವಂತವಾಗಿಸಲು ಪ್ರಯತ್ನಿಸುತ್ತಿವೆ. ಅಂತ ಪ್ರಯತ್ನಕ್ಕೆ ವಿರುದ್ಧ ಪ್ರತಿಭಟನೆ ನಡೆಸಿ ಸಮಾನತೆಗಾಗಿ ಹೋರಾಟ ಮಾಡಬೇಕು ಎನ್ನುವುದು ಸಮಕಾಲೀನ ಮಹಿಳಾ ಕಾವ್ಯದ ಆಶಯವಾಗಿದೆ. ಪರಂಪರಾಗತವಾಗಿ ಬಂದಿರುವ ಮಹಿಳೆ ತನ್ನ ಮೈಗಂಟಿದ ಕಲೆಯನ್ನು ತೆಗೆದುಹಾಕಲು, ಒಡಲಲ್ಲಿ ಕೀವು ತುಂಬಿರುವುದನ್ನು ಕಿತ್ತು ಹಾಕಲು, ಮಗ್ಗಲು ಬದಲಿಸಲು ದುರ್ಗಂಧವ ತೊಳೆಯಲು ಹರಸಾಹಸ ಪಡುತ್ತಿರುವುದನ್ನು ಮಹಿಳಾ ಕಾವ್ಯ ಚಿತ್ರಿಸುತ್ತದೆ. ಈ ಎಲ್ಲಾ ಅನಿಷ್ಟಗಳಿಂದ ಹೊರ ಬಂದು ಸಮಾನತೆಯ ಹೂ ವೊಂದನ್ನು ಅರಳಿಸಬೇಕು ಅಂತ ಹೂವನ್ನು ಮುಡಿಯಬೇಕು ಎಂದು ಆಶಿಸಿದಂತಿದೆ.

ಇತ್ತೀಚಿನ ಕನ್ನಡ ಕಾವ್ಯದಲ್ಲಿ ಮಹಿಳಾಕಾವ್ಯ ವಿಶೇಷತೆಯಿಂದ ಕೂಡಿದೆ. ಪರಂಪರೆಯನ್ನು ಮುರಿದು ಹೊಸ ರೀತಿಯಲ್ಲಿ ನುಡಿಗಟ್ಟುಗಳನ್ನು, ರೂಪಕಗಳನ್ನು, ಭಾಷಾಶೈಲಿಯನ್ನು ಬಳಸಿ ಕಾವ್ಯ ರಚಿಸುತ್ತಿರುವುದು ಕಂಡುಬಂದಿದೆ. ಮಹಿಳೆಗೆ ಸಿಗುವ ಸಮಾನತೆಯನ್ನು ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ರೂಪಿಸುವ ಚಿಂತನೆ ಹೊಸ ಚಿಂತನೆಯಿಂದ ಕೂಡಿದೆ. ಚರಿತ್ರೆ, ಪುರಾಣದ ಅಂಶಗಳನ್ನು ಮರು ಪ್ರಶ್ನಿಸಿ ಹೊಸ ಬಗೆಯಲ್ಲಿ ಚಿಂತಿಸುವಂತೆ ಮಾಡಿರುವುದು ವಿಶೇಷವಾಗಿದೆ. ಮೌಲ್ಯಗಳ ಹೆಸರಲ್ಲಿ ಹೇರಲಾಗಿರುವ ಮೌಢ್ಯಗಳನ್ನು ಧಿಕ್ಕರಿಸಿ ಜೀವಪರ ಚಿಂತನೆಯನ್ನು ಮಮಕಾರ, ತಾಯಿ ಕರುಣೆಯ ಕರುಣೆಯನ್ನು ಸ್ಪರ್ಶಿಸಿ ಹೊಸ ಬಗೆಯ ಆಲೋಚನೆಯನ್ನು ಬಿತ್ತುತ್ತಿದೆ. ಕೌಟುಂಬಿಕ ಸಮನ್ವಯತೆಯನ್ನು, ಆರ್ಥಿಕತೆಯನ್ನು, ಸಾಮಾಜಿಕ ವ್ಯವಸ್ಥೆಯನ್ನು ಸಹ ವಿಶೇಷವಾಗಿ ರೂಪಿಸಿದೆ. ಇಲ್ಲಿಯವರೆಗೆ ಇದ್ದ 'ಭಾಷೆ ಮತ್ತು ರೂಪಕ' ಅದು ಪುರುಷ ಸೃಷ್ಟಿಸಿದ ಭಾಷೆ. ಹೀಗಾಗಿ ನಾವು ಸಮರ್ಥವಾಗಿ ಆ ಭಾಷೆಯಲ್ಲಿ ನಮ್ಮ ಸಂಕಟ ಹೇಳಲು ಅಸಾಧ್ಯವಾಗಿದೆ. ಹಾಗಾಗಿ ನಮ್ಮದೇ ಆದ ಹೊಸ ಭಾಷೆ ಬರೆಯಲು ಮುಂದಾಗುತ್ತೇವೆ. ಆವಾಗ ನಮ್ಮ ಕೂಗು ನಿಮಗೆ ತಾಟುತ್ತದೆ ಎಂದು ಮಹಿಳಾಕಾವ್ಯ ಹೇಳುತ್ತಿದೆ. ಆಧುನಿಕತೆ ಮತ್ತು ಪರಂಪರೆಗೆ ಹೊಸ ವ್ಯಾಖ್ಯಾನಗಳನ್ನು ನೀಡಿ ಅವುಗಳನ್ನು ವಿಸ್ತರಿಸುವ, ವಿವೇಚಿಸುವ ಬಗೆಯನ್ನು ಸಹ ವ್ಯಕ್ತಪಡಿಸಿರುವುದು ವಿಶೇಷವಾಗಿ ಮೂಡಿಬಂದಿದೆ. ಮಹಿಳಾಕಾವ್ಯ ಹೊಸ

ಹೊಸ ರೂಪಕಗಳನ್ನು ಸೃಷ್ಟಿಸಿ ಕೇವಲ ಮಹಿಳೆ ಕುರಿತು ಮಾತನಾಡದೇ ಇಡೀ ಪ್ರಪಂಚದ ಸಂಕಟದ ಕುರಿತಾಗಿಯೂ ಧ್ವನಿ ಎತ್ತಿರುವುದು ಇವತ್ತಿನ ಮಹಿಳಾಕಾವ್ಯದಲ್ಲಿ ವ್ಯಕ್ತವಾಗಿದೆ. ಇದೇ ಮಹಿಳಾಕಾವ್ಯದ ಇಂದಿನ ಅನನ್ಯತೆ.

**ಕೊನೆ ಟಿಪ್ಪಣಿಗಳು**

೧. ಪಿ. ಚಂದ್ರಿಕಾ, **ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ,** ಪುಟ ೧೪.

೨. ಗೀತಾ ವಸಂತ, **ಪರಿಮಳದ ಬೀಜ,** ಪುಟ ೪.

೩. ದು. ಸರಸ್ವತಿ, **ಜೀವ ಸಂಪಿಗೆ,** ಪುಟ ೧.

೪. ಎಂ.ಎಸ್. ಆಶಾದೇವಿ, **ಬೆಳಕಿಗಿಂತ ಬೆಳ್ಳಗೆ,** ಪುಟ ೬೭.

೫. ಕವಿತಾ ರೈ., **ನೀರು ಮಾಡು,** ಪುಟ ೧೩.

೬. ಎಂ.ಎಸ್. ಆಶಾದೇವಿ, **ಬೆಳಕಿಗಿಂತ ಬೆಳ್ಳಗೆ,** ಪುಟ ೧೪.

೭. ವಿಭಾ, **ಜೀವ ಮಿಡಿತದ ಸದ್ದು,** ಪುಟ ೩೩.

೮. ಎಂ.ಎಸ್. ಆಶಾದೇವಿ., **ಬೆಳಕಿಗಿಂತ ಬೆಳ್ಳಗೆ,** ಪುಟ ೬೭.

೯. ರೂಪಾ ಕಲ್ಲಿಗನೂರು, **ಚಿತ್ತ ಭಿತ್ತಿ,** ಪುಟ ೮೧.

೧೦. ಅನುಪಮಾ ಎಚ್.ಎಸ್., **ಸಹಗಮನ,** ಪುಟ ೨೩.

೧೧. ರೂಪಾ ಹಾಸನ, **ಕಡಲಿಗೆಷ್ಟೊಂದು ಬಾಗಿಲು,** ಪುಟ ೫೫.

೧೨. ಸರಸ್ವತಿ ದು., **ಜೀವ ಸಂಪಿಗೆ,** ಪುಟ ೨೧.

೧೩. ಹಾಲತಿ ಸೋಮಶೇಖರ, **ಮಹಿಳೆ ಒಂದು ಚಿಂತನೆ,** ಪುಟ ೨೮.

೧೪. ಗೀತಾ ವಸಂತ, **ಪರಿಮಳದ ಬೀಜ,** ಪುಟ ೪.

೧೫. ಕವಿತಾ ರೈ., **ನೀರು ಮಾಡು,** ಪುಟ ೧೩.

೧೬. ಎಂ.ಎಸ್. ಆಶಾದೇವಿ, **ಬೆಳಕಿಗಿಂತ ಬೆಳ್ಳಗೆ,** ಪುಟ ೮೦.

೧೭. ಎಚ್.ಎಲ್. ಪುಷ್ಪ, **ಲೋಹದ ಕಣ್ಣು,** ಪುಟ ೪೧.

೧೮. ರೂಪಾ ಹಾಸನ, **ಕಡಲಿಗೆಷ್ಟೊಂದು ಬಾಗಿಲು,** ಪುಟ ೬೯.

೧೯. ವಿಭಾ, **ಜೀವ ಮಿಡಿತದ ಸದ್ದು,** ಪುಟ ೩೦.

೨೦. ಅದೇ, ಪುಟ ೧೬.

೨೧. ಜ.ನಾ. ತೇಜಶ್ರೀ, **ಉಸ್ತು ಬಂಡೆ,** ಪುಟ ೧೯.

೨೨. ಎಚ್.ಎಲ್. ಪುಷ್ಪ, **ಸ್ತ್ರೀ ಎಂದರೆ ಅಷ್ಟೇ ಸಾಕೆ,** ಪುಟ ೫೦.

೨೩. ಎಂ.ಎಸ್. ಆಶಾದೇವಿ, **ಬೆಳಕಿಗಿಂತ ಬೆಳ್ಳಗೆ,** ಪುಟ ೧೨೦.

೨೪. ವಿನಯ, ನೂರು ಗೋರಿಯ ದೀಪ, ಪುಟ ೩೪.

೨೫. ಆರ್ಯಂಬ ಪಟ್ಟಾಭಿ, ಮಹಿಳಾ ಸಾಹಿತ್ಯ ಸಮೀಕ್ಷೆ, ಪುಟ ೧೨೬.

೨೬. ಕಾವ್ಯಾ ಕಡಮೆ, ಧ್ಯಾನಕೆ ತಾರೀಖಿನ ಹಂಗಿಲ್ಲ, ಪುಟ ೪೬

೨೭. ಸುಧಾ ಚಿದಾನಂದಗೌಡ, ಬಯಲು ಧ್ಯಾನ, ಪುಟ ೪.

೨೮. ಜ.ನಾ. ತೇಜಶ್ರೀ, ಉಸ್ರು ಬಂಡೆ, ಪುಟ ೪೬.

೨೯. ವೀಣಾ ಶಾಂತೇಶ್ವರ, ಇಲ್ಲಿಂದ ಮುಂದೆಲ್ಲಿಗೆ?, ಪುಟ ೧೮.

೩೦. ಭಾರತಿದೇವಿ, ಅವಳಿಗೆ ನಗಲು ಅನುಮತಿಯಿಲ್ಲ, ಪುಟ ೨೬.



ಅಧ್ಯಾಯ : ಏಳು

# ಇತ್ತೀಚಿನ ಕನ್ನಡ ಕಾವ್ಯ : ವೈಚಾರಿಕ ನೆಲೆ

೭.೧. ಮತ, ಧರ್ಮ
೭.೨. ವಿಶ್ವಮಾನವ ಪ್ರಜ್ಞೆ
೭.೩. ಮಾನವೀಯ ಮೌಲ್ಯಗಳು
೭.೪. ಜೀವಪರ ಆದರ್ಶದ ನೆಲೆಗಳು

ಅಧ್ಯಾಯ : ಏಳು

# ಇತ್ತೀಚಿನ ಕನ್ನಡ ಕಾವ್ಯ : ವೈಚಾರಿಕ ನೆಲೆ

ಮನುಷ್ಯನು ವಿಚಾರ ಮಾಡುವ ಪ್ರಾಣಿ ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳಲು ಬಯಸುತ್ತಾನೆ. ಯಾವುದೇ ವಿಚಾರ ಮತ್ತು ಸಂಗತಿಯನ್ನು ಯಥಾವತ್ತಾಗಿ ಒಪ್ಪದೆ ಪ್ರಶ್ನಿಸುವ, ಸಂದೇಹ ವ್ಯಕ್ತಪಡಿಸುವ ಗುಣ ಮನುಷ್ಯರಿಗೆ ಇದೆ. ಮನುಷ್ಯನ ಮುಖ್ಯ ಲಕ್ಷಣ ವಿಚಾರ ಮಾಡುವುದು ಎಂದು ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದಾನೆ. ಮನುಷ್ಯ ವಿಚಾರ ಮಾಡುವ ಪ್ರಾಣಿ ಎಂದು ಹೇಳಬಹುದಾದರೂ ಅವಶ್ಯವಾಗಿ ಸರಿಯಾಗಿ ಅಂದರೆ ತರ್ಕಬದ್ಧವಾಗಿ ವಿಚಾರ ಮಾಡುವ ಪ್ರಾಣಿ ಎನ್ನುವ ಹಾಗಿಲ್ಲ. ಆದರೆ ಮನಸ್ಸು ಮಾಡಿದರೆ ಅಥವಾ ಪ್ರಯತ್ನಿಸಿದರೆ ತರ್ಕಬದ್ಧವಾಗಿ ವಿಚಾರ ಮಾಡಬಲ್ಲ ಎಂದು ಹೇಳಿದ್ದಾರೆ. ಇಂಥ ವೈಚಾರಿಕತೆಯನ್ನು ಸಾರುವ ಹಾಗೂ ಚಿಂತನೆಯನ್ನು ಒಳಗೊಂಡಿರುವ ಅಂಶಗಳು ಸಮಕಾಲೀನ ಕಾವ್ಯದಲ್ಲಿ ಕಾಣಬಹುದು. ಕಣ್ಣಿಗೆ ಮತ್ತು ಅನುಭವಕ್ಕೆ ದಕ್ಕಿದ್ದನ್ನು ಯಥಾವತ್ತಾಗಿ ಒಪ್ಪಿಸುವುದು ಮತ್ತು ಒಪ್ಪುವ ಕೆಲಸ ಮಾಡದೆ ಪ್ರಶ್ನಿಸಿ ಸಂದೇಹ ವ್ಯಕ್ತಪಡಿಸಿ ತನ್ನತನದ ತೀರ್ಮಾನವನ್ನು ವೈಜ್ಞಾನಿಕ ನೆಲೆಯಲ್ಲಿ ಅಭಿವ್ಯಕ್ತಿಸಿರುವುದು ಕಂಡುಬರುತ್ತಿದೆ. ಅನೇಕ ಸಾಮಾಜಿಕ ಸಮಸ್ಯೆಗಳಿಗೆ ರಾಷ್ಟ್ರೀಯತೆಗೆ, ಜಾಗತೀಕರಣಕ್ಕೆ, ಭಾವನಾತ್ಮಕ ಅಂಶಗಳಿಗೆ, ಧಾರ್ಮಿಕ ಸಂಪ್ರದಾಯಗಳಿಗೆ ತರ್ಕಬದ್ಧವಾಗಿ ಚಿಂತನೆಯನ್ನು ನಡೆಸುತ್ತಿರುವುದು ಕಾಣುತ್ತೇವೆ. ಇದು ಪ್ರಸ್ತುತ ದಿನಮಾನದಲ್ಲಿ ಮಾನವ ತನ್ನ ತಿಳುವಳಿಕೆ ಮತ್ತು ತೀರ್ಮಾನವನ್ನು ವೈಚಾರಿಕ ನೆಲೆಗಟ್ಟಿನಲ್ಲಿ ಮಾಡುತ್ತಿದ್ದಾನೆ ಎಂದು ತೋರಿಸುತ್ತದೆ. ಇಷ್ಟಿದ್ದರೂ ಸಂಪ್ರದಾಯಸ್ಥ ಮನಸ್ಸುಗಳ ಕುರಿತು ಕಾವ್ಯ ಬೇಸರ ಮತ್ತು ನಿರಾಸೆಯನ್ನು ತಾಳಿದೆ.

ಯಾವುದೇ ಓದುಗನಲ್ಲಿ ಪ್ರತಿಕ್ರಿಯೆಯನ್ನುಂಟು ಮಾಡುವುದೋ, ಚಿಂತನೆಗಳಿಗೆ ಪ್ರೇರಣೆ ನೀಡುವುದೋ ಚರ್ಚೆಗೆ ವಸ್ತುವಾಗುವುದೋ, ಯಾವುದು ನಮ್ಮ ತಿಳುವಳಿಕೆಗೆ ಹೊಸದೊಂದು ಆಯಾಮ ನೀಡಿ ಹೊಸ ಹೊಸ ಕ್ಷಿತಿಜಗಳನ್ನು ತೆರೆದು ತೋರಿಸುವುದೋ ಅದೇ ವೈಚಾರಿಕತೆ. ಇಂಥ ವೈಚಾರಿಕತೆ ಅಂಶ ಸಮಕಾಲೀನ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ. ಧರ್ಮ, ಜಾತಿ

ಮತ್ತು ದೇಶ, ನೆಲೆ, ದೇವರು, ಆಧ್ಯಾತ್ಮ, ನಾಡು-ನುಡಿಯ ಕುರಿತಂತೆ, ಲಿಂಗದ ಕುರಿತಂತೆ ವೈಚಾರಿಕ ಪ್ರಜ್ಞೆಯನ್ನು ಕಾವ್ಯ ಮೂಡಿಸುತ್ತಿದೆ. ಹಾಗೇ ಸರ್ವೋದಯ ಸಮನ್ವಯದ ಆದರ್ಶಗಳನ್ನು ಸಹ ಒಳಗೊಂಡಿದೆ.

## ೭.೧. ಮತ, ಧರ್ಮ

ಆಧುನಿಕ ಸಂದರ್ಭದಲ್ಲಿ ಎಷ್ಟೇ ಬದಲಾವಣೆಗಳಾದರೂ ಕೆಲವು ವಿಷಯಗಳಲ್ಲಿ ಸಂಪ್ರದಾಯಸ್ಥ ನಿಯಮಗಳು ಬದಲಾಗದೆ ಗಟ್ಟಿಯಾಗಿ ನೆಲೆನಿಂತಿವೆ. ಕೆಲವೊಂದು ಮೂರ್ತ ಮತ್ತು ಅಮೂರ್ತ ವಿಚಾರಗಳಲ್ಲಿ, ಸಂಪ್ರದಾಯಗಳಲ್ಲಿ ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡಿವೆ. ಸಾಮಾಜಿಕ ಜೀವನದಲ್ಲಿ ಕೆಲವು ಬದಲಾವಣೆ ಕಂಡಿವೆ. ಬದುಕಿನ ಬಗೆ, ದಿನನಿತ್ಯದ ಕೆಲಸಗಳಲ್ಲಿ, ಮಾತಿನಲ್ಲಿ, ಜೀವನ ಕ್ರಮದಲ್ಲಿ ಹಲವು ಕ್ಷೇತ್ರದಲ್ಲಿ ಬದಲಾವಣೆಯಾಗಿದೆ. ಆದರೆ ಧರ್ಮ, ಜಾತಿ, ಮತಗಳ ವಿಷಯಕ್ಕೆ ಮೇಲ್ನೋಟಕ್ಕೆ ಆಧುನಿಕವಾಗಿ ಬದಲಾದಂತೆ ಕಂಡರೂ ಒಳನೋಟದಲ್ಲಿ ಅದು ತನ್ನ ಮೂಲ ಸ್ವರೂಪವನ್ನು ಕಾಯ್ದುಕೊಂಡಿದೆ. ಕೆಲವೊಂದು ವಿಚಾರದಲ್ಲಿ ಧಾರ್ಮಿಕ ಸಂಪ್ರದಾಯಗಳು ಸ್ವರೂಪದ ದಲಿತ ಮಾತ್ರ ಬದಲಾದರೂ ಆಶಯ ನೆಲೆಯಲ್ಲಿ ಅದೇ ರೀತಿಯಾಗಿದೆ. ವಸಾಹತೋತ್ತರ ಸಂದರ್ಭದಲ್ಲಿ ವೈಚಾರಿಕ ಪ್ರಜ್ಞೆಯಿಂದ ಕೆಲವು ಸಂಪ್ರದಾಯಗಳಿಗೆ ತಿಲಾಂಜಲಿ ಇಡಲಾಗಿದೆ. ಸಾಮಾಜಿಕ ಸಮಾನತೆ ಸಿಕ್ಕರೂ ಧಾರ್ಮಿಕ ಅಸಮಾನತೆ ಇನ್ನೂ ಇದೆ. ಸಾಮಾನ್ಯವಾಗಿ ಮನುಷ್ಯರು ವಿಚಾರ ಮಾಡುವುದಕ್ಕಿಂತಲೂ ನಂಬುವುದೇ ಹೆಚ್ಚು ನಂಬಿ ಬದುಕುವುದೇ ಹೆಚ್ಚು. ಅವರ ಜೀವನದಲ್ಲಿ ವಿಚಾರಗಳಿಗಿಂತಲೂ ನಂಬಿಕೆಗಳಲ್ಲಿ ಹೆಚ್ಚು ಮಹತ್ವದ ಪಾತ್ರವಹಿಸುತ್ತವೆ. ಜೀವನದುದ್ದಕ್ಕೂ ನಾವು ನಂಬಿಕೆಗಳ ಹಿನ್ನೆಲೆಯಿಂದಲೇ ಹೆಚ್ಚು ಕಾರ್ಯೋನ್ಮುಖರಾಗುವುದು. ಜನರು ದೇವರಲ್ಲಿ ಇಟ್ಟಿರುವ ನಂಬಿಕೆ ಇದಕ್ಕೆ ಒಳ್ಳೆಯ ಉದಾಹರಣೆ ಯಾಗಿದೆ. ಧರ್ಮ, ಜಾತಿ, ಮತದ ವಿಚಾರವೂ ಅಷ್ಟೇ. ಈ ಹಿಂದೇ ಪಂಪ ಸಾರಿದ ಮತ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಆಶಯವಾಗಿಯೇ ಉಳಿಯುವುದಕ್ಕೆ ವಿಚಾರದ ಮಾಡದೆ ಇರುವ ಮನಸ್ಸುಗಳಿರುವುದರಿಂದ ಮನಸ್ಸುಗಳು ನಂಬಿಕೊಂಡ ಪೋಷಿಸುತ್ತಾ ಬಂದಿರುವ ನಂಬಿಕೆಗಳಿಂದ ದೇವರಂಥ ಜೀವನದ ಮಹತ್ವದ ವಿಷಯದಲ್ಲಿ ವೈಚಾರಿಕತೆಯನ್ನು ರೂಢಿಸಿ ಕೊಂಡವರು ವಿರಳ. ಧರ್ಮ, ಜಾತಿ, ಧರ್ಮ, ಮತವನ್ನು ಮೀರಿ ಮನುಷ್ಯವಾಗಿ ಬದುಕುವುದು ಹೇಗೆ ಎಂದು ಹೇಳುತ್ತದೆ. ಈ ಕುವೆಂಪು ಹೇಳಿದ ಮಾತು ಗುಡಿ ಚರ್ಚ್ ಮಸೀದಿ ಬಿಟ್ಟು ಹೊರ ಬನ್ನಿ ಎಂದಿರುವುದು ಈ ಕಾರಣಕ್ಕಾಗಿಯೇ. ವೈಚಾರಿಕ ಬೆಳಕಲ್ಲಿ ವಿಜ್ಞಾನದ ಜ್ಯೋತಿಯನ್ನು ಬೆಳಗಿಸೋಣ ಅಂಶಗಳು ಇವೆ. ಯಾವುದು ಮನುಷ್ಯ ಕಾಳಜಿ, ಮನುಷ್ಯ ಪ್ರೀತಿ ಇಲ್ಲವೋ ಅದು ಧರ್ಮವೇ ಅಲ್ಲ ಎಂದ ನಿಲುವು ವೈಚಾರಿಕ ಚಿಂತನೆಯಿಂದ ಮಾತ್ರ ಸಾಧ್ಯ. ಆದರೆ ಆಧುನಿಕ ಯುಗದ ಸಂದರ್ಭದಲ್ಲಿ ನಂಬಿಕೆಯ ಸ್ತರದಿಂದ ವೈಚಾರಿಕತೆಯ ಸ್ತರದ ಕಡೆಗೆ ಸಾಗುವುದು. ಹೆಚ್ಚು ಸಮಾಜವಾಗುತ್ತದೆ. ಕಾರಣ ನಂಬಿಕೆಗಳು ಸತ್ಯವಾಗಿಲ್ಲದೇ ಇರಬಹುದು. ವಿಚಾರಗಳೂ ಸತ್ಯವಾಗಿಲ್ಲದೇ ಇರಬಹುದು. ಆದರೆ ಅವನ್ನು ತಾರ್ಕಿಕವಾಗಿ ಪರೀಕ್ಷಿಸಿ ಅವುಗಳ

ಸತ್ಯಾಸತ್ಯತೆಯನ್ನು ಕಂಡುಕೊಳ್ಳಬಹುದು. ಇದು ಮುಕ್ತ ವೈಚಾರಿಕತೆಯಿಂದ ಮಾತ್ರ ಸಾಧ್ಯವಾಗುವ ಸಂಗತಿ.

ವಸಾಹತೋತ್ತರ ಚಿಂತನೆಯಿಂದ, ಪಾಶ್ಚಾತ್ಯ ಜ್ಞಾನದ ಪ್ರೇರಣೆಯಿಂದ ದೇಶದ ನಾನಾ ಮೂಲೆಗಳಿಂದ ಜೀವಪರ ಚಿಂತನೆಯ ಫಲದಿಂದ ಇಂದು ಸಮಕಾಲೀನ ಕಾವ್ಯ ವೈಚಾರಿಕತೆಯತ್ತ ಮುಖ ಮಾಡಿದೆ. ಅಂಥ ವೈಚಾರಿಕ ಆಶಯಗಳನ್ನು, ನಿಲುವುಗಳನ್ನು ತನ್ನ ಕಾವ್ಯ ಅಭಿವ್ಯಕ್ತಿಸುತ್ತಿದೆ. ಧರ್ಮ, ಜಾತಿ, ಮತಗಳಿಗೆ ಸಂಬಂಧಿಸಿದ ಹೊಸ ಅರ್ಥ ಬರೆಯಲು ಮುಂದಾಗಿದೆ. ಮನುಷ್ಯ ತನ್ನ ಅಸ್ಮಿತೆಯಲ್ಲಿ ವಿಶ್ವಮಾನವತೆಯನ್ನು ಹೊಂದುವುದು ಹೇಗೆ ಎಂದು ಸಮಕಾಲೀನ ಕಾವ್ಯ ಸಾರುತ್ತಿದೆ. ಸಮಾಜವನ್ನು ಹೊಸ ಮತಧರ್ಮಗಳು ಹೋಳು ಹೋಳಾಗಿ ಒಡೆದಿರುವುದಲ್ಲದೆ, ಅನೇಕ ಬಗೆಯ ಮೂಢನಂಬಿಕೆಗಳನ್ನು ಅಂಧಶ್ರದ್ಧೆಯ ಆಚರಣೆಗಳನ್ನು ಜನಮನದಲ್ಲಿ ಬಿತ್ತಿ ಬೆಳೆದಿರುವುದನ್ನು ಬಗೆ ಬಗೆಯಾಗಿ ಕಾವ್ಯ ಅಭಿವ್ಯಕ್ತಿಸುತ್ತದೆ. ಅವುಗಳಿಂದ ಪಾರಾಗಿ ವಿಶ್ವಮಾನವ ಧರ್ಮವನ್ನು ರೂಪಿಸಿಕೊಳ್ಳುವುದರ ಕಡೆಗೆ ಅವರ ವೈಚಾರಿಕ ದೃಷ್ಟಿ ವಿಕಾಸಗೊಳ್ಳುತ್ತಾ ಬಂದಿರುವುದನ್ನು ಕಾವ್ಯದಲ್ಲಿ ಗುರುತಿಸಬಹುದಾಗಿದೆ. ಜಾತಿ ಧರ್ಮಗಳ ನಡುವೆ ನಡೆಯುವ ಕಲಹದಿಂದ ಯಾವ ರೀತಿಯಾದ ಹಿಂಸಾತ್ಮಕ ಕೃತ್ಯಗಳು ನಡೆಯುತ್ತಿವೆ. ಆ ಗಾಯಗಳಿಗೆ ವೈಚಾರಿಕತೆಯ ಮುಲಾಮ ಹಚ್ಚಲು ಕಾವ್ಯ ಮುಂದಾದ ಬಗೆ ಕವಿ ಆರೀಫ್‌ರಾಜರಲ್ಲಿ ಈ ರೀತಿ ವ್ಯಕ್ತಗೊಂಡಿದೆ.

ನನ್ನ ದೇಶ ಒಂದು ಸ್ಮಶಾನವಾಗಿದೆ ಬುದ್ಧ
ಅರೆಸುಟ್ಟ ಹೆಣಗಳಾಗಿ ಮನೆಗಳು ಹೊಗೆಯಾಡುತಿವೆ
ಗಾಯಗೊಂಡ ರಸ್ತೆಗಳಲ್ಲಿ ಚೆಲ್ಲದ ಬೂದಿಯ ಮೇಲೆ
ನಡೆದಾಡುವವರನು ತಡೆದು ನಿಲ್ಲಿಸಿ
ಒಂದು ಪ್ರಶ್ನೆ ಕೇಳಲಾಗುತ್ತಿದೆ
ನಿನ್ನ ಹೆಸರೇನು ನಿನ್ನ ಹೆಸರೇನೆಂದು[9]

ಕವಿ ಇಲ್ಲಿ ತನ್ನ ದೇಶದಲ್ಲಿ ಮತ, ಜಾತಿ, ಧರ್ಮಗಳು ಆಂತರಿಕ ಜಗಳಗಳಿಗೆ ಈ ನೆಲ ಸ್ಮಶಾನವಾಗಿದೆ. ಪ್ರೀತಿ, ಪ್ರೇಮ ಮನುಷ್ಯತ್ವ ಮರೆತು ಧರ್ಮಾಂಧರಾಗಿ ಕೋಮುವಾದ ಮತ್ತು ಮೂಲಭೂತವಾದ ಅತಿಯಾಗಿ ರಸ್ತೆಯಲ್ಲಿ ರಕ್ತಪಾತವಾಗುತ್ತಿದೆ ಎಂದು ಕವಿ ಬುದ್ಧನಲ್ಲಿ ತನ್ನ ಸಂಕಟವನ್ನು ಮಾಡಿಕೊಳ್ಳುತ್ತಿರುವುದು ಕಾಣುತ್ತೇವೆ. ಬುದ್ಧಿ ಎಲ್ಲಾ ಶಾಂತಿಯ ಸೂಚಕವಾಗಿ ನಿಂತಿದ್ದಾನೆ. ಮನುಷ್ಯನಲ್ಲಿ ಈ ಧರ್ಮ ಜಾತಿಯ ಭಾವನೆ ದೂರ ಮಾಡಿ ಮನುಷ್ಯ ಪ್ರೀತಿಯ ಬಿತ್ತು ಬಾ, ವೈಚಾರಿಕ ಬೆಳಕು ಹರಿಸು ಬಾ ಎಂದು ಕವಿ ಕರೆದಂತಿದೆ. 'ಬೆಂಕಿಗೆ ತೊಡಿಸಿದ ಬಟ್ಟೆ' ಕವನ ಸಂಕಲನದಲ್ಲಿ ಧರ್ಮ ಧರ್ಮ, ಜಾತಿ ಜಾತಿಗಳ ಜಗಳಗಳಿಗೆ ಯಾವ ಮುಲಾಮ ಅರಿಯಲಿ, ಮನುಷ್ಯತ್ವ ಮುಲಾಮು ಎಲ್ಲಿದೆ? ಎಂದು ಕವಿ ಪ್ರಶ್ನಿಸಿ ಕೊಂಡಿರುವುದು ಕಾಣುತ್ತವೆ. ಹಾಗೆ ಈ ಧರ್ಮ ರದ್ಧತಿ ದೂರ ಮಾಡಿ ಸೌಹಾರ್ದತೆಯನ್ನು

ಬಯಸುವ ಕಾವ್ಯ ಇವರದ್ದಾಗಿದೆ. ಈ ಸಂಕಲನದಲ್ಲಿ ಮತ್ತೊಂದು ಕವಿತೆಯಾದ ನನ್ನ ನಿನ್ನ ನಡುವೆ ಎಂದು ಕವಿತೆಯಲ್ಲಿ ನನ್ನ ನಿನ್ನ ನಡುವೆ ಹೀಗಾಬಾರದಿತ್ತು. ನೀನು ಸತ್ತರೆ ಸುಡುತ್ತಾರೆ ನಾನು ಸತ್ತರೆ ಹೂಳುತ್ತಾರೆ.

ಇಲ್ಲಿ ಕವಿ ಎರಡು ಧರ್ಮ ಧಾರ್ಮಿಕ ಆಚರಣೆಗಳು ಬಗ್ಗೆ ಹೇಳುತ್ತಾರೆ. ಕವಿ ಧರ್ಮದಾಚೆಗಿನ ಮನುಷ್ಯರೆಂಬ ನಾವು ಅದನ್ನು ಮರೆತು ನಮ್ಮ ನಮ್ಮಲ್ಲೇ ಎಷ್ಟೊಂದು ಭೇದಗಳು ಇವೆಯಲ್ಲಿ ನನ್ನ ನನ್ನ ನಡುವೆ ಅಂದರೆ ಎರಡು ಧರ್ಮದ ಮಧ್ಯೆ ಹುಟ್ಟಿದ ಮನುಷ್ಯ ಪ್ರೀತಿಯನ್ನು ಸಾಯಿಸಿ ತಮ್ಮ ಧರ್ಮದ ಅಧಿಪತ್ಯವನ್ನು ಸಾಧಿಸುತ್ತಿರಲ್ಲ ಎಂದು ನೋವಿನಿಂದ ಹೀಗಾಗಬಾರದಿತ್ತು ಸಖಿ, ನನ್ನ ನಿನ್ನ ನಡುವೆ ಇದೆ ಎಂದಿದ್ದಾರೆ. ಎರಡು ಮೂಲಭೂತ ಮನಸ್ಸುಗಳ ಮಧ್ಯ ಅನೇಕ ಜೀವಗಳು ಸಾಯುತ್ತಿವೆ. ಪ್ರೀತಿಯಲ್ಲಿ ನೀಡಿದ ಮುತ್ತುಗಳು, ರಂಗೋಲಿ ಚಿತ್ರಗಳು, ಮೂಗುತಿ, ಎಲ್ಲವೂ ಭಸ್ಮವಾಗುತ್ತಿವೆ. ನನ್ನ ನಿನ್ನ ನಡುವೆ ಈ ಧರ್ಮಂಧದ ಕೈಯಲ್ಲಿ ಎಂದು ದುಃಖದಿಂದ ಹೇಳುತ್ತಿರುವುದು ಕಾಣುತ್ತೇವೆ. ಕೊನೆಗೆ ಮನುಷ್ಯ ಜಾತಿ ಒಂದೇ ಮನುಷ್ಯ ಪ್ರೀತಿಯೇ ಜೀವ ಸ್ಥಾಯಿ ಎಂದು ಹೇಳುವುದು ವೈಚಾರಿಕತೆಯ ಸಾರವಾಗಿದೆ. ಇವರ ಕಾವ್ಯದಲ್ಲಿ ವೈಚಾರಿಕತೆಯ ಶೋಧ ಕಾಣಬಹುದಾಗಿದೆ. ಇದೇ ಸಂಕಲನದ ಮತ್ತೊಂದು ಕವಿತೆಯಾದ 'ಬಾಳೆ ಎಲೆಯಲ್ಲಿ ಬಿರಿಯಾನಿ' ಎನ್ನುವ ಕವಿತೆಯ ಸಾಲು, ರೂಪಕ, ಇಡೀ ಆಹಾರ ಸಂಸ್ಕೃತಿಯ ವಿರುದ್ಧ ವೈಚಾರಿಕ ನಿಲುವು ತಾಳಿದಂತಿದೆ. ಬಾಳೆ ಎಲೆ ಒಂದು ಧರ್ಮದ ಆಹಾರ ಸಂಸ್ಕೃತಿಯ ಸೂಚಕವಾಗಿದೆ. ಇದು ಹಿಂದೂಧರ್ಮದ ಆಹಾರಪದ್ಧತಿಯನ್ನು ಹೇಳುತ್ತದೆ. ಜೊತೆಗೆ ಸಸ್ಯಾಹಾರವನ್ನು ಸೂಚಿಸುತ್ತದೆ. ಬಿರಿಯಾನಿ ಇದು ಮತ್ತೊಂದು ಧರ್ಮ ಆಹಾರ ಸೂಚಕವಾಗಿದೆ. ಈ ಆಹಾರ ಪದ್ಧತಿ ಪರಂಪರೆಯಿಂದ ಬಂದದ್ದಾಗಿದೆ. ಆಹಾರದ ಮೂಲಕ ಧರ್ಮ, ಜಾತಿಯನ್ನು ಸೂಚಿಸುವುದು ಗುರುತಿಸುವುದು ಒಂದು ಬಗೆಯಲ್ಲಿ ನಡೆಯುತ್ತದೆ. ಇದನ್ನು ಮೀರಿ, ಆ ಸಂಸ್ಕೃತಿಯನ್ನು ಮುರಿದು ಆಹಾರ ಸಂಸ್ಕೃತಿಯ ಒಂದು ಧರ್ಮಕ್ಕೆ ಸೀಮಿತವಲ್ಲ. ವ್ಯಕ್ತಿಯ ಸ್ವತಂತ್ರವಾಗಿದೆ. ಎರಡನ್ನು ಸಮೀಕರಿಸಿ ಏಕವಾಗಿಸಿದ ವೈಚಾರಿಕತೆ ಇಲ್ಲಿ ಕಾಣಬಹುದು. ಹಿಂದೂ-ಮುಸ್ಲಿಂ ಧರ್ಮವನ್ನು ಒಂದೇ ನೆಲೆಯಲ್ಲಿ ಸೌಹಾರ್ದತೆಯ ಆಶಯವನ್ನು ವ್ಯಕ್ತಪಡಿಸಿರುವುದು ಕಾಣುತ್ತೇವೆ. ಜಂಗಮ ಫಕೀರರಿಗೆ ಒಂದೇ ಜೋಳಿಗೆಯಲ್ಲಿ ಹಾಕಿ ಮನುಷ್ಯ ಪ್ರೀತಿಯನ್ನು ಮಾನವೀಯತೆಯ ತುತ್ತು ನೀಡುತ್ತಿರುವುದು ವ್ಯಕ್ತಗೊಂಡಿದೆ. ಇಲ್ಲಿ ಸಮಕಾಲೀನ ಕವಿತೆಯ ಅದರಿಂದಾಗುವ ಸಾಮಾಜಿಕ ವಿಪರ್ಯಾಸಗಳನ್ನು ಕಟುವಾಗಿ ಖಂಡಿಸುತ್ತದೆ. ಅದರ ಭರದಲ್ಲಿ ಧಾರ್ಮಿಕ ಸಾಧನೆಯನ್ನೇ ತಿರಸ್ಕರಿಸುವಲ್ಲಿ ಅದರ ತಿರುಳಾದ ಆಧ್ಯಾತ್ಮವನ್ನು ಉಳಿಸಿಕೊಂಡು ಮತ ಮತ್ತು ಅದರಿಂದ ಜನ್ಯವಾದ ಮತಭ್ರಾಂತಿ ಮತ್ತು ಮೌಢ್ಯಗಳನ್ನು ನಿರಾಕರಿಸಬೇಕೆಂದು ಮತ್ತೆ ಮತ್ತೆ ಅನೇಕ ರೀತಿಯಲ್ಲಿ ಕವಿಗಳು ತಮ್ಮ ಕವಿತೆಯಲ್ಲಿ ಪ್ರತಿಪಾದಿಸುತ್ತಲೇ ಇದ್ದಾರೆ. ವ್ಯಾಪಕವಾದ ಆಧ್ಯಾತ್ಮಿಕ ದೃಷ್ಟಿಯನ್ನು ಅದರ ವಿವಿಧ ಹಂತಗಳನ್ನು ಅವರ ಕಾವ್ಯದಲ್ಲಿ ನೋಡಬಹುದಾಗಿದೆ.

ಮತೀಯ ಮೌಢ್ಯದಿಂದ ಪಾರಾಗುವುದು ಸುಲಭವಲ್ಲ. ಕಾರಣ ಅದು ಅಷ್ಟರಮಟ್ಟಿಗೆ ಬೇರೂರಿದೆ ಹಾಗೂ ಕೆಲವು ಮನಸ್ಸುಗಳು ಅದರಿಂದ ಹೊರಬರದಂತೆ ಭಯ ಮತ್ತು ಪಾಪದ ಪುಣ್ಯ ಕೋಟೆಗಳನ್ನು ಕಟ್ಟಿ ಅಲ್ಲೇ ಬಂಧಿತರಾಗುವಂತೆ ಬಂಧಿಸಲಾಗಿದೆ ಎಂಬ ಆತಂಕದ ನುಡಿಯನ್ನು ಸಹ ಕಾವ್ಯ ವ್ಯಕ್ತಪಡಿಸಿದೆ. ಆದರೂ ಅದರಿಂದ ಹೊರಬರಬೇಕಾದ ಅಗತ್ಯತೆಯನ್ನು ಮತ್ತೆ ಮತ್ತೆ ಹಲವು ಬಗೆಯಲ್ಲಿ ಹಲವು ಹಂತಗಳಲ್ಲಿ ಸಾರುತ್ತಿದೆ. "ಧರ್ಮ" ಎನ್ನುವುದು ಮಾನವನ ಅಮೃತಾತ್ಮದ ಗೋಣಿಗೆ ಕಬ್ಬಿಣದ ನೇಣಾಗಿ ಪರಿಣಮಿಸಿರುವುದನ್ನು ಪೂಜೆಯು ನಕಲಿ ಪರಿಹಾಸ್ಯವಾಗಿದೆ. ಇದು ಸಮಕಾಲೀನ ಕಾವ್ಯದಲ್ಲಿಯೂ ವ್ಯಕ್ತಗೊಂಡಿದೆ. ಧರ್ಮವೂ ಸೂಚಕವು ಹಲವು ಮೌಢ್ಯ ಪೂಜೆ ಪುನಸ್ಕಾರಗಳ ಕುರಿತು ಕಾವ್ಯ ವೈಚಾರಿಕತೆ ಮಾತುಗಳನ್ನು ಹಾಡುವುದರಿಂದ ಪ್ರಶ್ನಿಸುವುದರಿಂದ ಅವುಗಳನ್ನು ತಿರಸ್ಕರಿಸುವ ಬಗೆ ಹೇಳುತ್ತಿದೆ. ಮತ–ಧರ್ಮಗಳಲ್ಲಿ ದೇವರ ಪೂಜೆ-ಪುನಸ್ಕಾರಗಳನ್ನು ಅಷ್ಟೇ ಅಲ್ಲದೆ ಅವುಗಳು ಹೇಳುವ ಧರ್ಮ ಗ್ರಂಥಗಳನ್ನು ಯಥಾವತ್ತಾಗಿ ಒಪ್ಪಿಕೊಳ್ಳುವ ಪ್ರಶ್ನಿಸಿ ಒಪ್ಪಬೇಕು. ಇಲ್ಲಿರುವ ಮೌಢ್ಯವನ್ನು ಖಂಡಿಸಿ ತಿರಸ್ಕಾರಬೇಕು, ಜೀವ ಪರಮೌಲ್ಯವನ್ನು ಸ್ವಾಗತಿಸುವ ಮನಸ್ಸು ಬೇಕು. ಹಿಂದಿನ ಧರ್ಮ ಗ್ರಂಥಗಳನ್ನು ಆಚಾರ್ಯ ಉಪದೇಶಗಳ ಪ್ರಸ್ತುತತೆಯನ್ನು ವಿಚಾರ ವತಿಯಿಂದ ವಿಮರ್ಶಿಸಬೇಕು. ನಂಬುಗೆ ಪುರಾತನವಾದ ಮಾತ್ರಕ್ಕೇ ಸತ್ಯವಲ್ಲ. ವಿಜ್ಞಾನ ಪ್ರಪಂಚದಂತೆ ಮತ-ಧರ್ಮಗಳೂ ವಿಕಾಸಶೀಲವಾದವುಗಳು. ಇಲ್ಲಿಯೂ ಹೊಸ ಸತ್ಯಗಳ ಅವಿಷ್ಕಾರಗಳನ್ನು ಸ್ವಾಗತಿಸುವ ಹೊಸದೃಷ್ಟಿ ಬೇಕು. ಇಂತಹ ನಿಲುವು ವೈಚಾರಿಕತೆಯಿಂದ ಮಾತ್ರ ಸಾಧ್ಯ. ನಂಬಿಕೆ ಮತ್ತು ಪೂರ್ವ ಗ್ರಹದಿಂದ ಸಾಧ್ಯವಿಲ್ಲ. ಮುಕ್ತಿ ವೈಚಾರಿಕತೆ ಮನುಷ್ಯ ತೆರೆದುಕೊಳ್ಳಬೇಕು ಎಂದು ಕಾವ್ಯ ಸಾರುತ್ತಿದೆ. ಮುಕ್ತಿ ವೈಚಾರಿಕತೆಯ ಆಶಯವನ್ನು ಕಾವ್ಯ ಒಳಗೊಂಡಿದೆ.

ಕಾವ್ಯವೆಂದರೆ ಅನುಭವಕ್ಕೆ ಆಕಾರ ಕೊಡುವ ಅಸಲು ಕಸಬು, ಬರೀ ನೇಯ್ಗೆಯ ಕೆಲಸವಲ್ಲ. ಕವಿಯ ಕರ್ಮ, ಕಾವ್ಯ, ಅದು ಕವಿಯ ಭಾಷಣವಲ್ಲ. ಕಾವ್ಯ ಶಿಲ್ಪದ ಬಗ್ಗೆ ವಿಶೇಷ ಎಚ್ಚರ ಬದಲಾಗುತ್ತಿರುವ ಜೀವನ ಸಂವೇದನೆಯ ಸಂದರ್ಭದಲ್ಲಿ ವಾಸ್ತವಿಕತೆಯ ಅಗತ್ಯ ಎತ್ತಿ ಹಿಡಿದು ಹೊಸ ಶೈಲಿ, ಹೊಸ ಸಂವೇದನೆ, ಹೊಸ ಚಿಂತನೆಗಳನ್ನು ಹುಟ್ಟು ಹಾಕಿದ್ದು ಸಮಕಾಲೀನ ಕನ್ನಡ ಕಾವ್ಯ ಲೋಕ ಜೀವನದ ನೂರಾರು ಒಲವು-ನಲಿವು, ನೋವು-ನಗೆಗಳ ಜೀವನದರ್ಶನದಿಂದ ಪಡೆದ ಅಪಾರ ಸಂವೇದನೆಗಳು ಕಾವ್ಯದಲ್ಲಿ ಮೂಡಿಬಂದಿವೆ. ಕಣ್ಣ ಮುಂದೆ ಹರಡಿಕೊಂಡಿರುವ ಈ ಕವಿತೆ ವಾಸ್ತವತೆಗೆ ಹಿಡಿದ ಬಿಂಬ ಮತ್ತು ಭೂತ ಭವಿಷ್ಯತ್ತಿನ ಕೊಂಡಿಯಾಗಿದೆ. ಈ ಕೊಂಡಿಯು ವೈಚಾರಿಕ, ವೈಜ್ಞಾನಿಕತೆಯ ಅಂಶಗಳನ್ನು ಹೇಳುತ್ತಿವೆ. ನಾಡುನುಡಿ, ದೇವರು, ಭಕ್ತಿ, ಸಾಮಾಜಿಕ, ಧಾರ್ಮಿಕ, ರಾಜಕೀಯ ಅಂಶಗಳನ್ನು ವೈಜ್ಞಾನಿಕ ಪ್ರಶ್ನೆಗಳ ಮೂಲಕ ಒಪ್ಪು ಜ್ಞಾನ ಹೇಳುತ್ತಿದೆ. "ವೈಚಾರಿಕತೆ ಅನ್ನುವುದು ಅತ್ಯಂತ ಪ್ರಬಲವಾದ ಅಭಿವ್ಯಕ್ತಿ ವೈಚಾರಿಕತೆ ಎಂದರೆ ವೈಜ್ಞಾನಿಕತೆಯಾಗಿದೆ. ಈ ವೈಜ್ಞಾನಿಕತೆ ವಿಜ್ಞಾನ ಸಂಬಂಧಿಸಿದ್ದಾದರೂ ಇದರ ವ್ಯಾಪ್ತಿ ವಿಸ್ತಾರತೆಯನ್ನು ಪಡೆದಿದೆ. ವೈಜ್ಞಾನಿಕತೆಯ ವ್ಯಾಪ್ತಿ

ಅಲ್ಲಿಗೆ ಸೀಮಿತವಾಗಿಲ್ಲ. ವೈಜ್ಞಾನಿಕತೆ ಹೆಚ್ಚು ಕಡಿಮೆ ಮಾನವ ತಾಂತ್ರಿಕವಾಗಿ ಮತ್ತು ತಾರ್ಕಿಕವಾಗಿ ವಿಚಾರ ಮಾಡಲಾರಂಭಿಸಿದಂದಿನಿಂದಲೇ ಅಸ್ತಿತ್ವಕ್ಕೆ ಬಂದಿತು".[೨] ಈ ವಿಚಾರವಂತಿಕೆಯ ನೆರಳು ಇಂದಿನ ಕಾವ್ಯದಲ್ಲಿದೆ. ಧರ್ಮ, ಉಪನಿಷತ್ತು, ಗ್ರಂಥಗಳು, ದೇವರು, ಇಂದ್ರಿಯ ಮತ್ತು ಅತೀಂದ್ರಿಯ ವಿಷಯಗಳನ್ನು ವೈಜ್ಞಾನಿಕ ನೆಲೆಯಲ್ಲಿ ಅರ್ಥೈಸಿ ಅವುಗಳ ದೋಷಗಳನ್ನು ಪರಿಹರಿಸಿ ಸಮ್ಮತಿ ವ್ಯಕ್ತಪಡಿಸುವ ಬಗೆಯನ್ನು ಸಮಕಾಲೀನ ಕಾವ್ಯ ಕಲ್ಪಿಸಿಕೊಡುತ್ತದೆ. ಧರ್ಮಾಂಧರಗಾದಂತೆ ವಿಶ್ವಮಾನವ ಪ್ರಜ್ಞೆಯನ್ನು ತಿಳಿಸಿಕೊಟ್ಟಿದೆ. ಪರಂಪರೆಯಿಂದ ಹೇಳಿಕೊಂಡು ಬಂದಿರುವ ಜ್ಞಾನದ ಕುರಿತು ವೈಚಾರಿಕ ನಿಲುವಾದ ಬಗೆ ಮಂಜುನಾಥರ ಕವಿತೆಯಲ್ಲಿ ವ್ಯಕ್ತಗೊಂಡಿದ್ದು ಹೀಗೆ.

ಕಪ್ಪಿಟ್ಟಿದ್ದಕ್ಕೆ
ಬೆಳಕ ಹಾಯಿಸು
ಗಂಟಿಕ್ಕಿದ್ದನ್ನ
ಬಿಡಿಸು, ಸಡಿಲಿಸು
ಸೋತು ನೆಲಕಚ್ಚಿ ಅಳುವ ಮೊಗ
ಎತ್ತಿ ಕಿರುನಗೆ ಕುಣಿಸು
ಕಾಲವೃತ್ತ ನಿಷ್ಪಲ ಗೆರೆಯನ್ನಳಿಸಿ ಹಾಕು
ವಿಶ್ವಾಸ ಮೂಡಿಸುವ ಸ್ವರೂಪ ಸೂರ್ಯೋದಯಗೊಳಿಸು
ಕಾಣಿಸು ನಿಟ್ಟಿಸಿ ನಿನ್ನಿದಿರು ನಿಂತಾಗ
ರೂಪಾಂತರದ ತಾಂತ್ರಿಕ ಸಾಧ್ಯತೆಯನ್ನು[೩]

ಕವಿ ಇಲ್ಲಿ ಪರಂಪರಾಗತವಾಗಿ ಹೇರಿಕೊಂಡ ನಂಬಿಸಿಕೊಂಡ ಬಂದಿರುವ ಅಂಶವನ್ನು ಪ್ರಶ್ನಿಸಲು, ಬಿಡಿಸಲು, ಸಡಿಲಿಸಲು ಹೇಳುತ್ತಿದ್ದಾರೆ. ನಿಜವಾದ ಜ್ಞಾನವನ್ನು ಮುಚ್ಚಿಟ್ಟು ತಮ್ಮ ಹಿತಾಸಕ್ತಿಯಂತೆ ಮೌಲ್ಯ, ಶೀಲ, ಪಾವಿತ್ರ್ಯದ ಪುಣ್ಯದ ಹೆಸರಲ್ಲಿ ತಮ್ಮದೇ ಆದ ನಿಯಮಗಳನ್ನು ಸಾಮಾಜಿಕ, ಸಾರ್ವತ್ರಿಕ ನಿಯಮ ಎಂದು ಹೇಳಿಕೊಂಡು ಬಂದಿರುವ ವ್ಯವಸ್ಥೆಯನ್ನು ಧಿಕ್ಕರಿಸಿ ಅವುಗಳನ್ನು ಬಿಡಿಸಿ ನೋಡಬೇಕು. ಅವುಗಳನ್ನು ಪೂರ್ವಗ್ರಹ ಪೀಡಿತರಾಗಿ ಒಪ್ಪಿಕೊಳ್ಳದೆ, ವೈಜ್ಞಾನಿಕ ರೀತಿಯ ಪರೀಕ್ಷಿಸಿ, ಪ್ರಶ್ನಿಸಿ ಶೋಧಿಸಿ ಒಪ್ಪಬೇಕು. ಸಿದ್ಧಾಂತವಾದರೂ ಸರಿಯೇ, ಸಂಪ್ರದಾಯ, ನೀತಿ ನಿಯಮಗಳಾದರೂ ಸರಿಯೇ. ಯಾವುದೋ ಒಂದು ಬಲಿತ ಸಮುದಾಯ, ಬಲಿಷ್ಠ ಮನಸ್ಥಿತಿಯ ಪ್ರಭಾವ ಹೆಚ್ಚಾಗಿ ಹೇರಿಕೊಂಡ ಬಂದಿರುವ ಮೌಲ್ಯಗಳಿಗೆ ತುತ್ತಾಗಿ ಸತ್ಯ ನೆಲಕ್ಕಚ್ಚಿ ಬಿದ್ದ ಅಳುತ್ತಿದ್ದರೂ ಆ ಕಣ್ಣೀರವರೆಸಿ, ಆತ್ಮಸ್ಥೈರ್ಯ ತುಂಬಿ ಮುಕ್ತ ಚರ್ಚೆಗೆ ಕರೆದು ಸತ್ಯಾಸತ್ಯತೆಯನ್ನು ಪರೀಕ್ಷೆ ತುಳಿತಕ್ಕೊಳಗಾದ ಮನಸ್ಸುಗಳಲ್ಲಿ ಬೆಳಕಲ್ಲಿ ಸತ್ಯದಲ್ಲಿ ಕಿರುನಗೆಯನ್ನು ತುಂಬಿ ಸತ್ಯ ಬೆಳಕು ಮೂಡುವಂತೆ ಮಾಡಬೇಕು. ಕಾಲ ಹಾಕಿದ ಗೆರೆಗಳನ್ನು ದಾಟಬೇಕು. ಕೆಲವು ಧಾರ್ಮಿಕ ಸಂಪ್ರದಾಯಗಳಿಗೆ ಚೌಕಟ್ಟು ಹಾಕಿ ಅಲ್ಲಿ ಸ್ವತಂತ್ರ, ಮುಕ್ತತೆಗೆ

ಅವಕಾಶವಿಲ್ಲದಂತೆ ಮಾಡಿರುವ ಗೆರೆಗಳ್ನು ಅಳಿಸಿ ಹಾಕಬೇಕು. ಹೊಸ ಸೂರ್ಯೋದಯದ ಬೆಳಕು ಮೂಡಿಸಬೇಕು. ಅದು ನಂಬಿಸಿದ ಬೆಳಕು ಅಲ್ಲಿ ವಿಶ್ವಾಸದ, ವಿಜ್ಞಾನದ ಬೆಳಕನ್ನು ಮೂಡಿಸಬೇಕು. ಆ ನಿಟ್ಟಿನಲ್ಲಿ ನಮ್ಮ ವಿಚಾರಧಾರೆಗಳು ಇರಬೇಕು ಎಂದು ಇಂದು ಕಾವ್ಯ ಹೇಳುತ್ತದೆ. ಅಂಥ ವಿಚಾರಧಾರೆಗಳನ್ನು ಬಿತ್ತುತ್ತದೆ. ಈ ನಿಟ್ಟಿನಲ್ಲಿ ಮನುಷ್ಯ ಯೋಚಿಸಿದಾಗ ಇದ್ದು ಮೌಢ್ಯತೆಯನ್ನು ದೂರ ಮಾಡಿ ರೂಪಾಂತರ ಮಾಡಿ ಕುವೆಂಪು ಕರೆದಿರುವ ವೈಚಾರಿಕ, ವೈಜ್ಞಾನಿಕ ದೀವಿಗೆಯ ಬೆಳಗ ಬನ್ನಿ ಸಹೋದರರೆ ಎನ್ನುವ ಮಾತು ಅರ್ಥಪೂರ್ಣವಾಗುತ್ತದೆ. ಈ ಮಾತಿನ ಆಶಯದಂತೆ ಇಂದಿನ ಸಮಕಾಲೀನ ಕಾವ್ಯ ಅಭಿವ್ಯಕ್ತಿಗೊಂಡಿರುವುದು ಕಾಣುತ್ತೇವೆ. ಪೂರ್ವಗ್ರಹಗಳು ನಮ್ಮ ಮನಸ್ಸಿನಲ್ಲಿ ಹುಟ್ಟಿಕೊಳ್ಳುವುದು ನಮ್ಮ ವೈಯಕ್ತಿಕ ಆಸಕ್ತಿಯಿಂದಾಗಿ ನಮ್ಮ ವೈಯಕ್ತಿಕ ಆಸಕ್ತಿಗಳು ಅಡ್ಡಿಯಾಗುವ ಯಾವುದೇ ತತ್ವ ವಿಚಾರ ಹಾಗೂ ವಾದಗಳನ್ನು ನಾವು ತೆರೆದ ಮನಸ್ಸಿನಿಂದ ಒಪ್ಪಿಕೊಳ್ಳಲು ಸಿದ್ಧರಿಲ್ಲ. ಅಂಥ ತತ್ವವಿಚಾರ ವಿಷಯ ಯಾವುದೇ ಇರಬಹುದು. ಅದು ಮೀಸಲಾತಿಯ ವಿಷಯ ಇರಬಹುದು. ಸಮಾಜವಾದ ಆಗಿರಬಹುದು. ಜಾತಿ ವಿಷಯ ಆಗಿರಬಹುದು. ಸಂಪ್ರದಾಯಗಳಾಗಿರಬಹುದು. ಸಾಮಾನ್ಯವಾಗಿ ಯಾರು ತಮ್ಮ ಸ್ವಂತದ ಹಿತಾಸಕ್ತಿಗಳನ್ನು ಮರೆತು ಒಂದು ವಿಷಯ ಕುರಿತು ಮುಕ್ತವಾಗಿ ಚರ್ಚಿಸುವುದಿಲ್ಲ. ನಮ್ಮ ಸ್ವಂತದ ಅಥವಾ ರಾಷ್ಟ್ರ ಹಿತಾಸಕ್ತಿಗಳು ಪ್ರಭಾವದಿಂದಾಗಿ ಕ್ರಮೇಣ ನಾವು ಪೂರ್ವಗ್ರಹಗಳನ್ನು ಬೆಳಸಿಕೊಳ್ಳುತ್ತೇವೆ? ಅಂಥ ಪೂರ್ವಗ್ರಹಗಳಿಂದ ದೂರ ಸರಿದು ನಿಷ್ಪಕ್ಷಪಾತವಾಗಿ ಮುಕ್ತವಾಗಿ ವಿಚಾರ ಮಾಡುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು. ಇಂಥ ಪ್ರವೃತ್ತಿ ಬೆಳಸಿಕೊಳ್ಳುವ ಅಗತ್ಯದ ಕುರಿತು ಕಾವ್ಯ ಮಾತನಾಡುತ್ತದೆ. ಸತ್ಯವನ್ನು ಅರಿಯುವುದಕ್ಕೆ ಮುಕ್ತ ಚರ್ಚೆಗೆ ನಮ್ಮನ್ನು ತೊಡಗಿಸಿಕೊಳ್ಳಬೇಕು. ಆಗ ಮೌಢ್ಯಗಳು, ಪೂರ್ವಗ್ರಹಗಳು, ನಂಬಿಕೆಗಳು, ಆಚರಣೆಗಳು ದೂರವಾಗಿ ವೈಚಾರಿಕತೆಯನ್ನು ಪಡೆದು ಮುಕ್ತವಾಗಿ ಬೀಳಬಹುದು. ಇಂಥ ಮುಕ್ತ ವೈಚಾರಿಕತೆಯನ್ನು ಸಮಕಾಲೀನ ಕಾವ್ಯ ಹೇಳುತ್ತದೆ. ಇದು ವಿಚಾರವಂತಿಕೆಯಿಂದ, ಪ್ರಯೋಗಶೀಲ ಮನಸ್ಸಿನಿಂದ ಮನಸ್ಸನ್ನು ಮುಕ್ತವಾಗಿ ತೆರೆದುಕೊಳ್ಳುವುದರಿಂದ ತಪ್ಪು-ಸರಿಗಳನ್ನು ಮುಕ್ತವಾಗಿ ಒಪ್ಪುವ ಮನಸ್ಸು ಇರಬೇಕು. ಅಂದಾಗ ವೈಚಾರಿಕ ಜ್ಞಾನ ಪಡೆಯಲು ಸಹಾಯಕವಾಗುತ್ತದೆ.

ಸುಮಾರು ವರ್ಷಗಳ ಹಿಂದೆಯೇ ನಾಡಿನ ಯುವಕರಿಗೆ ಕುವೆಂಪು ಅವರು ಕೊಟ್ಟ ಮಾರ್ಗಸೂಚಿ, 'ನಿರಂಕುಶ ಮತಿಗಳಾಗಿ' ಎಂಬುದು. ಇದರ ಕೆಲವು ಅಂಶಗಳು ಹಿಂದಾಗಲೇ ಬಂದಿವೆ. ಇಲ್ಲಿ ಮುಖ್ಯವಾಗಿ ಮತ, ಧರ್ಮವನ್ನು ಕುರಿತು ಇನ್ನು ಕೆಲವು ವಿವರಗಳನ್ನು ನೋಡಬಹುದು. ನಮ್ಮ ಮತವೇ ನಮ್ಮ ಮತಿಗೆ ಬಹುದೊಡ್ಡ ಅಂಕುಶವಾಗಿರುವುದನ್ನು ನಾಡಿನ ಏಳಿಗೆಯ ಕುತ್ತಿಗೆಗೆ ಉರುಳಾಗಿರುವುದನ್ನು ಕಂಡು ಕುವೆಂಪು ಅವರು ಕೆಲವು ಅಂಶಗಳನ್ನು ಹೀಗೆ ವಿವರಿಸುತ್ತಾರೆ. ಇಂದು ಧರ್ಮದ ವಿಚಾರಗಳು ನಮ್ಮನ್ನು ಆಳುತ್ತಿವೆ. ವಿಚಾರ ಮಾಡಲು ಅವಕಾಶ ಕೊಡದೆ ತಮ್ಮ ಯಜಮಾನಿಕೆಯನ್ನು ಮೆರೆದು ಕೋಮು ಜ್ವಾಲೆ ಹುಟ್ಟಿಸಿ ಅಂಧಕಾರ ಬೆಳೆಸಿ, ಮನುಷ್ಯ ಮನುಷ್ಯರ ಮಧ್ಯೆ ರಕ್ತಪಾತ ಮಾಡುವುದಾಗಿದೆ.

ಇದಕ್ಕೆ ನಾವು ನಿರಂಕುಶ ಮತಿಗಳಾಗಬೇಕು. ಆಗ ಎಲ್ಲವನ್ನು ಯಥಾವತ್ತಾಗಿ ಮೂರ್ಖರಂತೆ ಒಪ್ಪಿಕೊಳ್ಳದೆ ವೈಜ್ಞಾನಿಕತೆಗೆ ಒಳಪಡಿಸಿ ಒಪ್ಪಿ ಸಮ್ಮಿತಿಸಬೇಕು ಎಂದು ಹೇಳುತ್ತಾರೆ. ಇಂದು ನಿರಂಕುಶಮತಿಯ ಚಹರೆಯನ್ನು ಸಮಕಾಲೀನ ಕನ್ನಡ ಕಾವ್ಯದಲ್ಲಿ ವ್ಯಕ್ತಗೊಂಡಿವೆ. ಇದಕ್ಕೆ ವಿಚಾರ ಸಾಹಿತ್ಯ ಮತ್ತು ಕುವೆಂಪು ಅವರ ಸಾಹಿತ್ಯ ಮತ್ತು ದರ್ಶನ ಪ್ರೇರಣೆಯಾಗಿದೆ. ಧರ್ಮದ ಹೆಸರಲ್ಲಿ ನಡೆಯುತ್ತಿರುವ ಈ ದುಷ್ಟ ಗ್ರಹಕಾಟ ಆಧುನಿಕ ಯುಗದಲ್ಲಿ ಬೆಳೆಯುತ್ತಿದೆ. ಅದರಲ್ಲಿಯೂ ಆಧುನಿಕತೆಯ ವೈಜ್ಞಾನಿಕ ಹಿನ್ನೆಲೆಯು ಶಿಷ್ಯರ ಅದಕ್ಕೆ ಬೆಂಬಲವಾಗಿ ನಿಲ್ಲುತ್ತಾರೆ ಎಂದು ಹೇಳುತ್ತಾರೆ. ಭಾರತ ದೇಶದಲ್ಲಿ ಶಿಕ್ಷಣ ಪಡೆದವರು ಸಹ ಇಂಥ ಮೌಢ್ಯತೆಗೆ ಒಳಗಾಗಿರುವುದು ಕಾಣುತ್ತೇವೆ. ಅವರು ಶಿಕ್ಷಣ ಮಾತ್ರ ಪಡೆದಿರುತ್ತಾರೆ. ಅಕ್ಷರಸ್ಥರಾಗಿರುತ್ತಾರೆ. ಆದರೆ ವಿಚಾರವಂತರಾಗಿರುವುದಿಲ್ಲ. ಹೇಳಿದ್ದಲ್ಲವನ್ನು ಒಪ್ಪುವ ಸಮ್ಮತಿ ಆಚರಿಸುವ ಮನೋಧರ್ಮದವರಾಗಿರುತ್ತಾರೆ. ಇಂಥವರಿಂದ ದೇಶದ ಪ್ರಗತಿ ಆಗಬಾರದು. ಅಭಿವೃದ್ಧಿಯ ಕನಸು ಕಾಣಲಾಗದು. ಅದಕ್ಕಾಗಿ ವೈಚಾರಿಕತೆಯ ಜ್ಞಾನದಿಂದ ದೇಶದಲ್ಲಿ ಪ್ರಗತಿ ಸಮಾನತೆ, ಜ್ಞಾನ, ಎಲ್ಲವೂ ಸಮಷ್ಟಿಯಾಗಿ ನಡೆಯಲು ಸಹಾಯಕವಾಗುತ್ತದೆ. ಕುವೆಂಪುರ ಪ್ರಕಾರ ನಮ್ಮಲ್ಲಿ ಈಗಲೂ ಆಧುನಿಕ ವಿದ್ಯಾವಂತರ ಧರ್ಮ, ಆಚಾರ ಮಾತು ಮಾತುಗಳಿಗೆ ಬೇಗನೆ ಒಳಗಾಗಿ ಅದು ಸರಿ ಎನ್ನುವ ವಾದ ಮಾಡುತ್ತಾರೆ. ಆದರೆ ಇದು ಅಪಾಯಕಾರಿಯಾದದ್ದು. ವಿದ್ಯಾವಂತರೂ ಸಹ ಭ್ರಾಂತಿಯ ಮೌಢ್ಯಗಳಿಗೆ ಒಳಗಾಗಿರುತ್ತಾರೆ. ಸಂಪ್ರದಾಯ ಕರ್ಮಗಳಲ್ಲಿ ತೊಡಗುತ್ತಾರೆ. ಸಾಮಾನ್ಯ ಜನರನ್ನು ದಿಕ್ಕು ತಪ್ಪಿಸುತ್ತಾರೆ. ಅದನ್ನು ಒಪ್ಪದಿದ್ದರೆ ಖಂಡಿಸಲು ಮುಂದಾಗುತ್ತಾರೆ. ಅಷ್ಟು ಗ್ರಹಕೂಟದ ಸಂದರ್ಭದಲ್ಲಿ ನಡೆದ ಎಲ್ಲ ಮತೀಯ ಕರ್ಮಗಳನ್ನು ತಮ್ಮ ವೈಚಾರಿಕ ದೃಷ್ಟಿಯಿಂದ ನಿರಾಕರಿಸಿ ದಕ್ಕಿದ ಕರ್ತವ್ಯ ನಿಷ್ಠೆಯನ್ನು ಮತ್ತು ಎತ್ತಿಹಿಡಿಯುತ್ತಾರೆ. ಇದು ಅಪಾಯಕಾರಿ ವಿದ್ಯಾವಂತ ಮನಸ್ಸುಗಳು ಸಹ ಮತಧರ್ಮದ ಕುರಿತು ವೈಜ್ಞಾನಿಕ ಚಿಂತನೆಗೆ ತೆರೆಯುವ ಮುಕ್ತ ಮನಸಾಗಬೇಕು ಎಂದು ಕಾವ್ಯ ಮಿಡಿಯುತ್ತದೆ.

ಸಮಕಾಲೀನ ಕನ್ನಡ ಕಾವ್ಯ ಭಾವನಾತ್ಮಕವಾಗಿ ಎಲ್ಲವನ್ನು ನೋಡದೆ, ಧರ್ಮ, ದೇವರನ್ನು ಸಹ ಭಕ್ತಿಯ ಆರಾಧನೆಯಲ್ಲಿ ಕಾಣದೆ ಒಂದು ವಿಶಿಷ್ಟ ಆಲೋಕನ ಕ್ರಮದಲ್ಲಿ, ವೈಚಾರಿಕತೆಯ ಹಿನ್ನೆಲೆಯಲ್ಲಿ ದೇವರು ಧರ್ಮವನ್ನು ನೋಡಲಾಗಿದೆ. ದೇವರೊಂದಿಗೆ ಸಂವಾದ ನಡೆಸುವುದು ಸಾಮಾನ್ಯ ಮನುಷ್ಯನಾಗಿ ಜೀವಿಸಲು ಕರೆ ನೀಡುವುದು. ದೇವರು ನಿಸ್ಸೀಮ ನಮ್ಮಂತೆ ಮನುಷ್ಯನಾಗಿ ಬದುಕಲು ಸವಾಲು ಹಾಕುವುದು ಹಾಗೂ ರಾಮನನ್ನು, ರಾವಣನನ್ನು, ಸೀತೆಯನ್ನು ಎಲ್ಲವನ್ನು ವಿಭಿನ್ನ ರೀತಿಯಲ್ಲಿ ನೋಡಿ ಇವರ ಸಂಬಂಧ ಚರಿತ್ರೆಯನ್ನು ಹೇರಿಕೊಂಡು ಬಂದಿರುವ ಸಂಗತಿಗಳನ್ನು ಸಹ ಅದಲು ಬದಲು ಮಾಡಿ ನೋಡುವ ವಿಶಿಷ್ಟ ಕ್ರಮ ಸಮಕಾಲೀನ ಕಾವ್ಯದ್ದಾಗಿದೆ. ಹಾಗೇ ರಾಮನನ್ನು ಮರವಾಗು ಎಲ್ಲರಿಗೂ ಗಾಳಿ, ಬೆಳಕು, ನೆರಳನ್ನು ನೀಡುವ ಎಂದು ಕಾವ್ಯ ಹೇಳುತ್ತದೆ. ಸಮಕಾಲೀನ ಸಂದರ್ಭದಲ್ಲಿ ದೇವರ ಹೆಸರು ಹೇಳಿ ಕೆಲವು ಸಮುದಾಯವನ್ನು ದೇವರಿಗೆ ಸೀಮಿತಗೊಳಿಸಿ ಹಿಂಸಾತ್ಮಕ ನಿಲುವುಗಳನ್ನು ದೇವರ ಹೆಸರಿನೊಂದಿಗೆ ಮಾಡುವ ಅಂಧಕಾರದ ಮನಸ್ಸುಗಳಿಗೆ ಕಾವ್ಯ ವೈಚಾರಿಕತೆಯಿಂದ ಧರ್ಮ, ದೇವರನ್ನು ಹೇಗೆ ನೋಡಬೇಕು ಎನ್ನುವುದನ್ನು ಕಲಿಸುತ್ತದೆ.

ರಾಮ
ನೀನೊಂದು ಮರವಾಗಿ
ನಾಲ್ವರಿಗೆ ನೆರಳು ನೀಡಿದ್ದರೆ ಸಾಕಿತ್ತು
ಈ ರೀತಾಂಬರಿ ಪೀತಾಂಬರಿಗಳ
ನಡುವೆ ನರಳುವುದಾದರೂ ತಪ್ಪುತ್ತಿತ್ತು
..............................................
ಮಡದಿ ಮಕ್ಕಳ ಕೂಡ
ವನವಾಸದಲ್ಲೊಂದು ಮರವಾಗಿ
ಉಳಿದು ಬಿಡು"

ಕವಿ ಇಲ್ಲಿ ರಾಮ ಕೇವಲ ಒಂದು ಸಮುದಾಯಕ್ಕೆ ಸೀಮಿತಗೊಳಿಸಿ ಆರಾಧಿಸುವ ದುರಂತವನ್ನು ಚಿತ್ರಿಸುತ್ತಾರೆ. ಹೀಗಾಗಿ ಆ ದುರಂತ ತಪ್ಪಿಸಲು ರಾಮನ್ನು ಎಲ್ಲರೂ ಗೌರವಿಸುವ ಆರಾಧಿಸುವ ಮರವಾಗಿದ್ದಾರೆ. ಗಾಳಿ ನೆರಳು ಸಮವಾಗಿ ನೀಡುತ್ತಿದ್ದ. ಆದರೆ ಇಂದು ಒಂದು ಸಮುದಾಯಕ್ಕೆ ತನ್ನ ಹಿತಾಸಕ್ತಿಗಳನ್ನು ಬೆಳೆಸಿಕೊಳ್ಳುವುದಕ್ಕೆ ಸಾಧನವಾಗಿದ್ದಾನೆ ಎಂದು ಕಾವ್ಯ ನುಡಿಯುತ್ತಿದೆ. ದೇವರನ್ನು ನರಮನುಷ್ಯರಂತಾಗಲು ಕರೆ ನೀಡುವುದು. ಮರವಾಗಲು ಬಯಸುವುದು ಇದೇ ವೈಚಾರಿಕ ಚಿಂತನೆಯಾಗಿದೆ. ಕವಿ ಇಲ್ಲಿ ರಾಮನನ್ನು ಗುಡಿಯಲ್ಲಿ ಕಟ್ಟಿಹಾಕದೆ ಸಾರ್ವಜನಿಕವಾಗಿ ತಂದು ನಿಲ್ಲಿಸಿದ್ದಾರೆ. ಹಾಗೇ ಸಾಮಾನ್ಯ ಜನರ ಉಸಿರಾಟಕ್ಕೆ ಬದುಕಿಗೆ ನರಳಿಸಿರುವುದು ವಿಶೇಷವಾಗಿ ಕಂಡುಬಂದಿದೆ. ಪೀತಾಂಬರಿನಲ್ಲಿ ವಜ್ರ, ವೈಢೂರ್ಯ, ಪೂಜೆ, ಹೋಮಗಳಲ್ಲಿ ರಾಮನ್ನು, ರಾಮನ ನಿಲುವುಗಳನ್ನು ಆರಾಧಿಸುವ ರೀತಿಗೆ ಕವಿ ಇಲ್ಲಿ ರಾಮ ಮರವಾಗಿದ್ದರೆ ಆ ನೆರಳಲ್ಲಿ ಇಡೀ ಮನುಕುಲವೆಲ್ಲ ಬಂದು ಕುಳಿತುಕೊಳ್ಳಬಹುದಿತ್ತು. ಆದರೆ ಇಂದು ದೇವರನ್ನು ಮಾಡಿ ಕೆಲವು ಸಮುದಾಯಕ್ಕೆ ಮಾತ್ರ ಸೀಮಿತಗೊಳಿಸಿ ಆರಾಧಿಸುವವರಿಗೆ ಕಾವ್ಯ ಮಿಡಿಯುತ್ತದೆ.

ಕಾವ್ಯ ಕೇವಲ ಒಂದೇ ಧರ್ಮ ಮತದ ಕುರಿತು ಮಾತಾಡುವುದಿಲ್ಲ. ಎಲ್ಲಾ ಧರ್ಮದ ಅಂಧಾಚಾರಗಳ ಕುರಿತು ಮಾತನಾಡುತ್ತಿದೆ. ದೇವರನ್ನು ಸಾಯಲು ಕರೆಯುತ್ತಾರೆ. ಕವಿಗಳು ಕಾರಣ ಇಲ್ಲಿರುವ ಅನೇಕ ಸಮಸ್ಯೆಗಳ ಮಧ್ಯೆಯೂ ದೇವರನ್ನು ಧರ್ಮದ ಆಚರಣೆಗಳನ್ನು ವೈಭವದಿಂದ ಆಚರಿಸುವ ಪರಿಗೆ ಕಾವ್ಯ ವೈಚಾರಿಕ ನೆಲೆಯನ್ನು ನೀಡುತ್ತದೆ ಹಾಗೂ ಆ ಮನಸ್ಸುಗಳ ದೌರ್ಬಲ್ಯವನ್ನು ಎತ್ತಿಹೇಳುತ್ತಿದೆ. ದೇವರೇ ನೀನು ಕೇವಲ ಗುಡಿಯಲ್ಲಿ ಕುಳಿತುಕೊಂಡು ಬೀಗುವ ಮೂರ್ತಿಯಾಗಬೇಕು. ಈ ಲೋಕದ ಎಲ್ಲ ಹಸಿದವರಿಗೆ ನೀನೊಂದು ಕಾಳಿನ ತುತ್ತಾಗಿ ಅವರ ಹಸಿವನ್ನು ನಿವಾರಣೆ ಮಾಡು, ಅವರ ಬದುಕಲ್ಲಿ ಬೆಳಕಾಗು, ನಾವು ಸಾರ್ಥಕತೆಯ ಮಾತನ್ನು ಮನುಷ್ಯರಿಗೆ ಮಾತ್ರ ಹೇಳುತ್ತೇವೆ. ಹಾಗೇ ಪುರಾಣಗಳಲ್ಲಿ ಹೇಳಿಸಿ, ಕೇಳಿಸಿದ್ದಾರೆ. ಆದರೆ ಸಮಕಾಲೀನ ಸಂದರ್ಭದಲ್ಲಿ ವೈಚಾರಿಕತೆಯ ಚಿಂತನೆಯ ಫಲವಾಗಿ ದೇವರಿಗೂ ಸಹಜ ಜನ್ಮ ಸಾರ್ಥಕವಾಗಿಸುವುದು ವಿಶೇಷವಾಗಿದೆ. ಮನುಷ್ಯ ತನ್ನ ತಾನೇ

ಕಾಳಾಗಿ, ತುತ್ತಾಗಿ ಮಾಡಿ ದೇವರನ್ನೇ ತಿನ್ನಲು ಹೇಳಿ ತನ್ನಂತೆ ಮನುಕುಲದ ಸಾವಿರಾರು ಜನರಿಗೆ ಹಸಿವನ್ನು ನಿವಾರಣೆ ಮಾಡಲು, ಸಾರ್ಥಕತೆಗೊಳಿಸಲು ಹೇಳುವುದು ಕಾವ್ಯದ ವಿಶಿಷ್ಟತೆ ಮತ್ತು ಆದರ್ಶವಾಗಿ ಕಾಣುತ್ತದೆ. ದೇವರೆ ನೀನೊಂದು ಖಡ್ಗವಾಗು ಎಲ್ಲಿ ಬಂಧಿತರ ಕತ್ತರಿಸಲು ಬಳಸುವ ಸಾಧನವಾಗು ಎಂದು ಕಾವ್ಯ ಹೇಳುತ್ತಿದೆ. ಇಲ್ಲಿಯವರಿಗೆ ನಾವು ದೇವರನ್ನು ನಾನಾ ರೂಪದಲ್ಲಿ ಆರಾಧಿಸುತ್ತಾ, ಪೂಜಿಸುತ್ತಾ ಬಂದಿದ್ದೇವೆ. ಆದರೆ ಇಲ್ಲಿ ಕಾವ್ಯ ತುತ್ತಾಗಲು, ಖಡ್ಗವಾಗಿಸುವುದು ಕಂಡುಬಂದಿದೆ. ಕತ್ತಲು ತುಂಬಿದ ಮನಗಳಿಗೆ ಬೆಳಕ ನೀಡು ಆ ಬೆಳಕು ಮನುಕುಲ ಒಂದೇ ಎನ್ನುವ ಬೆಳಕ ನೀಡು ಹಾಗೇ ಆ ಬೆಳಕಲ್ಲಿ ದೇವರನ್ನು ಕಾಣುತ್ತೇವೆ ಹೊರತು ಗುಡಿ, ಚರ್ಚೆ, ಮಸೀದಿಗಳಲ್ಲಿ ಅಲ್ಲ. ಹಾಗೇ ಈ ಲೋಕದಲ್ಲಿ ಬಿದ್ದಿರುವ "ಧೂಳನ್ನು ಜಾಡಿಸುವ ಕಸಬಾರಿಗೆಯಾಗು" ಎನ್ನುವುದು ಶಕ್ತಿಯುತ ರೂಪಕವಾಗಿದೆ. ದೇವರನ್ನು ಶಿಷ್ಯಕಾರದಲ್ಲಿ ಭಯ ಭಕ್ತಿಯಿಂದ ಆರಾಧಿಸುವ ವ್ಯವಸ್ಥೆಯನ್ನು ಧಿಕ್ಕರಿಸಿ ಪ್ರೀತಿಯಿಂದ ಬೀದಿಗೆ ತಂದು ಸಂವಾದ ನಡೆಸಿ ತಮಗೆ ಕಾಣುವ ಸಹಾಯ ಕೂಗುವ ರೀತಿಯಲ್ಲಿ ದೇವರನ್ನು ಕಾಣುವ ಮತ್ತು ದುಡಿಸಿಕೊಳ್ಳುವುದು ವಿಶೇಷವಾಗಿದೆ. ಈ ರೀತಿ ದೇವರು ಧರ್ಮ, ಮತಗಳು ಮನುಷ್ಯಾಕಾರ ದಿನರಾತ್ರಿ ಈ ಜಗತ್ತು ಹೊಸಹಗಲನ್ನು ಪಡೆಯುತ್ತಿದೆ. ಅದೇ ಕತ್ತಲಲ್ಲಿ ನಾವು ಮಂತ್ರಗಳ ಮೈಥುನದಿನಾರುವ ಗೂಡುಗಳಾಗುತ್ತೇವೆ. ಕುವೆಂಪು ಅವರ ಕಾವ್ಯದಲ್ಲಿ ವ್ಯಕ್ತಿಗೊಳ್ಳುವಂತೆ ದೇವರ ಧರ್ಮಗಳನ್ನು ಚಿತ್ರಗಳಲ್ಲಿಟ್ಟು ಅವುಗಳ ಸುತ್ತ ಮೂಢನಂಬಿಕೆಗಳನ್ನು ಬೆಳೆಸಿರುವುದನ್ನು ಸಹಿಸುವುದಿಲ್ಲ. "ದೇವರು ಸೆರೆಯಾಳ್ ದೇಗುಲ ಸೆರೆಮನೆ ಕಾವಲು ಪೂಜಾರಿ"[3] ಎಂದು ದೇವರನ್ನೇ ಸೆರೆಮನೆಗೆ ಹಾಕಿ ಆತ ಹೊರಡದಂತೆ ಕಾಯುತ್ತಿರುವುದನ್ನು ವಿಡಂಬಿಸುತ್ತಾರೆ.

ಮಾನವ ಬುದ್ಧಿಜೀವಿ ಅವನು ಬುದ್ಧಿಯುಳ್ಳ ಪ್ರಾಣಿಯಾಗಿರುವುದರಿಂದಲೇ ಸಂಘ–ಸಂಸ್ಥೆಗನ್ನು ಕಟ್ಟಿಕೊಂಡು ಸಾಮಾಜಿಕ ಜೀವಿಯಾಗಿರಲು ಸಾಧ್ಯವಾಯಿತು. ಆತನು ನಡೆಸುವ ಬದುಕೆ ಬುದ್ಧಿವಂತಿಕೆಯಿಂದ ಕೂಡಿರುವುದರಿಂದ ಮತ್ತು ತನ್ನ ವೈಚಾರಿಕ ಪ್ರಶ್ನೆಯ ಮೇಲೆ ಬಾಳನ್ನು ನಡೆಸಬೇಕಾಗಿರುವುದರಿಂದ ಆತನಲ್ಲಿ ವೈಚಾರಿಕತೆ ಮಾಡುವುದು ಸಹಜ. ಈ ವೈಚಾರಿಕತೆ ಇರುವುದರಿಂದಲೇ ಮಾನವ ಉಳಿದ ಪ್ರಾಣಿಗಳಿಗಿಂತ ಭಿನ್ನವೆನಿಸಿಕೊಳ್ಳುತ್ತವೆ. ಈ ವೈಚಾರಿಕ ಪ್ರಜ್ಞೆ ಮಾಡಿಸಿಕೊಂಡ ವ್ಯಕ್ತಿ ಯಾವುದೇ ಸಂಗತಿ ವಿಷಯವನ್ನು ಒಂದೇ ಬಾರಿಗೆ ಒಪ್ಪಲಾರ. ಅದರ ನಿಜಾಂಶಕ್ಕಾಗಿ ಅವನು ವಿಚಾರ ಶಕ್ತಿಯನ್ನು ಶ್ರಮಿಸುತ್ತಿರುತ್ತಾನೆ. ಇಂತಹ ವಿಚಾರ ಶಕ್ತಿಯನ್ನು ಪ್ರೇರೇಪಿಸುವ, ಆಹುತಿಯನ್ನು ಮೂಡಿಸುವ ಕೆಲಸ ಕಾವ್ಯ ಮಾಡುತ್ತಿದೆ. ಅನೇಕ ವೈಚಾರಿಕ ಅಂಶಗಳಲ್ಲಿ ಜ್ಞಾನವನ್ನು ಬಿತ್ತುತ್ತಿದೆ. ಪ್ರತಿಯೊಂದು ವಸ್ತುವನ್ನು ಕುರಿತು ಪ್ರಶ್ನಿಸುವುದು ವೈಚಾರಿಕತೆಯ ಉದ್ದೇಶವಾಗಿದೆ. ಧರ್ಮ, ದೇವರು, ಸಿದ್ಧಾಂತ, ಪ್ರೀತಿ, ಭಾಸ ಮಮಕಾರ ಎಲ್ಲವನ್ನು ಯಥಾವತ್ತಾಗಿ ಒಪ್ಪದೆ ಪ್ರಶ್ನಿಸುವ ಜಾಗೃತಿಯನ್ನು ಕಾವ್ಯ ಹೇಳುತ್ತದೆ. ಹಾಗೇ ಕಾವ್ಯವು ಸಹ ಪ್ರಶ್ನಿಸಿ ಒಂದು ವೈಚಾರಿಕ ನೆಲೆಗೆ ಬರುತ್ತಿದೆ. ಶಿವರಾಮಕಾರಂತರ ಈ ವೈಚಾರಿಕತೆಯ ಕುರಿತು ಈ ರೀತಿ ಹೇಳುತ್ತಾರೆ. "ಪರಂಪರೆಯಿಂದ ಸಾಗಿ ಬಂದಿರುವ

ಆಧ್ಯಾತ್ಮ, ಮತಧರ್ಮ, ಪಂಥ ಇವುಗಳಲ್ಲಿಯ ಮೌಢ್ಯ ಅರ್ಥರಹಿತವಾದ ವಿಧಿನಿಷೇಧಗಳು, ಮೌಢ್ಯ ನಂಬಿಕೆಗಳು ಮತ್ತು ಅಂಧ ಸಂಪ್ರದಾಯಗಳು ಇವೇ ಮುಂತಾದವುಗಳು ಮನುಷ್ಯನನ್ನು ಸಂಕುಚಿತಗೊಳಿಸುತ್ತವೆ. ಆದ್ದರಿಂದ ಈ ವಿಷಯಗಳನ್ನು ಕುರಿತು ವಿಶ್ಲೇಷಣೆ ಮಾಡಿ ಅವುಗಳಿಂದಾಗಿ ಮಾನವ ಪ್ರಗತಿಗೆ ಆಗಿರುವ ತೊಡಕನ್ನು ವಿಶದೀಕರಿಸಿ ಅವುಗಳ ಜಾಲದಿಂದ ಪುಟದೆದ್ದು ಹೊರಬರಲು ಪ್ರಚೋದನೆ ನೀಡುವಂಥ ಸಾಹಿತ್ಯವೇ ವೈಚಾರಿಕ ಸಾಹಿತ್ಯ".[೬] ಇಂಥ ಸಾಹಿತ್ಯದ ಅಂಶಗಳು, ನೆಲೆಗಳು ಸಮಕಾಲೀನ ಕನ್ನಡ ಕಾವ್ಯದಲ್ಲಿ ಕಾಣುತ್ತೇವೆ. ಆಧುನಿಕ ಸಂದರ್ಭದಲ್ಲಿ ಖಾಸಗೀಕರಣ, ಉದಾರೀಕರಣ, ರಾಷ್ಟ್ರೀಯತೆ, ಕೋಮುವಾದ, ಮತೀಯವಾದ ಮುಂತಾದ ವಿಷಯಗಳ ಕುರಿತ ವೈಜ್ಞಾನಿಕ ದೃಷ್ಟಿಕೋನ ತಾಳಿ ಅವುಗಳಿಂದಾಗುವ, ಅನಾನುಕೂಲಗಳ ಬಗ್ಗೆ ಎಚ್ಚರಿಕೆಯ ಮಾತುಗಳನ್ನು ಕಾವ್ಯ ಹೇಳಿದೆ. ಅವುಗಳಲ್ಲಿ ಜೀವ ವಿರೋಧಿ ಅಂಶಗಳು ಯಾವ ರೀತಿ ಮನುಷ್ಯನನ್ನು ಸಂರಚಿತಗೊಳಿಸಿ ಅಧಿಪತ್ಯಗೊಳಿಸುತ್ತವೆ ಎಂಬ ಜಾಗೃತಿಯನ್ನು ಹೇಳುತ್ತಿದೆ. ಹಾಗೇ ಅವುಗಳ ಜಾಲದಿಂದ ಮೌಲ್ಯಗಳು, ಸಂದರ್ಭಗಳು, ಯಾವ ರೀತಿಯಾಗಿ ನಾಶ ಹೊಂದಿದೆಂಬುದನ್ನು ತಿಳಿಸಿಕೊಟ್ಟ ಅದರಿಂದ ಬಿಡುಗಡೆ ಹೊಂದುವ ದಾರಿಗಳನ್ನು ಕಾವ್ಯ ಧ್ವನಿಸುತ್ತದೆ.

ಆಚಾರಗಳನ್ನು ವಿಚಾರ ಮಾಡದೆ ಮಾಡುವುದರಿಂದ ಅವು ಮನುಷ್ಯನ ಮನಸ್ಥಿತಿಯ ಮೇಲೆ ಪ್ರಖರವಾದ ಪ್ರಭಾವ ಬೀರುತ್ತದೆ. ಸೀಮಿತ ಮನಸ್ಥಿತಿಯನ್ನು ತಲುಪುವಂತೆ ಮಾಡುತ್ತದೆ. ಯಾರೋ ಹೇಳಿದರೆಂದು, ಕೇಳಿ ಮಾಡುವುದು ವೈಚಾರಿಕತೆಯ ಲಕ್ಷಣವಲ್ಲ. ಯಾವುದೇ ಆಚಾರವನ್ನು ವಿಚಾರ ಮಾಡಿ ಪ್ರಶ್ನಿಸಿ, ಚರ್ಚೆ ತನ್ನದಾಗಿಸಿಕೊಳ್ಳಬೇಕು. ಇದಾದ ಕಾರಣಕ್ಕಾಗಿಯೇ ಮತ, ಧರ್ಮ ದೇವರುಗಳ ವಿಷಯಗಳು ವೈಚಾರಿಕತೆಯಿಂದ ದೂರ ಉಳಿದಿವೆ ಹಾಗೂ ಮತ ಧರ್ಮದ ವಿಷಯಗಳು ಮನುಷ್ಯ ಮನಸ್ಥಿತಿಯನ್ನು ಆಳುತ್ತಿವೆ. ಪಾಪ-ಪುಣ್ಯ, ಶ್ರೇಷ್ಠ-ಕನಿಷ್ಠತೆಯ ಮಾಪನಗಳು ಹುಟ್ಟಿಕೊಂಡಿವೆ. ವಿಚಾರ ಮಾಡದೆ ಆಚರಿಸುವ ಸಂಪ್ರದಾಯಗಳ ಕುರಿತು ಕವಯಿತ್ರಿ ಡಾ. ಮುಮ್ತಾಜ್ ಬೇಗಂ ಅವರ ಕವಿತೆಯ ಸಾಲಾದ

ಕಪ್ಪನ್ನಿನೊಳಡಗಿಸುವ ಮುನ್ನ
ಒಬ್ಬರ ಸ್ಥಾನ ನೋಡಬೇಕಿದೆ ಒಮ್ಮೆ
ಸತ್ತಾಗ ಮಾಡುವರು ದಫನ್
ಹೆಣವಾದಾಗ ಇರದ ಅಂತರ
ಜೀವಂತವಿರುವಾಗ ಪರತಂತ್ರ[೭]

ಕವಯಿತ್ರಿ ಇಲ್ಲಿ ಮುಸ್ಲಿಂ ಸಮುದಾಯದಲ್ಲಿ ಮುಸ್ಲಿಂ ಧರ್ಮದಲ್ಲಿರುವ ಆಚಾರದ ಕುರಿತು ಮಾತನಾಡುತ್ತಾರೆ. ಅಲ್ಲಿ ಆತುರದಿಂದಾಗುವ ಮಹಿಳೆಯ ಅಪಮಾನ ಶೋಷಣೆಯ ಕುರಿತು ಪ್ರಶ್ನಿಸುತ್ತಾರೆ. ಮುಸ್ಲಿಂ ಧರ್ಮದಲ್ಲಿ ಹೆಣ್ಣನ್ನು ತುಂಬಾ ಕೀಳಾಗಿ ಭಾವಿಸುವ ಪರಂಪರೆಯನ್ನು ಕವಯಿತ್ರಿ ಧಿಕ್ಕರಿಸಿದ್ದಾರೆ. ಆ ಧರ್ಮದಲ್ಲಿ ಖಬರಸ್ಥಾನ ಅಂದರೆ ಸ್ಮಶಾನದಲ್ಲಿ

ಹೆಣ್ಣಿಗೆ ಪ್ರವೇಶವಿಲ್ಲ. ಹಾಗೇ ಮಸೀದಿಗಳಲ್ಲಿ ಹೆಣ್ಣಿಗೆ ಪ್ರವೇಶ ನಿಷೇಧ ಮಾಡಲಾಗಿದೆ. ಇದು ಆ ವೈಜ್ಞಾನಿಕತೆಯನ್ನು ತೋರಿಸುತ್ತದೆ ಎಂದಿದ್ದಾರೆ. ಜೀವ ಹೋದಾಗ ಖಬರಸ್ಥಾನದಲ್ಲಿ ಹೆಣ್ಣನ್ನು ಊಳುತ್ತೀರಿ. ಜೀವಂತವಿದ್ದಾಗ ಯಾಕೆ ದೂರ ಇಡುತ್ತೀರಿ ಎಂದು ಪ್ರಶ್ನಿಸುತ್ತಾಳೆ. ಇದೇ ವೈಚಾರಿಕ ಚಿಂತನೆಯಾಗಿದೆ. ಯಾವುದೇ ಸಂಪ್ರದಾಯಸ್ಥ ಮೂಲಭೂತ ಮನಸ್ಥಿತಿಯ ಮನಸ್ಸುಗಳು ಮಾಡಿದ ನಿಯಮಗಳನ್ನು ವಿಚಾರ ಮಾಡದೆ ಯಥಾವತ್ತಾಗಿ ಅನುಸರಿಸುವುದು ಸರಿಯಲ್ಲ. ಅದನ್ನು ತರ್ಕಬದ್ಧವಾಗಿ ಚರ್ಚಿಸಿ, ವಿಚಾರಿಸಿ ಒಂದು ವೈಚಾರಿಕ ನಿಲುವಿಗೆ ಜೀವಪರ ಕಾಳಜಿಗೆ ಬರಬೇಕು ಎಂದು ಕವಿತೆಯಲ್ಲಿ ವ್ಯಕ್ತಪಡಿಸಿರುವುದು ಕಾಣುತ್ತೇವೆ. ವಾಸ್ತವವಾಗಿ ಧರ್ಮದ ಮೂಲ ಉಗಮ ಇರುವುದೇ ಆಧ್ಯಾತ್ಮದಲ್ಲಿ ಒಂದಲ್ಲ ಒಂದು ರೂಪದಲ್ಲಿ ಮಾನವ ಆಂತರಿಕ ಅಭಿಪ್ರಾಯ ಎಲ್ಲಾ ಧರ್ಮದ ತಾಯಿ ಬೇರು. ಆದರೆ ಅದು ಬೆಳೆಯುತ್ತಾ ಪರಿಸರಕ್ಕನುಗುಣವಾಗಿ ವಿವಿಧ ಬಣ್ಣಗಳನ್ನು ತಳೆಯುತ್ತದೆ. ಆಂತರಿಕ ವಿಕಾಸಕ್ಕೆ ಸಹಾಯಕವಾಗುವಂತೆ ಮತ್ತು ಆ ಅನುಭವಗಳ ರಕ್ಷಣೆಗಾಗಿ ಕೆಲವು ಆಚಾರ-ವಿಚಾರಗಳ ಮೆಟ್ಟಿಲುಗಳನ್ನು ಸಂಪ್ರದಾಯಗಳ ಬೇಲಿಯನ್ನು ನಿರ್ಮಿಸಿಕೊಳ್ಳುತ್ತದೆ. ಧರ್ಮ ಜಾತಿಯಲ್ಲಿನ ಮೇಲುಕೀಳು, ಅಂಧಶ್ರದ್ಧೆ, ಆಚಾರ, ಮೂಢನಂಬಿಕೆಗಳು, ವಿಪರ್ಯಾಸಗಳ ಇವುಗಳ ಕುರಿತು ಸಮಕಾಲೀನ ಕಾವ್ಯ ಖಚಿತವಾದ ಧೋರಣೆಯನ್ನು ತಾಳುತ್ತದೆ. ನಿರ್ದಿಷ್ಟವಾಗಿ ಅವುಗಳನ್ನು ಖಂಡಿಸುತ್ತದೆ.

ಮತ ಧರ್ಮದ ಹೆಸರಲ್ಲಿ ನಡೆಯುತ್ತಿರುವ ದುರಂತಗಳನ್ನು, ಮೌಢ್ಯಗಳನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ಚಿತ್ರಿಸುತ್ತಿದೆ. ಹಾಗೇ ಅದರಿಂದಾಗುವ ಅನಾನುಕೂಲಗಳು, ಗಲಭೆಗಳು, ರಕ್ತಪಾತಗಳ ಅಸಮಾನತೆಯ ನೋಟಗಳನ್ನು ಸಹ ಅಭಿವ್ಯಕ್ತಿಸುತ್ತದೆ. ಈ ಮೌಢ್ಯಗಳು ಪೋಷಿಸುವ ಮನಸ್ಥಿತಿಯನ್ನು ಅದಕ್ಕೆ ಪ್ರೇರಣೆ ನೀಡುವ ಪ್ರೇರಣಾ ಅಂಶಗಳು ಯಾವುವು ಎಂಬುದನ್ನು ಕಾವ್ಯ ಹೇಳುತ್ತಿದೆ. ಕೊನೆಗೆ ಆ ದುರಂತಗಳಿಂದ ದೂರವಾಗಿ ವೈಚಾರಿಕ ನೆಲೆಯಲ್ಲಿ ಚಿಂತಿಸಲು ಜೀವಿಸಲು ಸಮ್ಮತಿ ನೀಡುತ್ತಿದೆ. ಭೂತಕಾಲದಲ್ಲಿದ್ದ ಸಂಪ್ರದಾಯಗಳು ಇಂದು ಬದಲಾದರೂ ಕೆಲವು ಇನ್ನು ಜೀವಂತವಾಗಿ ಉಳಿಸಿಕೊಂಡಿವೆ. ಇಂದು ತಂತ್ರಜ್ಞಾನದಲ್ಲಿ ಆಧುನಿಕ ಜಗತ್ತಿನಲ್ಲಿ ಮಾತನ್ನು ತನ್ನ ಅಧಿಪತ್ಯವನ್ನು ಸಾಧಿಸುತ್ತಿದೆ. ದೇವರು, ಧರ್ಮಗಳು, ನಂಬಿಕೆಗಳನ್ನು ಯಾವುದೇ ರೀತಿಯಲ್ಲಿ ಯೋಚನೆ ಮಾಡದೆ ನಂಬಿಕೊಂಡು ಆಚರಿಸುತ್ತಾ ಬರುವ ಮನಸ್ಸುಗಳ ಕುರಿತು ಅಂತ ಮನಸ್ಥಿತಿಯಿಂದಾಗುವ ದುರಂತಗಳ ಕುರಿತು ಕಾವ್ಯ ಮಾತನಾಡುತ್ತಿದೆ. ಆಧ್ಯಾತ್ಮರ ಹೆಸರಲ್ಲಿ ಜಾತಿ ಮತಗಳೊಡನೆ ಹೊಂದಾಣಿಕೆ ಮಾಡಿಕೊಳ್ಳಲು ಮತವಾದಿಗಳು ಸಮರ್ಥ ಸಿದ್ಧರಿಲ್ಲ. "ಅಜ್ಞಾನ ಜನ್ಯವಾದ ಮತ ಭಾವನೆ ನಮ್ಮ ಚಿರಂತನವಾದ ಆಧ್ಯಾತ್ಮವನ್ನು ಆವರಿಸಿ ಸಮಾಜವನ್ನು ವರ್ಣ, ಜಾತಿ, ಪಥ, ಕೋಮುಗಳೆಂದು ಛಿದ್ರ ಛಿದ್ರವಾಗಿ ಮಾಡಿರುವುದು ತಮ್ಮ ಧಾರ್ಮಿಕ ದುರಂತವೆಂಬುದನ್ನು ಪ್ರಬಲವಾಗಿ ಪ್ರತಿಪಾದಿಸುತ್ತಾರೆ. ಈ ಭೇದ ಭಾವನೆಗಳು ಛಿದ್ರಗಳು ಎಲ್ಲಿಯವರೆಗೆ ಇರುತ್ತವೆಯೋ ಅಲ್ಲಿಯವರೆಗೆ ನಿಜವಾದ ಸಮಾನತಾ ಭಾವನೆ

ಪ್ರಜಾಸತ್ತ ಬರಿಯ ಮರು ಮರೀಚಿಕೆಯ ಭ್ರಾಂತಿಜಲವಾಗುತ್ತದೆ".[೮] ಅಜ್ಞಾನ ತುಂಬಿದ ಆಲೋಚನೆಗಳು, ವಿಚಾರಗಳು, ಆಚಾರಗಳು ಯಾವತ್ತು ಸಮಾನತೆಯನ್ನು ಬಯಸುವುದಿಲ್ಲ. ಅವು ಧರ್ಮ ಧರ್ಮಗಳ ಮಧ್ಯೆ ವ್ಯತ್ಯಾಸ ಮತ್ತು ಯಾವತ್ತು ಮುಕ್ತಿ ವೈಚಾರಿಕತೆಗೆ ತಮ್ಮ ಮನಸ್ಥಿತಿಯನ್ನು ತೆರೆದುಕೊಳ್ಳುವುದಿಲ್ಲ. ಇಂದಿನ ದಿನಮಾನಗಳಲ್ಲಿ ಜಾತಿ ಸಂಘಟನೆಗಳು ಒಗ್ಗೂಡುವ ರೀತಿ ಬದಲಾಗಿದೆ. ಸಂವಿಧಾನಾತ್ಮಕ ನಿಲುವಿನಂತೆ, ತಳಸಮುದಾಯಗಳು, ಸಣ್ಣ ಸಣ್ಣ ಜಾತಿಗಳು ತಮ್ಮ ಅಭಿವೃದ್ಧಿಗಾಗಿ, ಅಸ್ಮಿತೆಗಾಗಿ ಸಂಘಟನೆ ಬೇಕೆಂದು ಆಶಿಸುತ್ತದೆ. ಆದರೆ ಇಂದು ಸಣ್ಣ ಸಣ್ಣ ಸಮುದಾಯಗಳು ಒಗ್ಗೂಡುತ್ತಾ ಒಂದು ನಿರ್ಬಂಧಿತ ಚೌಕಟ್ಟನ್ನು ಹಾಕಿಕೊಳ್ಳುತ್ತಿರುವುದು ಹಾಗೂ ಅದೇ ಒಂದು ಶಕ್ತಿಯನ್ನಾಗಿ ಪ್ರದರ್ಶಿಸಿ ಇನ್ನೊಂದು ಸಮುದಾಯದ ಮೇಲೆ ತನ್ನ ಪ್ರಬಲ ಶಕ್ತಿ ಪ್ರದರ್ಶ ಮಾಡುವ ದುರಂತ ಸ್ಥಿತಿಗೆ ತಲುಪಿವೆ. ಇದೇ ಅಪಾಯಕಾರಿ. ವೈಚಾರಿಕ ಚಿಂತನೆ ಇಲ್ಲದೇ ಹೋದರೆ ಸಾಂಸ್ಥಿಕ ಭಾವನೆ ಇಲ್ಲದೆ ಹೋದರೆ, ಸಿನಿಕ್‌ವಾದ ಭಾವನೆ ಮೂಲೆ ಗುಂಪು ಗುಂಪುಗಳಾಗಿ ಕಲಹಕ್ಕೆ ದಾರಿಯಾಗುತ್ತದೆ. ಒಂದು ಇನ್ನೊಂದರ ಮಧ್ಯೆ ಸೌಹಾರ್ದ ಬಾರದೆ ಕಲಹಗಳಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಕುವೆಂಪು ಹೇಳಿದಂತೆ ಹಳೆ ಮತದ ಕೊಳೆ ಮಾತು ಕೊಟ್ಟು ಹೋಗಬೇಕು. ಮತ ಅಳಿದು ಆಧ್ಯಾತ್ಮ ಉಳಿಯಬೇಕು ಎಂಬುದು ಕುವೆಂಪು ಅವರ ನಿಲುವಾಗಿತ್ತು.

ಕಾವ್ಯಕ್ಕೆ ಚರಿತ್ರೆಯನ್ನು ಬದಲಾಯಿಸುವ, ಮನುಷ್ಯರಲ್ಲಿ ಮಾನವೀಯತೆಯನ್ನು ತುಂಬುವ ಶಕ್ತಿ ಇದೆ. ಹಾಗೇ ಸಮಾಜದಲ್ಲಿನ ಘಟನಾವಳಿಗೆ ಧ್ವನಿಯಾಗಿ, ವೈಚಾರಿಕ ಜಾಗೃತಿಯನ್ನು ಮೂಡಿಸುವ ಗುಣವು ಇದೆ. ಆ ಗುಣದಿಂದಲೇ ಇಂದು ಅನೇಕ ದಾರ್ಶನಿಕ ಕವಿಗಳು, ಚಿಂತಕರು, ಸುಧಾರಕರು, ಸಮಾಜ ಸುಧಾರಣೆ, ಮೌಢ್ಯತೆ ನಿವಾರಣೆಗೆ ದಾರಿ ಹೇಳಿಕೊಟ್ಟಿದ್ದಾಗಿದೆ. ಹಾಗೇ ಸಾಹಿತ್ಯದ ಮೂಲಕ ಕಾವ್ಯದ ಮೂಲಕ, ಚಳುವಳಿಯ ಮೂಲಕ ಸಾಮಾಜಿಕ ಜಾಗೃತಿಯನ್ನು ಮೂಡಿಸಿರುವುದು ಕಾಣುತ್ತೇವೆ. ಚಳುವಳಿಯ ಸಂದರ್ಭದಲ್ಲಿ ಕವಿತೆ, ಕಾವ್ಯ, ಹಾಡುಗಳ ಮೂಲಕ ಸಾಮಾಜಿಕ ಪ್ರಶ್ನೆಯನ್ನು ಮೂಡಿಸಿದ ಕೀರ್ತಿ ಕಾವ್ಯಕ್ಕೆ ಇದೆ. ಜಗತ್ತಿನ ಅನೇಕ ಕ್ರಾಂತಿಗಳಿಗೆ, ವಿಚಾರ ವಿಮರ್ಶೆಗೆ ಕಾವ್ಯಸ್ಫೂರ್ತಿ ಮತ್ತು ಪ್ರೇರಣೆಯ ನೀಡಿದೆ. ಅದರಂತೆ ಇದು ಜಾಗತೀಕರಣ ಸಂದರ್ಭದಲ್ಲಿ ಮತ ಧರ್ಮದ ಅಂಧಚಾರಗಳ ಕುರಿತು ಸಮಕಾಲೀನ ಕಾವ್ಯ ಜಾಗೃತಿಯನ್ನು ಮೂಡಿಸುತ್ತದೆ. ಮತಗಳ ಕುರಿತು ಧರ್ಮ ದೇವರುಗಳ ಕುರಿತು ನಾಡು-ನುಡಿ, ಭಾಷೆ, ಜಲ, ಭೂಮಿ ಇವುಗಳ ಕುರಿತು ಸೈನಿಕರಾಗದಂತೆ ವೈಚಾರಿಕ ಚಿಂತನೆಯನ್ನು ಭಿತ್ತಿ, ಅವುಗಳ ಕುರಿತಾದ ಪೂರ್ವಾಗ್ರಹಗಳನ್ನು ದೂರ ಮಾಡುವಲ್ಲಿ ಕಾವ್ಯ ಸಹಕಾರಿಯಾಗಿದೆ. ಸಮಾಜದಲ್ಲಿ ನಡೆಯುವ ಅನೇಕ ಕಂದಾಚಾರಗಳು ವಾಮಾಚಾರಗಳು, ಸಮಸ್ಯೆಗಳ ಕುರಿತು ವೈಚಾರಿಕ ಧ್ವನಿ ಎತ್ತಿದೆ. ಉದಾಹರಣೆಗೆ ಪ್ರಾಣಿ ಹಿಂಸೆಗೆ ಸಂಬಂಧಿಸಿದಂತೆ ಜಾತೀಯತೆಗೆ ಸಂಬಂಧಿಸಿದಂತೆ, ಮಡಿಸ್ನಾನದ ಕುರಿತಂತೆ, ಪೂಜೆ, ನೈವೇದ್ಯ ಹೀಗೆ ಹಲವು ಧಾರ್ಮಿಕ ಆಚರಣೆಗಳ ಕುರಿತು ಪ್ರಜ್ಞೆಯನ್ನು ಮೂಡಿಸಿ ಅವುಗಳಿಂದ ಹೊರಬರುವ ದಾರಿಯನ್ನು

ಹೇಳುತ್ತಿದೆ. ಕಾವ್ಯ ಕೇವಲ ಕಾವ್ಯವಾಗದೆ ಅದರಲ್ಲಿ ಪ್ರೀತಿ ಇದೆ, ಕ್ರಾಂತಿ ಇದೆ, ಜ್ಞಾನ ಇದೆ, ವೈಚಾರಿಕತೆಯ ಬೆಳಕು ಇದೆ. ಸಾಮಾಜಿಕ ಕಾಳಜಿ ಮಾತ್ರ ಪ್ರಜ್ಞೆ ಇದೆ. ಧರ್ಮ ಮತ್ತು ಮತದ ಕುರಿತಾಗಿ ಹೊಸ ಆಲೋಚನೆಗಳ ಹೊಸ ಚಿಂತನೆಗಳು ಇವೆ. ಸೀಮಿತ ಚೌಕಟ್ಟನ್ನು ಮುರಿದು ಹೊಸ ಬೆಳಕನ್ನು ಕಾಣುವ ರೀತಿ ಹೇಳುತ್ತಿದೆ.

ಇದುವರೆಗೆ ಮತಧರ್ಮದ ಕುರಿತಾಗಿ ಕಾವ್ಯ ತಾಳಿದ ವೈಚಾರಿಕ ಚಿಂತನೆಗಳನ್ನು ನೋಡಲಾಯಿತು. ಜಾತಿ, ಮತ, ಹೆಸರಲ್ಲಿ ಮೇಲುಕೀಳು, ಅಂಧಶ್ರದ್ಧೆ, ಆಚಾರ, ಮೂಢನಂಬಿಕೆ, ವಿಪರ್ಯಾಸಗಳ ಇವುಗಳ ಕುರಿತು ಹೊಸ ಅರ್ಥ ಬರೆದಿದ್ದ ನೋಡಲಾಯಿತು. 'ಹಳೆ ಮತದ ಕೊಳೆಯಲ್ಲಿ ಹೊಸಮತಿಯ ಹಳೆಯಲ್ಲಿ ಕೊಚ್ಚಿ ಹೋಗಲಿ ಬರಲಿ ವಿಜ್ಞಾನ ಬುದ್ಧಿ' ಎನ್ನುವ ಕುವೆಂಪು ಮಾತಿನಂತೆ ಸಂಪ್ರದಾಯಸ್ಥ ಧರ್ಮ, ಮತ ನಾಶವಾಗಿ ವೈಚಾರಿಕತೆಯ ಮನುಜ ಮತ ಬರಲಿ, ಅಲ್ಲಿ ಅಂಧ ಸಂಪ್ರದಾಯದ ಬೆಳಕು ದೂರವಾಗಿ ವಿಜ್ಞಾನದ ವೈಚಾರಿಕತೆಯ ಬೆಳಕು ಮಾಡಬೇಕು ಎನ್ನುವ ಆಶಯದಂತೆ ಸಮಕಾಲೀನ ಕಾವ್ಯದಲ್ಲಿ ವಿಜ್ಞಾನ, ವೈಚಾರಿಕ ಬೆಳಕು ಮಾಡುತ್ತಿರುವುದು ಕಂಡುಬಂದಿದೆ.

### ೭.೨. ವಿಶ್ವಮಾನವ ಪ್ರಜ್ಞೆ

ಸಮಕಾಲೀನ ಕನ್ನಡ ಕಾವ್ಯ ಅಂತರಂಗದ ತಳಮಳಗಳ ಜೊತೆಗೆ ಪ್ರೀತಿ, ಪ್ರೇಮದ ಸವಿಯನ್ನು ನೀಡಿದೆ. ಹಾಗೇ ಸಮಕಾಲೀನ ಸಮಸ್ಯೆಗಳನ್ನು ವಿಶಿಷ್ಟ ನುಡಿಗಟ್ಟಿನಲ್ಲಿ ಚಿತ್ರಿಸುವುದರ ಜೊತೆಗೆ ಅವುಗಳನ್ನು ಮೀರಿ ವಿಶ್ವಮಾನವ ಪ್ರಜ್ಞೆಯನ್ನು ಸಹ ಅಭಿವ್ಯಕ್ತಿಸುತ್ತಿದೆ. ಇಡೀ ಮನುಕುಲವೆಲ್ಲ ಒಂದೇ ಈ ಜಾತಿ ಧರ್ಮ, ಲಿಂಗ ಮತಗಳನ್ನೆಲ್ಲ ದೂರ ಮಾಡಿ ಮನುಜ ಮತದ ಹಾಡನ್ನು ಹಾಡಲು ಮುಂದಾಗಿದೆ. ವಿಶ್ವಮಾನವ ಮಹಾಮೇರುವಾಗಿ ಬೆಳೆದ, ಅದಮ್ಯ ಸಮಷ್ಠಿ ಪ್ರಜ್ಞೆಯನ್ನಾಗಿಸುವ ಪ್ರಯತ್ನದಲ್ಲಿ ಕಾವ್ಯ ತೊಡಗಿದೆ. ಜಗತ್ತಿನ ನಾನಾ ಭಾಗದಿಂದ ಜ್ಞಾನ ಪಡೆದು, ಅರಿತುಕೊಂಡು ಸಮಕಾಲೀನ ಕವಿಗಳಾದ ಆರೀಫರಾಜ್, ವೀರಣ್ಣ ಮಡಿವಾಳರ, ಅಂಕುರ ಬೆಟಗೆರೆ, ಕಾರ್ಪೆಂಟರ, ಲಕ್ಕೂರ ಆನಂದ, ಎಸ್. ಮಂಜುನಾಥ, ಅನುಪಮಾ ಎಚ್.ಎಸ್., ಎಚ್.ಎಲ್. ಪುಷ್ಪ, ತಾರಿಣಿ ಶುಭದಾಯಿಣಿ ಮುಂತಾದವರು ವಿಶ್ವಮಾನ ಸಮಷ್ಠಿ ಪ್ರಜ್ಞೆಯನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿ ಕರೆನೀಡಿದಂತಿದೆ. ಈ ವಿಶ್ವಮಾನವ ಸಂದೇಶ ಕೇವಲ ಕಲ್ಪನೆ ಅಲ್ಲ, ಅವರು ಜೀವನದ ಉದ್ದಕ್ಕೂ ಸಾಧನೆಯ ಬಲದಿಂದ ಬೆಳದು ಬರುವ ಜೀವಂತ ಶಕ್ತಿಯಾಗಿಸುತ್ತಿದ್ದಾರೆ. ಇಂಥ ವೈಚಾರಿಕ ಪ್ರಜ್ಞೆಯಿಂದ ವಿಶ್ವಮಾನವ ಪ್ರಜ್ಞೆ ಮೂಡಿಸಿದ ಕುವೆಂಪುರವರ ಸಂದೇಶವನ್ನು ಸಮಕಾಲೀನ ಕಾವ್ಯ ಅನುಸರಿಸಿ ಅಳವಡಿಸಿಕೊಂಡು ಅದರ ಜೀವಂತಿಕೆಗಾಗಿ ಮಿಡಿಯುತ್ತಿದೆ. ಸಮಕಾಲೀನ ಜಾಗತಿಕ ಮಟ್ಟದಲ್ಲಿ ನಾವುಗಳು ಎಷ್ಟೇ ಆಧುನಿಕವಾಗಿ ಬದುಕುತ್ತಿದ್ದರೂ ಮತೀಯವಾದ ಅಷ್ಟೇ ಗಟ್ಟಿಯಾಗುತ್ತಿದೆ. ಈ ಮತೀಯವಾದ ದೂರ ಮಾಡಲು ವೈಚಾರಿಕ ಪ್ರಜ್ಞೆ ಮೂಡಿಸಲು ವಿಶ್ವಮಾನವ ಸಂದೇಶ ಸಾರಲು ಬಯಸುತ್ತಿದೆ. ತನ್ನ ತಾತ್ವಿಕ ನಿಲುವು ಎಂದು ಕೂಗಿ ಹೇಳಿದಂತಿದೆ. ಇಂದೂ

ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಹಾಕಿಕೊಳ್ಳುತ್ತಿರುವ ನಾವುಗಳು ಇವೆಲ್ಲದಕ್ಕೂ ಮೂಲಭೂತವಾದ ಒಂದು ಅಂಶದ ಕಡೆ ಗಮನಸೆಳೆಯಬೇಕಿದೆ: ಆದರ ನಾವು ಎಷ್ಟೇ ಕಾರ್ಖಾನೆಗಳು ಕಟ್ಟಲಿ ಎಷ್ಟೇ ನದಿಗಳಿಗೆ ಅಡ್ಡಕಟ್ಟೆಯನ್ನೆ ಹಾಕಲಿ, ಏನೆಲ್ಲ ಶೋಧನೆ ಮಾಡಲಿ, ಎಷ್ಟೇ ವಿದ್ಯುತ್‌ಶಕ್ತಿ ಉತ್ಪಾದಿಸಲಿ, ತಂತ್ರಜ್ಞಾನದ ಅಧಿಕ ಬಳಕೆ ಮಾಡಿಕೊಂಡು ಹೊಸ ಹೊಸ ಆವಿಷ್ಕಾರ ಮಾಡಲಿ, ಇದನ್ನೆಲ್ಲಾ ಬಳಸಿಕೊಳ್ಳುವ ವ್ಯಕ್ತಿಗಳನ್ನು, ವ್ಯಕ್ತಿತ್ವವನ್ನು ಸತ್ವಪೂರ್ಣರನ್ನಾಗಿ ಮಾಡದಿದ್ದರೆ, ಚಿಂತನೆಯಲ್ಲಿ ನಡೆಸದಿದ್ದರೆ ಆ ವಿದ್ಯುತ್‌ಶಕ್ತಿಯನ್ನು ಬಳಸುವ ವ್ಯಕ್ತಿಯ ಮನಸ್ಸಿನ ಚಚ್ಚಕ್ಕಿ. ಅದು ನೀರಿನ ಶಕ್ತಿ, ಇದು ಮನಸ್ಸಿನ ಶಕ್ತಿ ಈ ಶಕ್ತಿಯನ್ನು ನಾವು ಉದ್ದೀಪನ ಮಾಡದಿದ್ದರೆ, ಅದನ್ನು ಸರಿಯಾದ ದಾರಿಯಲ್ಲಿ ಹೋಗುವಂತೆ ರಚಿಸದಿದ್ದರೆ. ಅದಕ್ಕೆ ಕಾಂತಿಯನ್ನು ಕೊಡದಿದ್ದರೆ ಅವೆಲ್ಲವೂ ನಿಷ್ಪ್ರಯೋಜಕ ಎಂಬ ಭಾವನೆ ತಾಳಿದಂತಿವೆ. ಅದರ ಅಧ್ಯಯನವನ್ನು ಪರಿಹರಿಸದಿದ್ದರೆ ಅದಕ್ಕೆ ತೇಜಸ್ಸನ್ನು ದಾನ ಮಾಡದಿದ್ದರೆ ನಾವು ಉತ್ಪಾದನೆ ಮಾಡಿದ ವಿದ್ಯುತ್‌ಶಕ್ತಿ ದುರ್ವ್ಯಯವಾಗುತ್ತದೆ. ಆದರಿಂದ ಜೀವನ ಅಸಾರ್ಥಕವಾದೀತು. ಇಂತ ಮುಂತಾದ ನಿಲುವುಗಳು ಸಾಮಾಜಿಕ ಯೋಜನೆಗಳ ಜೊತೆಗೆ ವೈಯಕ್ತಿಕ ಸಾಧನೆಯೂ ಅಗತ್ಯವೆಂಬುದನ್ನು ಒತ್ತಿ ಹೇಳುತ್ತಿದೆ ಕಾವ್ಯ. ಎಷ್ಟೇ ಸೌಲಭ್ಯವಿದ್ದರೂ ವ್ಯಕ್ತಿಯ ಕುರಿತಾದ ಮನುಷ್ಯತ್ವ ಬಾರದೆ ಹೋದರೆ, ವಿಶ್ವಮಾನ ಪ್ರಜ್ಞೆ, ಸರ್ವರೂ ಸಮಾನರು, ಸಹೋದರರು ಬಂಧುಗಳು ಎಂಬ ಭಾವನೆ ತಾಳದೆ ಹೋದರೆ ನಾವೆಷ್ಟೇ ಆಧುನಿಕ ತಂತ್ರಜ್ಞಾನದಲ್ಲಿ ಮುಂದುವರೆದರೂ ಅದು ಮಾನವೀಯತೆಗೆ ವಿರುದ್ಧವಾದದ್ದು ಎಂದು ಕಾವ್ಯ ಹೇಳುತ್ತಿದೆ.

ಸಮಕಾಲೀನ ಸಂದರ್ಭದಲ್ಲಿ ಕೆಲವು ಜ್ಞಾನಶಾಖೆಗಳು ಕೆಲವು ಧರ್ಮ, ಜಾತಿಗೆ ಮೀಸಲಾಗಿಸಿಕೊಳ್ಳಲಾಗಿದೆ.. ಹಾಗೇ ಅವೇ ಜ್ಞಾನಗಳ ವಾರಸುದಾರಿಕೆಯನ್ನು ಹೊಂದಿವೆ. ಅಂತಹ ವಾರಸುದಾರಿಕೆಯನ್ನು ಮುರಿದ ಜ್ಞಾನ, ವಿದ್ಯೆಯನ್ನು ವಿಶ್ವವಿದ್ಯೆಯನ್ನಾಗಿಸುವುದು ವಿಶ್ವಮಾನವತೆಯ ಸಾರವಾಗಿದೆ. ವಿಶ್ವವಿದ್ಯೆ ಎಂದು ನಾವು ಯಾವುದನ್ನು ಕರೆಯುತ್ತೇವೆಯೋ ಅದು ಜನಸಾಮಾನ್ಯರಿಗೆಲ್ಲಾ ಬೆಳಕಾಗಬೇಕು. ಆ ಬೆಳಕನ್ನು ಎಲ್ಲಾ ಮನುಷ್ಯರು ಪಡೆಯಬೇಕು ಎಂದು ಕಾವ್ಯಹೇಳುತ್ತಿದೆ. ವಿಶ್ವಜ್ಞಾನ, ವಿದ್ಯೆಯಿಂದ ಜನತೆಯ ವಿಶ್ವಪ್ರಜ್ಞೆ ಮೂಡುತ್ತದೆ. ಜಗತ್ತೆಲ್ಲಾ ಒಂದಾಗುತ್ತಿರುವ ಸಮಯ ಹತ್ತಿರವಾಗುತ್ತಿದೆ. ಈ ವಿಶ್ವವಿದ್ಯೆ ಇದರಿಂದ ಉಂಟಾಗುವ ವಿಶ್ವಪ್ರಜ್ಞೆ, ಅದರಿಂದ ಉಂಟಾಗುವ ವಿಶ್ವಮೈತ್ರಿ ಇದು ಎಲ್ಲಕ್ಕಿಂತಲೂ ಅತ್ಯಂತ ಅವಶ್ಯಕವಾಗಿದೆ. ಎಲ್ಲ ಶಕ್ತಿಗಳಿಗಿಂತಲೂ ಅತ್ಯಂತ ಅವಶ್ಯಕವಾಗಿರುವ ಶಕ್ತಿ ನಮ್ಮ ಪ್ರಪಂಚವನ್ನು ಬದುಕಿಸುವ ಶಕ್ತಿ ವಿಶ್ವಮೈತ್ರಿ, ಈ ವಿಶ್ವವಿದ್ಯೆಯಿಂದ ವಿಶ್ವಪ್ರಜ್ಞೆ ಅದರಿಂದ ಈ ವಿಶ್ವಮೈತ್ರಿ ಇದರಿಂದ ವಿಶ್ವಮಾನವತೆ ಬೆಳೆಯುತ್ತದೆ. ಅಂಥ ವಿಶ್ವಮೈತ್ರಿಯುನ್ನು ಪಡೆದ ಮಾನವ ವಿಶ್ವಮಾನವ ಇಂಥ ವಿಶ್ವಮಾನವನನ್ನಾಗಿಸಲು ಕಾವ್ಯ ಹಂಬಲಿಸುತ್ತಿದೆ ಹಾಗೇ ವಿಶ್ವಮಾನವತೆಗೆ ಕರೆ ನೀಡಿದೆ. ಧರ್ಮ, ಜಾತಿ, ದೇಶ, ಭಾಷೆಗಳ ಹೆಸರಲ್ಲಿ ಬಾಗಿಸಿ ನೋಡುವುದು ಮನುಷ್ಯತ್ವವಿಲ್ಲ. ಅದಕ್ಕೆ ನಾವು ಬದ್ಧನಾಗಿರುವುದಿಲ್ಲ ಇಡೀ ಭೂಮಂಡಲವೇ ನನ್ನ ಮನೆ. ಇಡೀ ಪ್ರಪಂಚವೇ ನನ್ನ

ಮನೆ ಎಂದು ಕವಿ ಪೀರಬಾಷಾ ಅವರ ಕವಿತೆಯ ಸಾಲುಗಳನ್ನು ನೋಡಿದಾಗ ವಿಶ್ವಮಾನವತೆಯ ಸಾರ ಕಾಣುತ್ತದೆ.

ಇಲ್ಲಿ
ನನಗ ನಿಷ್ಠೆಇಲ್ಲ ಈ ಗಡಿಗಳ ಮೇಲೆ
ಖಂಡಿತ ನನು ಬದ್ಧನಲ್ಲ
ಹುಸಿ ರಷ್ಟ್ರೀಯತೆಗೆ
ರಾಷ್ಟ್ರಯತೆಯ ಮತೀಯ ವ್ಯಾಖ್ಯಾನಕ್ಕೆ
ಆಳುವುದಕ್ಕಾಗಿಯೇ ಕಟ್ಟಿಕೆಂಡ ರಾಷ್ಟ್ರಕ್ಕೆ
ಪ್ರಜೆಗಳ ಹೆಸರಿನ ಪ್ರಭುತ್ವದ ಗಣಿತಕ್ಕೆ
ನಿಷ್ಠೆಯಿಲ್ಲ ನನಗೆ.

ಕವಿ ತನ್ನ ಕವಿತೆಯ ಮೂಲಕ ವಿಶ್ವಪ್ರೇಮ, ವಿಶ್ವಮಾನವತೆಯನ್ನು ಮೆರೆದಿದ್ದಾರೆ. ದೇಶ ದೇಶಗಳ ನಡುವೆ ಗಡಿರೇಖೆಗಳನ್ನು ನಿರ್ಮಿಸಿ, ವಿಭಾಗಿಸಿ ನೋಡುವ ಕ್ರಮ ಸರಿಯಲ್ಲ ಅದು ವಿಶ್ವಪ್ರೇಮಕ್ಕೆ ವಿರುದ್ಧವಾಗಿದೆ. ಅಂತಹ ರಾಷ್ಟ್ರೀಯತೆ ಹುಸಿ ರಾಷ್ಟ್ರೀಯತೆಯಾಗಿದೆ. ಈ ರಾಷ್ಟ್ರೀಯತೆಯ ಮೂಲಕ ಅಪಮಾನಗಳು, ಅವಮಾನಗಳು ಮಾಡಲಾಗುತ್ತಿದೆ. ರಾಷ್ಟ್ರ ಎಂದರೆ ಕೇವಲ ಗಡಿರೇಖೆಗಳು ಅಲ್ಲ ಜನರ ರಾಷ್ಟ್ರವಾಗಬೇಕು ಈ ಅಖಂಡ ನೆಲವೇ ಒಂದು ಮಾತೃಭೂಮಿಯಾಗಬೇಕು. ಆ ಮಾತೃವಿನ ಮಕ್ಕಳು ನಾವೆಲ್ಲರು. ನಾವೆಲ್ಲ ಒಂದೇ ನೆಲದ, ತಾಯಿಯ ಮಕ್ಕಳು ಎಂಬ ಭಾವನೆ ತಾಳಬೇಕು ಅಂದಾಗ ಮಾತ್ರ ವಿಶ್ವಪ್ರೇಮ, ವಿಶ್ವಮಾನವತೆ ಕಾಣಬಹುದು ಎಂದಿದ್ದಾರೆ. ಹಾಗೇ ತಾನು ಹಂಬಲಿಸುವುದು ಈ ವಿಶ್ವಪ್ರೇಮಕ್ಕಾಗಿ, ಈ ಹುಸಿ ರಾಷ್ಟ್ರೀಯತೆಗೆ ಅಲ್ಲ ಎಂದಿದ್ದಾರೆ. ರಾಷ್ಟ್ರೀಯತೆಯ ವ್ಯಾಖ್ಯಾನವೇ ಸರಿಯಾಗಿಲ್ಲ. ಅದು ಮತೀಯ ಭಾವನೆ ಮೂಡಿಸುತ್ತದೆ. ಮನುಷ್ಯ ಮನುಷ್ಯರ ಮಧ್ಯ ಕಂದಕವನ್ನು ಉಂಟುಮಾಡುತ್ತದೆ. ಕಲಹಕ್ಕೆ ದಾರಿಮಾಡಿ ಕೊಡುತ್ತದೆ. ಯುದ್ಧಗಳಾಗಿ ಅಪಾಯಕಾರಿ ಘಟನೆಗಳಿಗೆ ಆಹ್ವಾನ ನೀಡುತ್ತದೆ ಆದ್ದರಿಂದ ಅಂತಹ ರಾಷ್ಟ್ರೀಯತೆಯಿಂದ ದೂರ ಬಂದು ವಿಶ್ವಮಾನವ ಪ್ರಜ್ಞೆ ಮೂಡಿಸಿಕೊಳ್ಳಬೇಕು ಅದು ಮನುಷ್ಯನ ನೆಮ್ಮದಿ ಬದುಕಿಗೆ ಸೌಹಾರ್ದ ಬದುಕಿಗೆ ಆಸರೆಯಾಗುತ್ತದೆ. ಎಲ್ಲಾ ಭಾಷೆಗಳು ಅವರವರಿಗೆ ಮಾತೃಸ್ವರೂಪಿಯಾದಂತಹವುಗಳು ಒಂದು ಭಾಷೆ ಶ್ರೇಷ್ಠ ಇನ್ನೊಂದು ಕನಿಷ್ಟ ಎಂಬ ಭಾವನೆ ಬರಬಾರದು. ಎಲ್ಲಾ ಭಾಷೆಗಳು ಸಮಾನವಾದವುಗಳು ಇಂತಹ ಮನಸ್ಥಿತಿ ಭಾವನೆ ತಾಳಿದರೆ ಭಾಷೆಗಳ ಐಕ್ಯತೆಯಾಗಿ ಯಾವುದೇ ಅನಾಹುತಗಳಾಗದಂತೆ ಅಂಧಾಭಿಮಾನ ಮಾಡದಂತೆ ಇರಲು ಸಹಾಯಕವಾಗುತ್ತದೆ. ಇಲ್ಲದಿದ್ದರೆ ಅತಿಯಾದ ಭಾಷಾ ಪ್ರೇಮದಿಂದ ಸಮುದಾಯ ಸಮುದಾಯಗಳ ಮಧ್ಯೆ, ದೇಶ ದೇಶಗಳ ಮಧ್ಯೆ, ರಾಜ್ಯ ರಾಜ್ಯಗಳ ಮಧ್ಯೆ ಯುದ್ಧಗಳು ಜಗಳಗಳು ಸಂಭವಿಸುತ್ತವೆ. ಇಂಥ ಅನಾಹುತಗಳು ನಡೆಯಬಾರದೆಂದು ಕಾವ್ಯ ವಿಶ್ವಮಾನವತೆಯ ಸಾರ ಹಿಡಿದು ನಿಂತಿದೆ. ಸೀಮಿತ ಮನೋಧರ್ಮ

ದೂರಮಾಡಿ ವಿಶ್ವಪ್ರೇಮ ಬೆಳಸಲು ಮುಂದಾಗಿದೆ. ಕವಿ ಇಲ್ಲಿ ವಿಶ್ವಮಾನವತೆಯನ್ನು ಒಪ್ಪಿಕೊಂಡ ನೆಲಕ್ಕೆ, ತನ್ನ ಜೀವ ಅರ್ಪಿಸಲು ಮುಂದಾಗಿದ್ದಾನೆ. ಅಂತಹ ನೆಲ ನನ್ನ ನೆಲ ಎಂದು ಅದಕ್ಕಾಗಿ ನಾನು ಏನು ಬೇಕಾದರೂ ಮಾಡಬಲ್ಲೆ ಎಂದು ಕಾವ್ಯದ ಮೂಲಕ ಕೂಗಿ ಹೇಳಿದ್ದಾರೆ. ಇದು ಕೇವಲ ಕವಿಯ ಕೂಗೂ ಅಷ್ಟೇ ಅಲ್ಲ ಕಾವ್ಯದ ಕೂಗು ಸಹವಾಗಿದೆ. 'ನಮ್ಮ ವರಕವಿ ಬೇಂದ್ರೆಯವರು ಹೇಳಿದಂತೆ ಭೂಗೋಳದ ಮೇರೆಗಳನ್ನು ಮೀರುವುದೇ ಇತಿಹಾಸ, ಇತಿಹಾಸದ ಮೇರೆಗಳನ್ನು ಮೀರುವುದೇ ಸಾಂಸ್ಕೃತಿ'[೧೦] ಇಂಥ ಸಂಸ್ಕೃತಿ ವಿಶ್ವಮಾನವ ಪ್ರಜ್ಞೆಯಿಂದ ಮಾತ್ರ ಸಾಧ್ಯ. ಬೇಂದ್ರೆ ಅವರ ಮಾತಿನ ಆಶಯವನ್ನು ಸಮಕಾಲೀನ ಕಾವ್ಯ ಮತ್ತೊಮ್ಮೆ ಪುನರುಚ್ಚರಿಸಿದ ರೀತಿಯಲ್ಲಿದೆ. ಗಡಿಗಳನ್ನು ಮೇರೆಗಳನ್ನು ಮೀರಿ ನಡೆಯುವುದು ಬದುಕುವುದು ಇತಿಹಾಸವಾಗಿದೆ. ಇಂಥ ಇತಿಹಾಸವನ್ನು ಸೃಷ್ಟಿಸಬೇಕು. ಅದು ವಿಶ್ವಮಾನವ ಸಂದೇಶವನ್ನು ಸಾರುವಂತಿರಬೇಕು ಯಾವುದೇ ಮೂಲಭೂತವಾದಿ ಮನಸ್ಸುಗಳು ನಿರ್ಮಿಸಿದ ಗಡಿ, ಮೇರೆ ಭಾಗಗಳನ್ನು ಮುರಿದು ಈ ನೆಲವನ್ನೆಲ್ಲ, ಮನಗಳನ್ನೆಲ್ಲಾ ಒಂದೂಗೂಡಿಸಿ ಬಾಳುವ ಕ್ರಮ ವೈಚಾರಿಕ ಪ್ರಜ್ಞೆಯಿಂದ ಬರುತ್ತದೆ.

ನಮ್ಮ ನಾಡು-ನುಡಿಯ ವಿಚಾರದಲ್ಲಿಯೂ ವಿಶ್ವಮಾನವತೆಯನ್ನು ಕಾಣಬೇಕು. ಜೊತೆಗೆ ನಮ್ಮ ನೆಲದ ಹಾಡನ್ನು ಹಾಡಬೇಕು. ಹಾಡುವಾಗ ಸೀಮಿತಗೊಳ್ಳದೆ ಸಿನಿಕರಾಗದೆ ಮುಕ್ತತೆಯಿಂದ ಹಾಡಬೇಕು ಬಾಳಬೇಕು ವಿಶ್ವಪ್ರೇಮದ ಆದರ್ಶ ಕಾರ್ಯಗತವಾಗಬೇಕಾದರೆ ನಮ್ಮ ಪಕ್ಕದಲ್ಲಿರುವವರನ್ನು ನಾವು ಪ್ರೇಮಿಸುವುದನ್ನು ಕಲಿಯಬೇಕು ನಮ್ಮ ಭಾಷೆ, ನಾಡನ್ನು ಹೇಗೆ ಗೌರವದಿಂದ ಕಾಣುತ್ತೇವೆಯೋ ಅಂತೆಯೇ ಪಕ್ಕದ ನಾಡಿನ ಭಾಷೆಯ ಕುರಿತು ಅಷ್ಟೇ ಗೌರವ ಹೊಂದಬೇಕು ಅಂದಾಗ ಮಾತ್ರ ವಿಶ್ವಮಾನವ ಪ್ರಜ್ಞಾ ಆಚರಣೆಗೆ ತಂದಂತಾಗುತ್ತದೆ. ನಾವಿರುವ ಸ್ಥಳದಲ್ಲಿಯೇ ನಾಲ್ಕು ಜನರಿಗೆ ಬೇಕಾದವರಾಗಿ ನಮ್ಮ ಕರ್ತವ್ಯವನ್ನು ಮಾಡುತ್ತಾ ಆ ಮೂಲಕವೇ ಮಾನವತೆಯ ಏಕತೆಯನ್ನು ಅದರ ಆಂತರ್ಯದಲ್ಲಿರುವ ವಿಶ್ವಪ್ರಜ್ಞೆಯ ಪ್ರೀತಿಯನ್ನು ಬೆಳಸಿಕೊಂಡವನು ವಿಶ್ವಮಾನವತೆಯ ನಿಲುವನ್ನು ಕಂಡುಕೊಳ್ಳಬಹುದು.

ವಿಚಾರ ಧಾರೆಗಳನ್ನು ಅಭಿವ್ಯಕ್ತಿಸುವುದರ ಜೊತೆಯಲ್ಲಿ ಸಾಮರಸ್ಯ ಮತ್ತು ಸಮನ್ವಯದ ಮನೋಭಾವನೆಯನ್ನು ಬೆಳಸಿಕೊಳ್ಳುವಂತೆ ಸಲಹೆ ನೀಡುತ್ತಿದೆ. ಯಾವ ರಾಜ, ಚಕ್ರವರ್ತಿಗೂ ಇಲ್ಲದ ಆತ್ಮಗೌರವವನ್ನು ಪಡೆದುಕೊಳ್ಳಲು ವಿಚಾರ ಪ್ರಜ್ಞಾ ಸಹಕಾರಿಯಾಗುತ್ತದೆ. ನಮ್ಮ ವಿಚಾರವಂತಿಕೆಗಳ ಚಿಂತನೆಯ ಮೇಲೆ ಆಕ್ರಮಣಕಾರಿ ಮನೋಭಾವನೆ ತಾಳುವ ಮನಸ್ಸುಗಳ ವಿರುದ್ಧ ಯಾವ ರೀತಿಯಾಗಿ ವೈಚಾರಿಕ ನಿಲುವನ್ನು ವ್ಯಕ್ತಪಡಿಸಬೇಕೆಂದು ಕಾವ್ಯ ಹೇಳುತ್ತಿದೆ. ಧರ್ಮದ ಹೆಸರಿನಲ್ಲಿ ಆಧ್ಯಾತ್ಮವನ್ನೇ ಅವಹೇಳನಗೊಳಿಸುವಂತಹ ಮೌಢ್ಯಗಳೂ ಮತೀಯ ಸಂಪ್ರದಾಯಗಳೂ ಬೆಳದು ಬಂದಿರುವುದನ್ನು ಕಟುವಾಗಿ ಖಂಡಿಸುವಂತೆಯೇ ಅವುಗಳನ್ನು ಮೀರಿ ಶಾಶ್ವತ ಸತ್ಯಗಳನ್ನು ಸಾರುವ ಆಧ್ಯಾತ್ಮಿಕ ಮೌಲ್ಯಗಳನ್ನು ನಿಷ್ಠೆಯಿಂದ ಪ್ರತಿಪಾದಿಸಲು ದಾರಿಮಾಡುತ್ತಿದೆ.[೧೧] ವೈಚಾರಿಕತೆಯ ಚಿಂತನೆಯ ಉದ್ದಕ್ಕೂ ಸರ್ವಧರ್ಮದ ಸಮನ್ವಯದ

ಸಾರತೆಯನ್ನು ಹೇಳುತ್ತದೆ. ಆಧುನಿಕ ಪರಿಸರದಲ್ಲಿ ವಿಶ್ವಮಾನವ ಪ್ರಜ್ಞೆಯಾನ ನೆಲೆಯಲ್ಲಿ ರೂಪಗೊಳ್ಳಬೇಕು ಎನ್ನುವುದನ್ನು ಸಮಕಾಲೀನ ಕಾವ್ಯ ಸುಂದರವಾಗಿ ಅಭಿವ್ಯಕ್ತಿಸುತ್ತಿದೆ.

ಪ್ರಾರ್ಥನಾಲಯದ
ಮಿನಾರು ಗೋಪುರ ಶಿಖರಗಳು
ಉಚ್ಚೆ ಒಯ್ದು ಹಿಕ್ಕೆ ಹಾಕುವುದು
ಹೊಸದೇನಲ್ಲ ಕಾಗೆಗಳು
ಅದಕ್ಕೆ ಅವು
ಅಪ್ಪು ಎತ್ತರದಲಿ[೨]

ಕವಿ ಇಲ್ಲಿ ಸರ್ವ ಧರ್ಮಗಳ ಪ್ರಾರ್ಥನಾ ಮಂದಿರಗಳು ಒಂದೇ ಎಂದು ಹೇಳುತ್ತಾರೆ. ಅವುಗಳು ಯಾವುವು ಹೆಚ್ಚು ಕಡಿಮೆ ಅಲ್ಲ, ಪ್ರೇಮದ ಪ್ರಾರ್ಥನೆಯಾದಾಗ. ಅವು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತವೆ. ಇಲ್ಲದಿದ್ದರೆ ದ್ವೇಷ ಉತ್ಪಾದನಾ ಕೇಂದ್ರಗಳಾಗುತ್ತವೆ ಎಂದು ಎಚ್ಚರಿಕೆಯ ಮಾತನಾಡಿದಂತಿದೆ. ಪಕ್ಷಿಗಳು ಹಾರಿ ಕೂರುವುದು ಉಚ್ಚೆ ಒಯ್ದು, ಹಿಕ್ಕೆಹಾಕುವುದು ಸ್ವಭಾವಿರವಾದರೂ ಅದರಿಂದ ಕವಿ ವೈಚಾರಿಕ ಚಿಂತನೆಯನ್ನು ಹೇಳಲು ಹೊರಟಿದ್ದಾರೆ. ಪಕ್ಷಿಗಳ ಹಿಂದೂ ದೇವಾಲಯಗಳಿಗೆ, ಮುಸ್ಲಿಂ ಪ್ರಾರ್ಥನಾ ಮಂದಿರಗಳಿಗೆ, ಗೋಪುರಗಳಿಗೆ, ಶಿಖರಗಳಿಗೆ ಯಾವುದೇ ರೀತಿಯ ಪ್ರತ್ಯೇಕತೆಯನ್ನು ಮಾಡುವುದಿಲ್ಲ ಎಲ್ಲಿ ಒಂದೇ ನೆಲೆಯಲ್ಲಿ ಭಾವಿಸಿ ನೋಡುತ್ತದೆ. ಅಂಥ ಮನಸ್ಥಿತಿ ಮನುಷ್ಯನದ್ದಾಗಬೇಕು ಎಂಬುದು ಕವಿತೆಯ ಆಶಯ. ಹಾಗೇ ಅಂತಹ ವೈಚಾರಿಕ ನಿಲುವನ್ನು ಹೊಂದಿದ ಮನುಷ್ಯ ಹಕ್ಕಿಯಂತೆ ಎತ್ತರಕ್ಕೆ ಹಾರಬಹುದು ಎಂಬ ತಾತ್ವಿಕ ವಿಚಾರವನ್ನು ಕವಿ ಈ ಕವಿತೆಯ ಸಾಲಿನ ಮೂಲಕ ಅಭಿವ್ಯಕ್ತಿಸಿದ್ದಾರೆ. ಯಾವ ಧರ್ಮ ಮನುಷ್ಯ ಪ್ರೀತಿಯನ್ನು ಮಾನವೀಯತೆಯನ್ನು ಜೀವಪರ ಚಿಂತನೆಯನ್ನು ಬಿತ್ತುತ್ತದೆಯೋ ಅದು ನಿಜವಾದ ಧರ್ಮವಾಗಿದೆ. ಅಂತಹ ಧರ್ಮದಲ್ಲಿ ವಿಶ್ವಪ್ರೇಮ, ನಿಷ್ಟೆಯನ್ನು ಕಾಣಬಹುದಾಗಿದೆ. ವಿಶ್ವಮಾನ ಪ್ರೇಮವನ್ನು ಬಿತ್ತಿ ಬೆಳಕನ್ನು ಹರಡುವ ಧರ್ಮ ಮನುಷ್ಯ ಧರ್ಮವಾಗುತ್ತದೆ. ಅಲ್ಲಿ ವೈಚಾರಿಕತೆಯ ಆಶಯ ಕಾಣುತ್ತೇವೆ.

ವಿಚಾರವಾದ ಈ ವೈಚಾರಿಕ ಚಿಕಿತ್ಸೆಯೇ ಮಾನವನ ಎಲ್ಲ ಪುರುಷಾರ್ಥ ಪರಮಾರ್ಥಗಳ ವಿಕಾಸಕ್ಕೆ ಅಡಿಗಲ್ಲು. ಶ್ರದ್ಧೆಯಿಲ್ಲದೆ, ಭಾವನೆಯ ಆವೇಶವಿಲ್ಲದೆ, ಇಚ್ಛಾಶಕ್ತಿಯಿಲ್ಲದೆ ಯಾವ ಕೆಲಸವೂ ಆಗುವುದಿಲ್ಲ ನಿಜ. ಆದರೆ ಬುದ್ಧಿಯ ವ್ಯಾಪಾರ ವಿಚಾರ ಪರಿಶೀಲನೆ ಇಲ್ಲದೆ ಯಾವ ಕೆಲಸವೂ ಕೈಗೂಡುವುದಿಲ್ಲ. ಎಲ್ಲವೂ ಕುರುಡ ಕತ್ತೆ ಹೊಸೆದಂತೆ ಶಕ್ತಿ-ಯುಕ್ತಿಗಳ ಸಂಯೋಗದಿಂದಲೇ ಮಾನವನಿಗೆ ನಿಜವಾದ ಜೀವನ್ಮುಕ್ತಿ. ಆದ್ದರಿಂದ ವಿಚಾರವಾದವೇ ಆಧುನಿಕ ಅಭಿವೃದ್ಧಿಗೆ ವೈಜ್ಞಾನಿಕ ಪ್ರಗತಿಗೆ ದಾರಿ ದೀಪ. ಈ ವಿಚಾರವಾದದ ಶಿಸುವೇ ಇಂದು ಪ್ರಬಲವಾಗಿ ಬೆಳೆದು ವೈಜ್ಞಾನಿಕದೃಷ್ಟಿ. ಈ ಒಂದು ದೃಷ್ಟಿಯಿಂದಲೇ ಸಕಲ ಆಧುನಿಕ ನಾಗರಿಕತೆಯ ಸುಖ ಸೌಕರ್ಯಗಳೂ ಹಿತ ಸೌಲಭ್ಯಗಳೂ ಸಾಧ್ಯವಾಗಿವೆ. ಈ ಸಾಮಾಜಿಕ ಸೌಲಭ್ಯಗಳಲ್ಲಿಯೂ

ವೈಚಾರಿಕ ದೃಷ್ಟಿಕೋನ ತಾಳುವ ಪರಿಯನ್ನು ಕಾವ್ಯ ಒಳಗೊಂಡಿದೆ. ಈ ಲೋಕವನ್ನು ನೋಡುವ ಕ್ರಮ, ಅರಿಯುವ ಬಗೆಯನ್ನು ಕಾವ್ಯ ನುಡಿಯುತ್ತಿದೆ. ವೈಚಾರಿಕ ದೃಷ್ಟಿಕೋನದಿಂದಾಗುವ ಅನುಕೂಲಗಳು ಅಭಿವೃದ್ಧಿಗಳು, ವಿಚಾರಗಳು ಹೇಗೆ ಮನುಷ್ಯ ಬದುಕನ್ನು ಬೆಳಗಿಸುತ್ತವೆ ಎಂಬುದನ್ನು ಕಾವ್ಯ ಹೇಳುತ್ತಿದೆ. ಈ ರೀತಿ ಕಾವ್ಯ ಅಭಿವ್ಯಕ್ತಿಸುವದಕ್ಕೆ ಅನೇಕ ಚಿಂತನೆಗಳ ಸ್ವಭಾವ ಮತ್ತು ಮನುಷ್ಯ ಅಂಧಕಾರಕ್ಕೆ ರೋಸಿಹೋಗಿ ಅದನ್ನು ನಿವಾರಣೆ ಮಾಡಲು ವೈಜ್ಞಾನಿಕ ದೀಪ ಹಚ್ಚಿದೆ ಸಮಕಾಲೀನ ಕಾವ್ಯ.

ಪ್ರಾದೇಶಿಕ ವೈಶಿಷ್ಟತೆ ಪ್ರತಿಯೊಂದು ಪ್ರದೇಶಕ್ಕೂ ಇರುತ್ತದೆ. ಇದನ್ನು ಅರಿಯದೆ ಪ್ರಾದೇಶಿಕ ಅಮಲಿನಿಂದ ಮನುಷ್ಯ ಕ್ರೂರನಾಗಿ ವರ್ತಿಸುವದು ಮತ್ತು ಶ್ರೇಷ್ಠತೆಯ ವ್ಯಸನ ಪಡೆದು ದಬ್ಬಾಳಿಕೆ ಮಾಡಲು ಮುಂದಾಗುತ್ತಾನೆ. ಇಂಥ ವರ್ತನೆಯನ್ನು ಸಮಕಾಲೀನ ಕಾವ್ಯ ಖಂಡಿಸುತ್ತದೆ. ಅಂಥ ಪ್ರಾದೇಶಿಕ ಅಂಧಾಭಿಮಾನ, ಭಾಷಾಭಿಮಾನ, ಸಮುದಾಯದ ಅಭಿಮಾನ ದೂರ ಮಾಡಿ ವಿಶ್ವಮಾನವ ಪ್ರಜ್ಞೆ ಹೊಂದುವದನ್ನು ಕಲಿಸುತ್ತಿದೆ. ಪ್ರತಿಯೊಂದು ಭಾಷೆಗೂ ಅದರದ್ದೆಯಾದ ಚರಿತ್ರೆ, ಘನತೆ ಮತ್ತು ಲಯಗಾರಿಕೆ ಇರುತ್ತದೆ. ಇವುಗಳನ್ನೇ ಮುಂದೆ ಮಾಡಿ ಅತಿಯಾದ ಭಾಷಾಭಿಮಾನಿಯಾಗಿ ಮತ್ತೊಂದು ಭಾಷೆಯನ್ನು ಕೀಳಾಗಿ ಕಾಣುವುದು ಅಪಾಯಕಾರಿ ಹಾಗಾಗಿ ಮಾನವೀಯತೆಗೆ ವಿರುದ್ಧವಾದದ್ದು ಹಾಗೆ ಇನ್ನೊಂದನ್ನು ಶ್ರೇಷ್ಠ ಎಂದು ನಂಬಿ ಭಾವನಾತ್ಮಕವಾಗಿ ತೇಲಾಡುವುದು ಸಹ ಗುಲಾಮಗಿರಿಯನ್ನು ಸೂಚಿಸುತ್ತದೆ. ಇದ್ಯಾವುದನ್ನು ಮಾಡದೆ ಭಾಷೆ ಭಾಷೆಯಾಗಿ ಅಷ್ಟೇ ನೋಡಬೇಕು. ಜ್ಞಾನ ಯಾವ ಭಾಷೆಯಿಂದ ಬಂದರೂ ಸ್ವೀಕರಿಸುವ ಮನಸ್ಥಿತಿ ಬರಬೇಕು ಎನ್ನುವುದು ವಿಶ್ವಮಾನ ಪ್ರಜ್ಞೆಯಿಂದ ವಿಚಾರ ಕ್ರಾಂತಿಯಿಂದ, ವೈಚಾರಿಕತೆಯಿಂದ ಬೆಳೆಯುತ್ತದೆ. ಇಂತಹದ್ದೇ ಭಾಷೆಯಿಂದ ಮಾತ್ರ ಸಾಧ್ಯ ಎನ್ನುವ ಭಾವನೆ ಒಳಿತಲ್ಲ. ದೇವ ಭಾಷೆ, ಆ ಭಾಷೆ ಈ ಭಾಷೆ ಎಂಬ ಮೂಢಭಾವನೆಯನ್ನು ದೂರಮಾಡುತ್ತವೆ. ಹಾಗೂ ಇಂತಹ ಭಾವನೆಯಿಂದ ದೂರ ಇರಲು ಸಮಕಾಲೀನ ಕಾವ್ಯ ಒತ್ತಿ ಹೇಳುತ್ತದೆ. ಭಾಷೆ ಕೇವಲ ಸಂವಹನ ಮಾತ್ರ ಅದರಾಚೆಗೆಯಾಗುವುದೇ ಶ್ರೇಷ್ಠ ಕನಿಷ್ಠ, ಪಾವಿತ್ರತೆ ಎಂಬ ಭಾವನೆ ಸರಿಯಲ್ಲ ಎನ್ನುವುದನ್ನು ವೈಚಾರಿಕ ಪ್ರಜ್ಞೆ ಕಲಿಸುತ್ತದೆ. ಅಂತಹ ಸಮಕಾಲೀನ ಕನ್ನಡ ಕಾವ್ಯ ಜಾತ್ಯಾತೀತ ಮನೋಭಾವನೆಯನ್ನು ಬೆಳಸುತ್ತದೆ. ಯಾವುದೇ ಜಾತಿಯ ಕುರಿತಂತೆ ಅತಿಯಾದ. ಪ್ರೇಮ ಮತ್ತು ಆರಾಧನೆಯನ್ನು ಮಾಡದೆ ಸರ್ವ ಜಾತಿಯನ್ನು ಗೌರವಿಸುವ, ಪ್ರೀತಿಸುವ ಅಭಿಮಾನಿಸುವ ಮನೋಭಾವವನ್ನು ನೀಡುತ್ತದೆ. ಸಮುದಾಯ ಸಮುದಾಯಗಳ ಮಧ್ಯೆ ಐಕ್ಯತೆಯನ್ನು ಸಾರುತ್ತದೆ. ಸಂವಿಧಾನದ ಆಶಯದ ನೆಲೆಯಲ್ಲಿ ಜಾತಿಗಳು, ಸಮುದಾಯಗಳು ಸಬಲತೆಯನ್ನು ಹೊಂದಿ ಒಂದು ಅಂತರ್‌ಸಂಬಂಧ, ಐಕ್ಯತೆಯನ್ನು ಹೊಂದುವುದು ಹೇಗೆ ಎಂದು ತಿಳಿಸಿಕೊಡುತ್ತದೆ. ಅನೇಕ ತಳಸಮುದಾಯಗಳ ಕುರಿತಂತೆ ಅವುಗಳ ಬಗ್ಗೆ ತೋರಿದ ಅಗೌರವವನ್ನು ದೂರ ಮಾಡಿ ಆ ಸಮುದಾಯಗಳೂ ಮುಖ್ಯ

ನೆಲೆಗೆ ಬಂದು ಸಮಾನವಾಗಿ ನಿಂತು ಬದುಕಲು ಸ್ಫೂರ್ತಿ ನೀಡುತ್ತಿದೆ. ಇಂತಹ ಸ್ಫೂರ್ತಿಯಾದ ನುಡಿಗಳು ವೈಚಾರಿಕ ಪ್ರಜ್ಞೆಯಿಂದ ಸಾಧ್ಯವಾಗುತ್ತದೆ. ಜಾತಿ ಜಾತಿಗಳಲ್ಲಿ ಇರುವ ಸಿನಿಕ್ ಮನೋಭಾವನೆ ದೂರ ಮಾಡಿ, ಸರ್ವ ಸಮಾನತೆ, ಸಮನ್ವಯತೆಯನ್ನು ಸಾರುತ್ತದೆ. ಕೆಲವು ಜಾತಿಗಳಲ್ಲಿರುವ ಆಚರಣೆಗಳು ಸಹ ಮುಖ್ಯವಾಗುತ್ತದೆ. ಸಾಂಸ್ಕೃತಿಕ ಆಚರಣೆಯಲ್ಲಿಯೂ ವಿಶ್ವ ಪ್ರೇಮವನ್ನು ತಾಳುವುದು ಹೇಗೆ ಎಂಬುದನ್ನು ಕಾವ್ಯ ಕಲಿಸುತ್ತಿದೆ. ಒಂದು ಸಮುದಾಯದ ಸಾಂಸ್ಕೃತಿಕ ಆಚರಣೆಗಳನ್ನು ಇನ್ನೊಂದು ಸಮುದಾಯ ಗೌರವಿಸುವುದನ್ನು ವಿಶ್ವಪ್ರೇಮ ವಿಶ್ವಮಾನವತೆಯಾಗಿದೆ. ಇಂತ ವಿಶ್ವಮಾನವತೆಯನ್ನು ಕಾವ್ಯ ಧ್ವನಿಸುತ್ತಿದೆ. ಗುಡಿಗಳಲ್ಲಿ ಮಸೀದಿಗಳಲ್ಲಿ ನಡೆಯುವ ಅವೈಜ್ಞಾನಿಕ ಆಚರಣೆಗಳ ಕುರಿತು ಎಚ್ಚರಿಕೆಯನ್ನು ನೀಡಿದೆ. ಬಾಬಾಗಳು ಮಾಡುವ ಮಾಂತ್ರಿಕ ಶಕ್ತಿಯನ್ನು ಓದುವನ್ನು ಧಿಕ್ಕರಿಸಿ ವೈಜ್ಞಾನಿಕ ತಿಳುವಳಿಕೆಯ ತಾಳುವುದು ಹೇಗೆ ಎಂಬುದನ್ನು ಕಲಿಸುವುದರ ಜೊತೆಗೆ ಅದರಂತೆ ಜೀವಿಸಲು ಸ್ಫೂರ್ತಿ ನೀಡುತ್ತಿದೆ. ಅತೀಂದ್ರಿಯ ಅತಿಮಾನುಷ ಅನುಭವಗಳು, ಜನ್ಮಾಂತರಗಳು, ಪುನರ್ಜನ್ಮ, ಪೂರ್ವಜನ್ಮ ಸ್ಮರಣೆ, ಯೋಗಶಕ್ತಿ, ಲೋಕಾತಿಕ್ರಾಂತ ಸಾಧನಗಳ ಕುರಿತಾಗಿ ಪ್ರಶ್ನಿಸಿ ವೈಚಾರಿಕ ಜಾಗೃತೆಯನ್ನು ಮೂಡಿಸಿ ಅವೆಲ್ಲವುಗಳಿಂದ ಎಚ್ಚರಿಕೆಯ ಸಂದೇಶ ಸಾರಿ ಮನುಷ್ಯ ವಿಚಾರ ಬುದ್ಧಿಶಕ್ತಿಯಿಂದ ಬದುಕುವುದು ಹೇಗೆ ಎಂಬುದನ್ನು ಕಾವ್ಯ ತಿಳಿಸುತ್ತದೆ.

"ಪ್ರತಿಯೊಂದು ಮಗುವೂ ಹುಟ್ಟುತ್ತಲೇ ವಿಶ್ವಮಾನವ ಬೆಳೆಯುತ್ತಾ ನಾವು ಅದನ್ನು ಅಲ್ಪಮಾನವನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು ವಿಶ್ವಮಾನವನನ್ನಾಗಿ ಮಾಡುವುದು ವಿದ್ಯೆಯ ಕರ್ತವ್ಯವಾಗಬೇಕು"[೧೩] ಎಂದು ಕುವೆಂಪು ಹೇಳುತ್ತಾರೆ. ಪ್ರತಿಯೊಂದು ಮಗು ಹುಟ್ಟಿದಾಗ ಯಾವ ಜಾತಿ, ಧರ್ಮ, ಸಮುದಾಯ, ಸಂಸ್ಕೃತಿ, ಆಚಾರ, ವಿಚಾರಗಳಿಗೆ ಬಲಿಯಾಗಿರುವುದಿಲ್ಲ. ಅದೊಂದು ವಿಶ್ವಮಾನವನ್ನಾಗಿರುತ್ತಾನೆ. ನಾವುಗಳು ಜೀವವನ್ನು ಸಂಕುಚಿತಗೊಳಿಸಿ ಧರ್ಮಾಂಧರಾಗಿಸುತ್ತೇವೆ. ಅದಕ್ಕೊಂದು ಜಾತಿ, ಸಂಸ್ಕೃತಿ, ಆಚರಣೆ, ಸಂಪ್ರದಾಯಗಳು ಚಾಕಟ್ಟುಗಳನ್ನು ಹೇರಿ ಅಲ್ಪಮಾನವನನ್ನಾಗಿ ಮಾಡುತ್ತೇವೆ. ಇದೇ ಸದ್ಯದ ದುರಂತ ಇಂತ ದುರಂತದಿಂದ ದೂರಮಾಡಿ ಮತ್ತೆ ಅಲ್ಪ ಮತಿಯ ಮನಸ್ಥಿತಿಯನ್ನು ವಿಶ್ವಚೇತನ, ವಿಶ್ವಬೆಳಕು ವಿಶ್ವಮಾನವನ್ನಾಗಿಸುವುದು ಶಿಕ್ಷಣ ಎಂದು ಕುವೆಂಪು ಅವರ ಅಂತಹ ಮಾದರಿಯನ್ನು ಕಾವ್ಯವು ಹೇಳುತ್ತವೆ.

ಸಮಕಾಲೀನ ಕನ್ನಡ ಕಾವ್ಯಕ್ಕೆ ಹೊಸ ಜೀವನ ವಿಧಾನವನ್ನು ರೂಪಿಸುವ ಗುಣವಿದೆ. ಆ ಜೀವನ ಜೀವಪರ, ಮಾನವೀಯತೆಯ ವೈಚಾರಿಕ ನೆಲೆಗಟ್ಟಿನ ಅಂಶಗಳನ್ನು ಒಳಗೊಂಡು. ಹೊಸ ಜೀವನ ವಿಧಾನದ ಬಗ್ಗೆಯನ್ನು ಹೇಳುತ್ತಿದೆ. ಅಲ್ಲಿ ದ್ವೇಷ, ಸ್ಪರ್ಧೆ, ಅಂತರ, ಬೇಧ, ಭಾವ ಇವುಗಳಿಗೆ ಜಾಗವಿಲ್ಲ ಧರ್ಮ, ಜಾತಿ, ಲಿಂಗಗಳ ಅಸಮಾನತೆಯ ಕಿಡಿ ಇರುವುದಿಲ್ಲ ಅಲ್ಲಿ ಇರುವುದು ಮನುಷ್ಯ ಜಾತಿ ಒಂದೇ ಎಂಬ ಮಂತ್ರ ಹೊಂದಿದ ಜೀವನ ಅದಾಗಿದೆ.

ಅಂತಹ ಜೀವನ ವಿಧಾನದ ನಿರ್ಮಾಣಕ್ಕಾಗಿ ಕಾವ್ಯ ಹಂಬಲಿಸುತ್ತಿದೆ. ಹಾಗೇ ಸಾಮಾಜಿಕ ಆಸಕ್ತಿ ನಾನು ನುಡಿಯ ಬಗೆಗಿನ ಕಾಳಜಿ ಹಾಗೇ ಜನಭಾಷೆ, ದೇಶಿಭಾಷೆ, ದೇಶಿಸಂಸ್ಕೃತಿಯ ಜೀವ ತಾಣಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಭಾವನಾತ್ಮಕತೆಯಿಂದ ಬದುಕುವ ಬದುಕನ್ನು ದೂರ ಮಾಡಿ ವಾಸ್ತವದ ವೈಚಾರಿಕ ನೆಲೆಯಲ್ಲಿ ಬದುಕುವ ಬಗೆಯನ್ನು ಕಾವ್ಯ ಕಲಿಸುತ್ತಿದೆ. ದೇವರ ಧರ್ಮದ ಕುರಿತು ಇರುವ ಭಾವನಾತ್ಮಕ ನಂಬಿಕೆಗಳನ್ನು ತೊರೆದು ಹಾಕಿ ಹೊಸ ಜೀವನ ವಿಧಾನದ ದಾರಿ ಹೇಳುತ್ತಿದೆ ಕಾವ್ಯ.

ಮಸೀದೆಯಲ್ಲಿ ಬಂದೂಕು
ಧರ್ಮದ ಪಹರೆ ಕಾಯುವ ದಿನ
ಸಿವಲಿಂಗ ಗುಡಿಯಲ್ಲಿ ತ್ರಿಶೂಲ
ರಕ್ತ ಕೇಳುವ ದಿನ
ದೇವರುಗಳು ಪ್ರಾಣ ಬಿಟ್ಟವು
ಮನಸ್ಸುಗಳು ಸಮಾಧಿಯಾದವು
ಹುಟ್ಟುವ ಮಕ್ಕಳಿಗೆ ಬೆಳಕು ಬೇಕಾಗಿದೆ
ಬದುಕಬೇಕಾಗಿದೆ ಮನುಷ್ಯರಿರುವ
ಊರು ಬೇಕಾಗಿದೆ
ಗುರುತಿಲ್ಲದ ಹೆಸರು ಬೇಕಾಗಿದೆ.[೧೪]

ಕವಿ ಇಲ್ಲಿ ಧರ್ಮ ದೇವರುಗಳನ್ನೆಲ್ಲಿ ದೂರ ಇಟ್ಟ ಮನುಷ್ಯರು ಮಾತ್ರ ಇರುವ ಊರುಬೇಕಾಗಿದೆ. ಅಲ್ಲಿ ಯಾವುದೇ ಮೌಢ್ಯನಂಬಿಕೆಗಳು, ಕಂದಾಚಾರಗಳಿಗೆ ಜಾಗವಿರುವುದಿಲ್ಲ ಯಾವವು ನಾವು ನೆಮ್ಮದಿಯ ತಾಳ ಎಂದು ನಂಬಿ ಬದುಕುತ್ತಿದ್ದೆವೆಯೇ ಅಲ್ಲೇ ದ್ವೇಷ ಅಂಧಕಾರ ಬಿತ್ತುವ ಜಾಗಗಳಾಗಿವೆ ಎಂದು ಆತಂಕ ಪಡುತ್ತದೆ. ಕವಿ ರಕ್ತ ಹರಿಯುವ ದಿನಗಳೇ ಹೆಚ್ಚಾಗಿವೆ ಇಂಥ ದುರಂತ ಕಂಡು ದೇವರುಗಳೇ ಪ್ರಾಣ ಬಿಟ್ಟವು. ಮನಸ್ಸುಗಳು ಸಮಾಧಿಯಾದವು ಎಂದು ಹೇಳಿದ ಮಾತು ತುಂಬಾ ಅರ್ಥಪೂರ್ಣವಾಗಿದೆ. ಕವಿ ಕೊನೆಗೆ ಮುಂದೆ ಹುಟ್ಟುವ ಮಕ್ಕಳ ಭವಿಷ್ಯದ ಕುರಿತು ಚಿಂತಿಸಿ ಅವುಗಳ ರಕ್ಷಣೆಗಾಗಿ ಅವರುಗಳ ಜೀವನ ಯಾವ ರೀತಿಯಾಗಿ ಇರಬೇಕೆಂದು ಆಶಿಸುತ್ತಾನೆಂದರೆ ಬೆಳಕು ಬೇಕಾಗಿದೆ. ಪಥ್ಯ ಇರುವ ಬೆಳಕು ಅಲ್ಲಿ ಧರ್ಮ ಅಂಧಕಾರದ ಕತ್ತಲು, ಮತೀಯ ಪ್ರಮೇಯ ಇದ್ಯಾವುದು ಇಲ್ಲದ ಬೆಳಕು ಬೇಕಾಗಿದೆ. ಅಂತಹ ಬೆಳಕಲ್ಲಿ ಬದುಕಬೇಕಾಗಿದೆ. ಹಾಗೇ ಮನುಷ್ಯರು ಇರುವ ಊರು ಬೇಕಿದೆ. ಸದ್ಯ ಮನುಷ್ಯರು ಇರುವ ಊರು ಯಾವುದೂ ಇಲ್ಲ ಬರೀ ಜಾತಿ ಮತ, ಧರ್ಮದ ಹೆಸರಿನ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವ, ಪರಿಚಯಿಸಿಕೊಳ್ಳುವ ವ್ಯಕ್ತಿಗಳಿದ್ದಾರೆ. ಇಂತವರ ಮಧ್ಯೆ ಬಾಳುವುದು ಕಷ್ಟ. ಅದಕ್ಕಾಗಿ ಊರುಬೇಕಾಗಿದೆ ಗುರುತಿಲ್ಲದೆ ಹೆಸರು ಬೇಕಾಗಿದೆ ಎಂದು ಕವಿ ವೈಚಾರಿಕವಾದ ವಿಶ್ವಮಾನವ ಪ್ರಜ್ಞೆಯನ್ನು ಹೊಂದಿ ಇಂತಹ

ಮಾತುಗಳನ್ನು ಹೇಳಿದ್ದಾರೆ. ಗುರುತಿಲ್ಲದ ಊರು ಅಂದರೆ ಯಾವುದೇ ಕುರುಹುಗಳಿಲ್ಲದೆ ಏಕವಾಗಿರುವ ಬಗೆ. ಗುರುತುಗಳಿದ್ದರೆ ಮತ್ತೆ ಪ್ರತ್ಯೇಕತೆ ಹುಟ್ಟಿ ಅಸಮಾನತೆ, ಜೀವಪಡೆಯುತ್ತದೆ ಗುರುತುಗಳ ಗಾಯ ಮಾಡುತ್ತವೆ ಎಂಬ ಎಚ್ಚರಿಕೆಯಿಂದ ಕವಿ ಅಂತಹ ಮಾತುಗಳನ್ನಾಡಿರುವುದು ಕಂಡು ಬಂದಿದೆ. ಯಾವ ಭಾವನೆಗಳು ಜಗತ್ತಿನಲ್ಲಿ ಎಲ್ಲ ಮಾನವರಿಗೂ ಅನ್ವಯವಾಗಬಹುದೋ ಅಂತಹ ಭಾವನೆ, ಅಂತಹ ದೃಷ್ಟಿ, ಬರಿ ಯಾವುದೋ ಒಂದು ಜಾತಿಗೆ, ಮತಕ್ಕೆ, ಗುಂಪಿಗೆ, ಒಂದು ದೇಶಕ್ಕೆ ಮಾತ್ರ ಅನ್ವಯವಾಗುವುದಿಲ್ಲ. ಸರ್ವಕಾಲಕ್ಕೂ ಅನ್ವಯವಾಗುವ ಇವು ಮೂಲ ಮೌಲ್ಯಗಳು. ಈ ಮೌಲ್ಯಗಳು ಮಾನವರನ್ನು ಕೂಡಿಸಿ ಬಾಳಿಸುವತ್ತ ನಡೆದಾವು ಗುಂಪುಗಾರಿಕೆಗೆಂದೂ ಇವು ತೊಡಗುವುದಿಲ್ಲ. ಅದೇನಿದ್ದರೂ ರಾಜಕೀಯದ ಕರ್ಮ "ವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿಯೂ ಸಮಷ್ಟಿಯ ಉದ್ಧಾರದ ದೃಷ್ಟಿ ಇದರದು. ಈ ದೃಷ್ಟಿಗೆ ವ್ಯಕ್ತಿಗಳಷ್ಟೇ ಅಷ್ಟೂ ಸಂಖ್ಯೆ ಮತಗಳಿರುವುದು ಸಾಧ್ಯ, ಅಷ್ಟೂ ವ್ಯಕ್ತಿಗಳು ಸಮಷ್ಟಿಯ ವಿಕಾಸಕ್ಕೆ ಸಾಧಕವಾಗುವುದೂ ಸಾಧ್ಯ 'ಈ ದರ್ಶನವನ್ನೇ ವಿಶ್ವಮಾನವತೆಯ ದರ್ಶನವಾಗಿದೆ"[೧೫] ಈ ಕುವೆಂಪುರವರ ವಿಚಾರ ವಿಶ್ವಮಾನವ ಪ್ರಜ್ಞೆ ಯಾವ ರೀತಿಯಾದದ್ದು ಎಂದು ಹೇಳುತ್ತದೆ ಮಾತಿನ ಸಾರವನ್ನು ಕಾವ್ಯ ಅಭಿವ್ಯಕ್ತಿಸುತ್ತದೆ. ಎಲ್ಲ ದೇಶಗಳಲ್ಲಿ , ರಾಜ್ಯಗಳಲ್ಲಿ ಎಲ್ಲಾ ಮತಗಳಲ್ಲಿರುವ ಜಾತಿಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ಅವುಗಳನ್ನು ವಿನಾಶಗೊಳಿಸಿ ವಿಶ್ವಪಥದ ಜೊತೆಯನ್ನು ಬೆಳಗಬೇಕು ಎಂದಿದ್ದಾರೆ.

ವ್ಯಕ್ತಿ ತನ್ನ ಅಸ್ಮಿತೆಯನ್ನು ಪಡೆದು ಸಹ ವಿಶ್ವಮಾನವನ್ನಾಗುವ ಬಗೆಯನ್ನು ಕಾವ್ಯ ಹೇಳುತ್ತದೆ. ವ್ಯಕ್ತಿ ತನ್ನತನವನ್ನು ಉಳಿಸಿಕೊಂಡು ಅಭಿವ್ಯಕ್ತಿ ಸ್ವಾತಂತ್ರವನ್ನು ಪಡೆದುಕೊಂಡು ವಿಶ್ವಮಾನವತೆಯ ಆಶಯದಂತೆ ಬದುಕನ್ನು ಹೇಗೆ ಸಾಗಿರಬೇಕು ಹಾಗೇ ಹೇಗೆ ಅನುಸರಿಸಬೇಕು ಎಂದು ಅಭಿವ್ಯಕ್ತಿಸುತ್ತಿದೆ. ಧರ್ಮ ದೇವರುಗಳ ಕುರಿತು ಹೇಳಿದಂತೆ ಧರ್ಮಗುಡ್ಡಗಳ ಕುರಿತಾಗಿಯೂ ಅತಿಯಾದ ಭಾವನಾತ್ಮಕ ನಿಲುವು ತಾಳದೆ ವೈಜ್ಞಾನಿಕ ನಿಲುವನ್ನು ತಾಳುವುದನ್ನು ಸಹ ಎಚ್ಚರಿಕೆಯ ನುಡಿಗಳಾಗಿ ನುಡಿದಿದೆ. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಾಧ್ಯವಾದವುಗಳನ್ನೆಲ್ಲಾ ಓದಿ ತಿಳಿದು ತನ್ನ ದರ್ಶನವನ್ನು ತಾನೇ ನಿರ್ಣಯಿಸಿ ಕೊಟ್ಟುಕೊಳ್ಳಬೇಕೆಂಬ ಆಶಯ ವಿಶ್ವಮಾನವತೆಯ ಸಾರವಾಗಿದೆ. ಯಾವ ಸಂದರ್ಭದಲ್ಲಿಯೂ ಅಲ್ಪತನವನ್ನು ಒಳಗೆ ಬರಮಾಡಿ ಕೊಡದೆ ಮಹೋನ್ನತ ತತ್ವ ನಿಷ್ಠೆ ತಾಳುವುದು ಹೇಗೆ ಎಂದು ಕಾವ್ಯ ಧ್ವನಿಸುತ್ತಿದೆ.

ಪೂರ್ವಗ್ರಹಗಳಿಗೆ ಒಳಪಡದೆ ಯೋಚಿಸಿ, ವಿಚಾರಿಸಿ, ಚಿಂತಿಸಿ ಒಪ್ಪದ ಹಾಗೂ ಸಮ್ಮತಿ ನೀಡುವ ಬಗೆಯನ್ನು ವೈಚಾರಿಕತೆ ಕಲಿಸುತ್ತದೆ. ಈ ವೈಚಾರಿಕ ಚಿಂತನೆ ಶಿಕ್ಷಣದ ಮೂಲಕ ಬರುತ್ತದೆ ಎಂದು ಹೇಳಿದರೂ ಕೆಲವೊಂದು ಪ್ರದೇಶದ ದೇಶದ ಜನರು ಶಿಕ್ಷಿತರಾದರೂ ಮೌಢ್ಯತೆಯ ಆರಾಧಕರಾಗಿರುತ್ತಾರೆ. ಪೂರ್ವಾಗ್ರಹ ಪೀಡಿತರಾಗಿರುತ್ತಾರೆ. ಈ ಪೂರ್ವಾಗ್ರಹ ಪೀಡಿತವು ವೈಚಾರಿಕತೆಗೆ ವಿರುದ್ಧವಾಗಿದೆ. ಈ ಪೂರ್ವಾಗ್ರಹಗಳು ನಮ್ಮ ಅಭಿಪ್ರಾಯಗಳನ್ನು

ನಿರ್ಣಯಗಳನ್ನು ಹೇಗೆ ನಿಯಂತ್ರಿಸುತ್ತವೆ ಎಂಬ ಅರಿವು ಮೂಡದೇ ಹೋಗುತ್ತದೆ. ಪರಸ್ಪರ ಚರ್ಚೆ ಮಾತುಕತೆಗೆ ಬಾರದೆ ಒಂದೇ ಬಗೆಯ ಚಿಂತನೆಯನ್ನು ಮಾಡಿ ಏಕಮೇವ ನಿಲುವನ್ನು ತಾಳುವುದು ಅಪಾಯಕಾರಿಯಾದದ್ದು. ಇದಕ್ಕೆ ಪ್ರೇರಣೆ ಪೂರ್ವಾಗ್ರಹ ಪೀಡಿತ ಮನೋಭಾವನೆಯಾಗಿದೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಕಿರುದಾರಿಗಳ ಮೂಲಕ ಅನುಭವವನ್ನು ಕಟ್ಟುವ ಕ್ರಮ ಹೊಸದೇನೂ ಅಲ್ಲ. ಇಂಥ ಒಂದು ಕ್ರಮ ಕಾಣಿಸಿಕೊಂಡಾಗಲೆಲ್ಲಾ ಸಮಾಜದ ಚಿತ್ರಣ ಬದಲಾಗಿದೆ. ಬದುಕಿನ ಶೋಧನೆಯ ಹೊಸ ಸಾಧ್ಯತೆಗಳು ಮುನ್ನೆಲೆಗೆ ಬಂದಿವೆ. ಕಿರುದಾರಿಗಳು ಜೀವನ ಕ್ರಮದ ವಿನ್ಯಾಸಗಳು ಬದುಕಿನ ಬೇರೆ ಸಾಧ್ಯತೆಗಳನ್ನು ನಮ್ಮೆದುರು ಕಾವ್ಯ ಮಂಡಿಸುತ್ತಿದೆ. ಈ ಕಿರುದಾರಿಗಳಲ್ಲೇ ವಿಶ್ವಮಾನ ಪ್ರಜ್ಞೆಯನ್ನು ಅಭಿವ್ಯಕ್ತಿಸುತ್ತದೆ. ದೇಶಿದ್ರವ್ಯಗಳನ್ನು ಮುಖ್ಯವಾದದ್ದು ಜಾತ್ಯಾತೀತ ನಿಲುವು ಇದರರ್ಥ ಇಲ್ಲಿ ಜಾತಿಗಳೇ ಇಲ್ಲವೆಂದಲ್ಲಿ ತನ್ನ ಜಾತಿ–ಮತಕ್ಕೆ ಬದ್ಧವಾಗಿದ್ದು ಕೂಡ ಅನ್ಯಮತವನ್ನು, ಜಾತಿಯನ್ನು, ಗೌರವದಿಂದ ಕಾಯುವ ಅದರೆಲ್ಲ ಚಟುವಟಿಕೆಗಳಲ್ಲಿ ಶ್ರದ್ಧೆಯಿಂದ ಭಾಗವಹಿಸುವ ಕ್ರಿಯಾಶೀಲತೆ ಇಲ್ಲಿ ಕಾಣುತ್ತೇವೆ. ಗ್ರಾಮೀಣ ಪರಿಸರದ ಮುಖ್ಯ ಮಾನವೀಯ ಸಂಗತಿಗಳನ್ನು ಕಾವ್ಯದಲ್ಲಿ ಕಾವ್ಯದ ಮುಖ್ಯ ಆಶಯದಂತೆ ಅಭಿವ್ಯಕ್ತಗೊಂಡಿರುವದು ಕಂಡು ಬಂದಿದೆ. ಗ್ರಾಮೀಣ ಭಾಗದಲ್ಲಿ ಕಂಡು ಬರುವ ಕೂಡು ಕುಟುಂಬ ಚಿತ್ರಣವನ್ನು ವಿಶ್ವಮಾನವ ಸಂದೇಶವನ್ನು ಆಚರಣೆಯಲ್ಲಿ ತಂದಿರುವುದಕ್ಕೆ ಸಾಕ್ಷಿಯಾಗಿದೆ. ಸಮುದಾಯದ ಕಾಳಜಿ ಅವರನ್ನೆಲ್ಲ ಒಟ್ಟಿಗೆ ಬಂಧಿಸಿರುತ್ತದೆ. ಈ ಕಾರಣದಿಂದಾಗಿಯೇ ವ್ಯಕ್ತಿಗತ ಅಭಿಲಾಷೆಗಳು ಹಿನ್ನೆಲೆಗೆ ಸರಿದು ಸಮುದಾಯದ ಪರವಾದ ನಿಲುವುಗಳು ಮುನ್ನೆಲೆಗೆ ಬಂದಿರುತ್ತವೆ. ಮತೀಯ ಆಸಕ್ತಿಗೆ ಎಳ್ಳಷ್ಟೂ ಅವಕಾಶ ಮಾಡಿಕೊಡದಂತೆ ವಿಶ್ವಮಾನವ ಪ್ರಶ್ನೆಯನ್ನು ಬಿತ್ತುವಲ್ಲಿ ಕಾವ್ಯ ಯಶಸ್ಸು ಕಂಡಿದೆ. ವಿಶಿಷ್ಟಪದ ಬಳಕೆ ಪ್ರಯೋಗಶೀಲತೆಯಿಂದ ಕಾವ್ಯ ಹೊಸ ದಾರಿಗಳನ್ನು ಕಂಡುಕೊಂಡಿದೆ. ಹೊಸ ಹೊಸ ನುಡಿಗಟ್ಟುಗಳ ಮೂಲಕ ಹೊಸ ಚಿಂತನೆಯನ್ನು ಸೃಷ್ಟಿಸಿದೆ.

ಮಸೀದಿ ಮಂದಿರ ಕೆಡವಿ ತಾಜ್ ಮಹಲು ಕಟ್ಟಬೇಕಾಗಿದೆ
ವಸಂತನನು ಕರೆತರಲು ಈ ಕಲಿಗಾಲದಲಿ
ಮಲ್ಲಿಗೆತೋಟ ಬೆಳಸಬೇಕಾಗಿದೆ
ಮಲಗಿದಮಸಣ ಹುಚ್ಚೆದ್ದು ಕುಣಿಯುತ್ತದೆ
ಹೊಸಹಾಡು ಹಾಡಬೇಕಾಗಿದೆ.[೧೬]

ಕವಿ ಪ್ರೀತಿಯನ್ನು ಬಿತ್ತುವ ಆಶಯ ವ್ಯಕ್ತಪಡಿಸಿದ್ದಾರೆ. ಮನುಷ್ಯನಿಗೆ ಬೇಕಾಗಿರುವುದು ಧರ್ಮ, ದೇವರು ಅಲ್ಲ, ಮಸೀದಿ, ಗುಡಿ, ಮಂದಿರ, ಚರ್ಚುಗಳಲ್ಲ ಬದಲಿಗೆ ಪ್ರೀತಿ, ನೆಮ್ಮದಿ, ಮಮಕಾರ, ವಾತ್ಸಲ್ಯ ಇವುಗಳು ಬೇಕಾಗಿವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಮನುಷ್ಯನು ಇವುಗಳಿಗೆ ಮಹತ್ವ ನೀಡದೆ ಮೌಢ್ಯತೆಗೆ ಶರಣಾಗಿ ಮತೀಯವಾದಕ್ಕೆ ಹೆಚ್ಚಿನ ಒಲವನ್ನು ತೋರಿ ಮಾನವೀಯತೆಯನ್ನು ಮಾರಿಕೊಂಡು ಕ್ರೂರವಾಗಿ ವರ್ತಿಸುತ್ತಿದ್ದಾನೆ.

ಇಂತಹ ಮನಸ್ಸುಗಳನ್ನು ನಾಶಮಾಡಿ ಪ್ರೀತಿಯ ಬೆಳಕನ್ನು ಕಾಣಬೇಕು ಅದಕ್ಕಾಗಿ ಕವಿ ಮಂದಿರ, ಮಸೀದಿಗಳನ್ನು ಕೆಡವಿ ಪ್ರೀತಿಯ ಸಂಕೇತವಾಗಿರುವ ತಾಜ್‌ಮಹಲ್‌ನ್ನು ಕಟ್ಟಬೇಕು ಎಂದು ರೂಪಕದ ಮೂಲಕ ಹೇಳಿದ್ದಾರೆ. ಮಂದಿರ ಮಸೀದಿಗಳು ಧರ್ಮದ ಸಾರವನ್ನು ದೇವರ ಸ್ವರೂಪವನ್ನು ಜನರಲ್ಲಿ ಬಿತ್ತುವುದರಿಂದ ಒಂದು ನಿರ್ಬಂಧಿತ ಧರ್ಮಕ್ಕೆ ಶರಣಾಗಿ ಅದು ಹೇಳದಂತೆ ಕೇಳುವ ಮನಸ್ಥಿತಿಗೆ ತಲುಪುತ್ತಾನೆ. ಇದು ಅಪಾಯಕಾರಿಯಾದದ್ದು ತನ್ನ ಧರ್ಮವನ್ನು ಎಷ್ಟರಮಟ್ಟಿಗೆ ಆರಾಧಿಸಿ ಪ್ರೀತಿಸುತ್ತಾನೋ ಹಾಗೇ ಬೇರೊಂದು ಧರ್ಮವನ್ನು ಸಹ ಪ್ರೀತಿಸುವ, ಆರಾಧಿಸುವ ಮನಸ್ಥಿತಿ ಮನೋಧರ್ಮ ತಾಳಬೇಕು. ಎಂದು ಕಾವ್ಯ ನುಡಿಯುತ್ತಿದೆ. ಎಷ್ಟೇ ಜನರು ತಮ್ಮ ವಾಸಕ್ಕೆ ಮನೆ ಇರುವುದಿಲ್ಲ, ಸಣ್ಣಪುಟ್ಟ ಜೋಪಡಿಗಳಲ್ಲಿ ವಾಸವಾಗಿರುತ್ತಾರೆ. ಆದರೆ ಗುಡಿ, ಮಸೀದಿ, ಮಂದಿರ ಕಟ್ಟಲು ಮುಂದಾಗುತ್ತಾರೆ. 'ದೇವರನ್ನು ಸಂಸ್ಥಾಪಿಸಿ' ಭಕ್ತಿಯ ಹೆಸರಲ್ಲಿ ಭಾವನಾತ್ಮಕದ ಅತಿ ಮೇರೆಯನ್ನು ತಲುಪಿ, ವಿಚಾರ ಶಕ್ತಿಯನ್ನು ನಾಶಮಾಡಿಕೊಂಡು, ಇರಬೇಕಾಗ ರೀತಿಯಲ್ಲಿ ಇರುವುದಿಲ್ಲ. ಪಾಪ-ಪುಣ್ಯದ ಹೆಸರಲ್ಲಿ ಭಯದ ಜೀವನ, ಸ್ವರ್ಗ-ನರಕದ ಕಲ್ಪನೆಯಲ್ಲಿ ಬದುಕನ್ನು ಕಟ್ಟುವ ರೀತಿ ವಿಚಿತ್ರವಾಗಿದೆ. ಅದಕ್ಕಾಗಿ ಕಾವ್ಯ ಇವು ಯಾವುದನ್ನು ಗಣ್ಯವೆಂದು ಭಾವಿಸದೆ ಮನುಷ್ಯ-ಮನುಷ್ಯರನ್ನು ಪ್ರೀತಿಸುವ, ಜೀವನವನ್ನು ಪ್ರೀತಿಯಿಂದ ಆರಾಧಿಸುವ ಬಗೆಯನ್ನು ಹೇಳುತ್ತದೆ. ಮನುಷ್ಯನಿಗೆ ಬೇಕಿರುವುದು ಧರ್ಮವಲ್ಲ ಪ್ರೀತಿ ಎಂದು ಕವಿ ಹೇಳಿದ್ದಾನೆ.

ಧರ್ಮದ ಅಮಲು ಅಂಟಿಕೊಂಡ ಹೃದಯ ಯಾವತ್ತು ಅಖಂಡತೆಯ ಕುರಿತು ಯೋಚನೆ ಮಾಡಲಾರದು. ಯಾರು ದೇವರನ್ನು ಭಯದಿಂದ ಪೂಜಿಸುತ್ತಾರೋ ಅವರಲ್ಲಿ ಪ್ರೀತಿಯು ಇರುವುದಿಲ್ಲ. ಯಾರು ದೇವರನ್ನು ಪ್ರೀತಿಯಿಂದ ಪ್ರೀತಿಸುತ್ತಾರೋ, ದೇವರನ್ನು ದೇವರಿಗಾಗಿ ಪ್ರೀತಿಸುತ್ತಾರೋ, ಅವರಲ್ಲಿ ಪ್ರೀತಿ ಇರುತ್ತದೆ. ದೇವರನ್ನು ತಮ್ಮ ಸ್ವಾರ್ಥ, ಆಶೆ, ಆಕಾಂಕ್ಷೆಗಳಿಗೆ, ಭಯದಿಂದ ವಿಚಾರತೆಯನ್ನು ದೂರಮಾಡಿಕೊಂಡು ಆರಾಧಿಸುವ ಮನಸ್ಸುಗಳು ವೈಚಾರಿಕತೆಯಿಂದ ದೂರ ಇರುವುದಾಗಿದೆ. ಅದು ಕೇವಲ ಅತಿಯಾದ ಭಾವನಾತ್ಮಕತೆಯಾಗಿದೆ. ಒಬ್ಬರಿಗೊಬ್ಬರೂ ದ್ವೇಷದಿಂದ ಕಾಣುವ, ವೈರತ್ವದ ಸಾಧಿಸುವ ಮನಸ್ಸುಗಳಿಗೆ ಕಾವ್ಯ ಪ್ರೀತಿಯ ಬೀಜ ಬಿತ್ತಲು ಮುಂದಾಗಿದೆ. ಅವರಲ್ಲಿರುವ ದ್ವೇಷ, ವೈರತ್ವ, ಹಗೆತನವನ್ನು ದೂರ ಮಾಡಿ ಅವರನ್ನು ಮನುಷ್ಯರಾಗಿಸಲು ಕಾವ್ಯ ಹಂಬಲಿಸುತ್ತಿದೆ. ಅದಕ್ಕಾಗಿ ಕವಿ ತಾಜ್‌ಮಹಲ್ ಕಟ್ಟಬೇಕಿದೆ, ಗುಡಿ, ಮಸೀದಿ, ಮಂದಿರಗಳಲ್ಲಿ ಎಂದಿದ್ದಾರೆ. ಕಟ್ಟಬೇಕಾಗಿರುವುದು ಮೂರ್ತವಾದರೂ ಪ್ರೀತಿ ಅಮೂರ್ತವಾದ ಜೀವಜಲವಾಗಿದೆ. ಮುಖ್ಯ ಆಶಯವಾಗಿದೆ. ಮನುಷ್ಯನ ದುರಂತದ ಮುಖಗಳನ್ನು ದೂರಮಾಡಿ ಮನುಷ್ಯತ್ವ, ಮಾನವೀಯತೆಯ ಮುಖ ನಿರ್ಮಿಸಲು ಕಾವ್ಯ ಬಯಸಿದೆ ಅದೇ ವಿಶ್ವಮಾನವ ಪ್ರಶ್ನೆಯನ್ನಾಗಿಸಿದೆ.

ದಿನನಿತ್ಯದ ಅನುಭವಗಳನ್ನು ಕಾವ್ಯವಾಗಿಸಿ ಹೊಸ ಹೊಸ ನುಡಿಗಟ್ಟುಗಳನ್ನು ಪ್ರಯೋಗಾತ್ಮಕ ವಾಗಿ ಸೃಷ್ಟಿಸಿ ಕಾವ್ಯ ಭಾಷೆಯನ್ನು ಪರಿವರ್ತಿಸಿ ಹೊಸ ಬಗೆಯಲ್ಲಿ ಕಾವ್ಯ ಸಾಗಿದೆ. ಈ

ಪಯಣದಲ್ಲಿ ದೇಶದ, ಪ್ರಪಂಚದ ನಾನಾ ಭಾಗದಿಂದ ಜ್ಞಾನ ಪಡೆದು ಯಾವುದೇ ಗಡಿ ಭಾಗಗಳನ್ನು ಕೊರೆದುಕೊಳ್ಳದೆ ಜೀವಪರವಾದ ಜ್ಞಾನ ಎಲ್ಲೆ ಇದ್ದರೂ ಅದು ತನ್ನದಾಗಿಸಿಕೊಂಡು ಪ್ರತಿಕ್ರಿಯಿಸುವ ಪರಿ ವಿಶಿಷ್ಟವಾಗಿದೆ. ಅದರಂತೆ ವಿಶ್ವಮಾನವ ಪ್ರಜ್ಞೆಯನ್ನು ಕಾವ್ಯ ಮುಖ್ಯ ಆಶಯ ತಾತ್ವಿಕ ನೆಲೆಯಾಗಿ ಅಭಿವ್ಯಕ್ತಿಸುವುದು ಕಂಡುಬಂದಿದೆ. ಸಮಕಾಲೀನ ಸಂದರ್ಭದಲ್ಲಿ ಕಾವ್ಯ ರಚನೆಗೆ ತೊಡಗಿದ ಅನೇಕ ತರುಣ ಕವಿಗಳು ಹೊಸ ಸಿದ್ಧಿಗೆ, ಸಾಧನೆಗೆ, ಹಂಬಲಿಸುತ್ತಿರುವುದು ಅವರ ಕಾವ್ಯದಲ್ಲಿ ಕಂಡುಬಂದಿದೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ವಿಶೇಷ ಆರ್ಥಿಕ ವಲಯಗಳು ತರುವ ಆಪತ್ತುಗಳ ಕುರಿತಾಗಿ ಎಚ್ಚರಿಕೆಯನ್ನು ನೀಡಿದೆ. ಹಾಗೂ ಅವು ಬಂಡವಾಳಶಾಹಿ ಪರವಾದ ನಿಲುವಿಗೆ ಹೊಂದಿಕೊಳ್ಳುವ ಆಶಯವಿದೆ ಎಂದು ಕಾವ್ಯ ಹೇಳುತ್ತಾ ಬಂಡವಾಳಶಾಹಿತ್ವವನ್ನು ಧಿಕ್ಕರಿಸಿದೆ. ಅಂತಹ ಮನಸ್ಥಿತಿಗೆ ವೈಚಾರಿಕ ಪ್ರಜ್ಞಾ ಕಾರಣವಾಗಿದೆ. ಇಡೀ ಜಗತ್ತನ್ನೇ ಒಂದು ವ್ಯಾಪಾರ ಕೇಂದ್ರವಾಗಿಸಿತು. ಹೊರಟಿರುವ ಪ್ರಭುತ್ವಕ್ಕೆ ಕಾವ್ಯ ಧಿಕ್ಕಾರ ಹೇಳಿದೆ. ಅದು ಹಳ್ಳಿಗಾಡಿನ ನೆಲ ಮೂಲ ಸಂಸ್ಕೃತಿಯನ್ನು ನಾಶ ಮಾಡುವ ಬೇರೊಂದು ಸಂಸ್ಕೃತಿಯ ಹೇರುವುದಾಗಿದೆ. ಈ ಹೇರುವಿಕೆಯನ್ನು ಕಾವ್ಯ ಪ್ರತಿಭಟಿಸಿ ತನ್ನ ಅಸ್ಮಿತೆಯನ್ನು ಕಾಪಾಡಿಕೊಂಡು ವಿಶ್ವಮಾನವತೆಯನ್ನು ಹೇಗೆ ಕಾಣಬೇಕು ಎಂದು ತಿಳಿಸಿಕೊಟ್ಟಿದೆ. ಇದಕ್ಕಾದ ಪ್ರೇರಣೆಯಾಗಿ ವಚನ, ಚಳುವಳಿ, ಸೂಫಿ ತತ್ವ, ಮಾರ್ಕ್ಸ್‌ವಾದ, ಅಂಬೇಡ್ಕರ್‌ವಾದ, ಬುದ್ಧನ ಚಿಂತನೆಗಳು ಜಾನಪದ ಸಂಸ್ಕೃತಿಯ ನೆಲೆಗಳು ಪ್ರೇರಣೆಯಾಗಿವೆ.

ಕುವೆಂಪುರವರ ಅನಿಕೇತನ ಪಥ್ಯ ಅರ್ಥವು ವಿಶ್ವಮಾನವ ಪ್ರಜ್ಞೆಯನ್ನು ಸಾರುತ್ತದೆ. ಇದರ ಆಶಯದಂತೆ ಸಮಕಾಲೀನ ಕಾವ್ಯವು ತನ್ನ ಅಭಿವ್ಯಕ್ತಿಯ ಮುಖ್ಯ ಆಶಯವಾಗಿಸಿಕೊಂಡಿದೆ. ಮನೆಯನೆಂದು ಕಟ್ಟದಿರು ಎಂಬ ಸಂದೇಶವನ್ನು ಅಂತರಗತವಾಗಿಸಿಕೊಂಡಿದೆ. ಸೀಮಿತ ಮನಸ್ಥಿತಿಯನ್ನು ತಾಳದೆ ಮುಕ್ತ ವೈಚಾರಿಕತೆಗೆ ಮುಖಮಾಡಿ ಜೀವಿಸುವುದನ್ನು ಕಾವ್ಯ ಕಲಿಸುತ್ತದೆ. ಜಾತೀಯತೆಯ ಅವಿವೇಕದಿಂದ ದೂರನಿಲ್ಲಬೇಕೆಂಬ ಪ್ರಾಮಾಣಿಕ ವಿಚಾರವಾದಿಗಳಿಗೂ ವಿಶ್ವಮಾನವ ಸಂದೇಶದ ಕೆಲವು ಮಾತುಗಳ ಅಸಂಭವವಾಗಿ ಅಸಹಜವಾಗಿ ಕಾಣಬಹುದು. ಆದರೆ ಪ್ರತಿಯೊಬ್ಬರು ತನಗೆ ಸಾಧ್ಯವಾದವುಗಳನ್ನೆಲ್ಲಾ ಓದಿ ತನ್ನ ದರ್ಶನವನ್ನು ತಾನೇ ನಿರ್ಣಯಿಸಿಕೊಳ್ಳಬೇಕು. ಆಗ ನಿಜವಾದ ವೈಚಾರಿಕತೆ ಸಾರ. ವಿಶ್ವಮಾನವ ಸಾರ ಅರಿಯಲು ಸಾಧ್ಯ ಎಂದಿದ್ದಾರೆ. ಭವಿಷ್ಯ ಮಾನವನ ಭವ್ಯ ಜೀವನಕ್ಕೆ ಅನಿವಾರ್ಯವಾದ ಅಡಿಗಲ್ಲು ಈ ವಿಶ್ವಮಾನವ ಪ್ರಶ್ನೆಯಾಗಿದೆ. ಇದನ್ನು ಕಾವ್ಯ ತನ್ನ ಆಂತರ್ಯದಲ್ಲಿ ಒಡಮೂಡಿಸಿಕೊಂಡು ಜನಮನ ಮುಟ್ಟಿ ಸಮಷ್ಟಿ ಚೇತನ ಸಾಗರದಲ್ಲಿ ವಿಶ್ವಮಾನವ ತರಂಗಗಳನ್ನು ಮೂಡಿಸುತ್ತಿದೆ.

### ೭.೩. ಮಾನವೀಯ ಮೌಲ್ಯಗಳು

ಯಾವುದೇ ಜ್ಞಾನಶಿಸ್ತು, ಸಾಹಿತ್ಯ ಇನ್ನಿತರ ಯಾವುದೇ ಪ್ರಕಾರದ್ದಾದರೂ ಮಾನವ ಪರವಾಗಿದ್ದರೆ ಅದು ಮೌಲ್ಯಯುತವಾಗಿರುತ್ತದೆ. ಒಂದು ನಿರ್ಬಂಧಿತ ಚೌಕಟ್ಟಿನಲ್ಲಿ ಮತೀಯ ಅಂಶವನ್ನು ಬಿತ್ತುವ, ಆಶಯ ಹೊಂದಿದ್ದರೆ ಅದು ಜೀವಪರ ಕಾಳಜಿಗೆ ವಿರುದ್ಧವಾಗಿರುತ್ತದೆ.

ಸಮಕಾಲೀನ ಕನ್ನಡ ಕಾವ್ಯದಲ್ಲಿ ಮಾನವೀಯ ಮೌಲ್ಯಗಳಾದ ಪ್ರೀತಿ, ಪ್ರೇಮ, ಸ್ನೇಹ, ನಂಬಿಕೆ, ಸಹಕಾರ ಇನ್ನಿತರ ವಿಷಯದ ಕುರಿತು ಅಭಿವ್ಯಕ್ತಿಸಿರುವುದು ಕಂಡು ಬಂದಿದೆ. ಕಾವ್ಯ ಸಾಮಾಜಿಕ ಚಿಂತನೆಯನ್ನು ಹೇಳುವುದರ ಜೊತೆಗೆ ಮಾನವೀಯ ಮೌಲ್ಯಗಳ ಕುರಿತು ಅಭಿವ್ಯಕ್ತಿಸಿದೆ. ದೇಶೀತನದ ಮುಖ್ಯ ಲಕ್ಷಣಗಳಲ್ಲಿ ವ್ಯಕ್ತಿತ್ವ ನಡುವಳಿಕೆ ತಿಳುವಳಿಕೆ ತನ್ಮೂಲಕ ಉಂಟಾಗಬೇಕಾದ ಮಾನವೀಯ ನೆಲೆಗಳ ಅವಿಷ್ಕಾರ ಇವೂ ಬಹಳ ಮಹತ್ವವಾದದ್ದಾಗಿವೆ. ಈ ತಿಳುವಳಿಕೆಯ ರೀತಿಯ ಜೀವನ ಶೋಧನೆಯ ಭಾಗವಾಗಿಯೇ ಹುಟ್ಟುವಂಥದ್ದು. ಒಂದು ರೀತಿಯ ಬದುಕಿನಲ್ಲಿ ಸೃಜನ ಕ್ರಿಯೆಯ ಪ್ರಕ್ರಿಯೆ ಇಲ್ಲಿ ಮುಖ್ಯವಾದ ಚಟುವಟಿಕೆಯಾಗಿದೆ. ನಗರಜೀವನ ಮತ್ತು ಹಳ್ಳಿಜೀವನದ ವ್ಯತ್ಯಾಸಗಳನ್ನು ತಿಳಿಸುತ್ತ, ನಗರದಲ್ಲಿ ಮಹಲ್‌ಗಳು ನಿರ್ಮಾಣವಾಗುತ್ತಿವೆ. ಮನಸ್ಸುಗಳ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಿದೆ. ಕಾವ್ಯ ಅದಕ್ಕಾಗಿ ವಿ.ಆರ್. ಕಾರ್ಪೆಂಟರ್ 'ಧ್ಯಾನಸ್ತ ಬಂಗಲೆಗಳು' ಎಂಬ ಪದ್ಯದಲ್ಲಿ ಮನುಷ್ಯ ಸಂಬಂಧಗಳ ಕುರಿತು ಮಾನವೀಯ ಮೌಲ್ಯಗಳ ಕುರಿತು ವಿಶ್ಲೇಷಿಸುತ್ತಾರೆ. ಪ್ರೀತಿ, ಪ್ರೇಮ, ಆತ್ಮೀಯತೆ ನಾಶವಾಗಿ ಕೇವಲ ಆಧುನಿಕ ಬದುಕಿನಲ್ಲಿ ಮನುಷ್ಯ ಯಂತ್ರದೊಂದಿಗೆ ಬದುಕಿ ತನ್ನ ಮನಸ್ಸನ್ನು ಯಂತ್ರವಾಗಿಸಿಕೊಂಡಿದ್ದಾನೆ ಎಂದು ಹೇಳುತ್ತಾರೆ. ಹಾಗೇ ಎಸ್.ಹನುಮಂತಯ್ಯ ಅವರು "ಬಾ ಗೆಳತಿ ಚೂರಾದ ಮುಖಗಳನ್ನು ಆಯೋಣ" ಅಂತ ಹೇಳಿರುವುದು ಮೌಲ್ಯದ ಸೂಚಕವಾಗಿದೆ. ನೊಂದ ಮನಸ್ಸುಗಳಿಗೆ ಪ್ರೀತಿ ತೋರಿಸೋಣ, ಕಣ್ಣೀರ ಹೊರೆಸೋಣ, ನಾವು ಮನುಷ್ಯರಾಗಿ ಮನುಷ್ಯತ್ವ ಜಿತ್ತೋಣ ಬಾ ಗೆಳತಿ ಚೂರಾದ ಮುಖಗಳನ್ನು ಆಯೋಣ ಎಂದು ತಮ್ಮ ಕವಿತೆಯಲ್ಲಿ ಹೇಳಿದ್ದಾರೆ. ಹಾಗೇ ವಿಭಾ ಅವರು ತಮ್ಮ ಸಂಕಲನದ ಹೆಸರಾದ ಜೀವ ಮಿಡಿತದ ಸದ್ದು. ತಮ್ಮ ಜೀವ ಯಾವುದಕ್ಕಾಗಿ ಮಿಡಿಯುತ್ತಿದೆ. ಯಾವುದಕ್ಕಾಗಿ ಸದ್ದು ಮಾಡುತ್ತಿದೆ ಎಂದು ಹೇಳುತ್ತಾ ಪ್ರೀತಿಗಾಗಿ, ಸ್ನೇಹಕ್ಕಾಗಿ ಅಂತರಂಗದ ಒಲವಿಗಾಗಿ ಮಿಡಿಯುವುದನ್ನು ಅಭಿವ್ಯಕ್ತಿಸುತ್ತಿದೆ.

ಸಮಕಾಲೀನ ಅನೇಕ ಕವಿಗಳು ತಮ್ಮ ಕಾವ್ಯದಲ್ಲಿ ವ್ಯಕ್ತಿತ್ವದ ಕುರಿತು, ಮನುಷ್ಯತ್ವದ ಕುರಿತು, ಪ್ರೀತಿ, ಪ್ರೇಮದ ನಂಬಿಕೆಯಂತಹ ಮಾನವೀಯ ಮೌಲ್ಯಗಳ ಕುರಿತು ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಕಾವ್ಯ ಅಂಬೇಡ್ಕರ್ ಚಿಂತನೆ, ಗಾಂಧಿ ಚಿಂತನೆ, ಲೋಹಿಯಾ ಚಿಂತನೆ, ವೈಚಾರಿಕ ಚಿಂತನೆಯನ್ನು ಸಾರುವುದರ ಜೊತೆಗೆ ನೆಲ ಮೂಲ ಸಂಸ್ಕೃತಿಯ ಜೀವ ನೆಲೆಯಾದ ಪ್ರೀತಿ, ಪ್ರೇಮದ ಕುರಿತು ಅಭಿವ್ಯಕ್ತಿಸಿದ ಬಗ್ಗೆ ವಿಶೇಷವಾಗಿದೆ. ಇದಕ್ಕೆ ವಚನಕಾರರ, ದಾಸರ, ಕೀರ್ತನಕಾರರು ಸಾಹಿತ್ಯದ ಪ್ರೇರಣೆಯಾಗಿದೆ. ಪ್ರೇಮ ಸ್ವರೂಪದ ಹಲವು ಬಗೆಯನ್ನು ಇಲ್ಲಿ ವ್ಯಕ್ತಪಡಿಸಿದೆ. ದಾಂಪತ್ಯದ ಪೂರ್ವದಲ್ಲಿ ಗಂಡು-ಹೆಣ್ಣು ದಾಂಪತ್ಯ ನಂತರ ಚೌಕಟ್ಟಿನ ಗಂಡು-ಹೆಂಡತಿಯ ಪ್ರೀತಿ, ಲೋಕದೊಳಗಿನ ಸ್ತ್ರೀ-ಪುರುಷ, ಮಗ-ಪೋಷಕರ, ಪ್ರೀತಿ, ವ್ಯಕ್ತಿ ಮತ್ತು ಸಮಾಜ, ಸಮುದಾಯದ ಪ್ರೀತಿ ಹೀಗೆ ಮನುಷ್ಯ ನೆಮ್ಮದಿಯಿಂದ ಮೌಲ್ಯಯುತವಾಗಿ ಬದುಕನ್ನು ಸಾಗಿಸಲು ಸಹಾಯಕವಾಗುವ ಅಂಶಗಳಲ್ಲಿ ಮಾನವೀಯ ಮೌಲ್ಯಗಳಾಗಿವೆ.

ಕವಿತೆಯು ಬಳಿಯ ಒಡಲೊಳಗಿರುವ ಹೂವಿನಂತೆ, ಹಸಿರು ಬಳ್ಳಿಯಲ್ಲಿ ವಿಭಿನ್ನ ಬಣ್ಣದ ಹೂವು ಮಾಡುವುದೊಂದು ಸೋಜಿಗ. ಅದು ಪ್ರಕೃತಿ ಸಹಜವಾದ ಕ್ರಿಯೆಯೂ ಹೌದು. ಕವಿ ಪ್ರತಿಭೆಯಿಂದ ಕವಿತೆ ಮೂಡುವುದರ ಅಷ್ಟೇ ಅಚ್ಚರಿ ಸಂಗತಿ, ಅಂತಹ ಸಹಜ ಸೃಷ್ಟಿ ಸಮಕಾಲೀನ ಕಾವ್ಯದಲ್ಲಿ ಕಂಡುಬಂದಿದೆ. ಕವಿತೆ ಹೊರಹೊಮ್ಮುವ ಮೊದಲು ಕವಿಯ ಅಂತರಂಗಕ್ಕೆ ಇಳಿದು ಆ ಮೂಲಕ ತನ್ನತನವನ್ನು ಸಮಾಜಕ್ಕೆ ನೀಡುತ್ತಾನೆ. ಕವಿತೆ ಜನನಿಸುವ ಮೊದಲು ಕವಿಗೆ ಭಯ. ಆತಂಕ ಇದ್ದೇ ಇರುತ್ತದೆ. ಪೂರ್ತಿ ದೃಷ್ಟಿಯಲ್ಲಿ ಕಾವ್ಯರಚನೆ ಪ್ರಜ್ಞಾಪೂರ್ವಕವಾದುದಲ್ಲಿ. ಅದು ಪ್ರತಿಭೆಯ ಕಾರ್ಯ. ಸಹಜ ಕ್ರಿಯೆ ಕೇವಲ ಬುದ್ಧಿಗೆ ನಿಲುಕುವಂಥದ್ದು. ಆದ್ದರಿಂದ ಸಮಕಾಲೀನ ಕಾವ್ಯ ಸಹಜದ ಜೊತೆಗೆ ಪ್ರತಿಭೆಯು ಇದೆ. ಕಾವ್ಯದ ವ್ಯಾಖ್ಯಾನ ಬದಲಾಗಿದೆ. ಹೂ ಅರಳುವುದು ಒಂದು ಕಾವ್ಯವೇ, ಮಗು ನಗುವುದು, ಅಳುವುದು, ಪ್ರೇಯಸಿ ಮುತ್ತು, ಅವ್ವನ ಸೆರಗಿನ ತುದಿಯ ಮಮಕಾರ ಎಲ್ಲಿವೂ ಕಾವ್ಯವಾಗಿವೆ. ಆದ್ದರಿಂದ ಸಮಕಾಲೀನ ಕಾವ್ಯ ವಿಶೇಷ ರೀತಿಯಲ್ಲಿ ಅಭಿವ್ಯಕ್ತಿಸುವುದು ಕಂಡುಬಂದಿದೆ. ಕವಿಯು ಲೋಕದ ಅನುಭವವನ್ನು ಪಡೆದು ಕವಿಯ ಅಂತರಂಗದ ಪರಿಪಕ್ವಗೊಂಡು ಹೆಣ್ಣಾಗಿ ಕಾವ್ಯೋದಯಕ್ಕೆ ಕಾರಣವಾಗುತ್ತದೆ. ಹೀಗೆ ಕಾರಣವಾದ ಕಾವ್ಯ ಮನುಷ್ಯನ ಬದುಕಿಗೆ, ಸಮಾಜಕ್ಕೆ ಹೊಸ ಚಿಂತನೆ ಮತ್ತು ದಾರಿಯನ್ನು ನೀಡುವಂತಿರಬೇಕು ಹೀಗಾದಾಗ ಮಾತ್ರ ಕಾವ್ಯ ಸರ್ವಕಾಲಕ್ಕೂ ಸಲ್ಲುತ್ತದೆ.

ಮನುಷ್ಯರೆಲ್ಲ ಮನುಷ್ಯರಾದ ದಿನ
ರಕ್ತ ನೋಡಲು ಸಿಗುವುದಿಲ್ಲ
ಹೋಲಿಕೆಗಳಿರುವುದಿಲ್ಲ
ರಕ್ತ ಗುಂಪುಗಳು ನಾ ಮುಂದು ತಾ ಮುಂದು ಎನ್ನುವುದಿಲ್ಲ
ಕುಲುಕಿದ ಕೈ ಸುಡುವುದಿಲ್ಲ
ಮನುಷ್ಯರೇ ಕಟ್ಟಿಕೊಂಡ ಮನುಷ್ಯತ್ವದ ಮನೆಗೆ
ಗೋಡೆಗಳಿರುವುದಿಲ್ಲ. ದಾಳಿಗಳಿರುತ್ತವೆ[೧]

ಕವಿ ಇಲ್ಲಿ ಮನುಷ್ಯರೆಲ್ಲ ಮನುಷ್ಯರಾಗುವ ದಿನಕ್ಕಾಗಿ ಹಂಬಲಿಸುವುದು ಕಂಡು ಬಂದಿದೆ. ಯಾವಾಗ ಮಾನವೀಯ ಮೌಲ್ಯಗಳಾದ ಪ್ರೀತಿ, ಪ್ರೇಮ, ಸ್ನೇಹ, ಜಾತಿಗಳನ್ನು ದೂರ ಮಾಡಿ ಅಂತರವನ್ನು ದೂರ ಮಾಡಿ ಮನುಷ್ಯ ಎದೆಯೊಳಗೆ ನಾಟುತ್ತವೋ, ಆಗ ಪ್ರತಿಯೊಬ್ಬರು ಮನುಷ್ಯರಾಗುತ್ತಾರೆ. ಮನುಷ್ಯರಾದಾಗ ನಮ್ಮ ನಮ್ಮಗಳ ಮಧ್ಯ ಗೋಡೆಗಳು ಇರುವುದಿಲ್ಲ. ದ್ವೇಷ, ಅಸೂಯೆಗಳು ಇರುವುದಿಲ್ಲ. ಸ್ಪರ್ಶ-ಅಸ್ಪರ್ಶ ಎಂಬ ಭಾವನೆ ಧರ್ಮ, ಜಾತಿ ಎಂದು ಬೇದಗಳು ಇರುವುದಿಲ್ಲ. ನಮ್ಮದೆಲ್ಲ ಒಂದೇ ರಕ್ತವಾಗಿರುತ್ತದೆ. ಈಗಲೂ ಹಲವು ರಕ್ತ ಗುಂಪುಗಳನ್ನು ಸೃಷ್ಟಿಸಿಕೊಂಡ ಮಾನವ, ಮನುಷ್ಯನಾದಾಗ ರಕ್ತದ ಬಣ್ಣ ಗುಂಪು ಒಂದೇಯಾಗಿರುತ್ತದೆ. ಪರಸ್ಪರ ಭ್ರಾತೃತ್ವ ಸಹೋದರತ್ವ ನಮ್ಮನ್ನು ಪೋಷಿಸುತ್ತದೆ. ಕುಲುಕಿದ ಕೈ ಕಾಪಾಡುತ್ತದೆ ಸುಡುವುದಿಲ್ಲ. ಈ ಮೌಲ್ಯಗಳಿಂದ ದೂರ ಇದ್ದಾಗ ಕುಲಕಿದ ಕೈ ಸುಡುತ್ತವೆ

ಎಂಬ ಉಚ್ಚಾರಿಕೆಯ ಮಾತುಗಳನ್ನು ಕವಿ ಇಲ್ಲಿ ನುಡಿದಿದ್ದು ಕಂಡು ಬಂದಿದೆ. ಚೆಲುವೆ ದೇವರ ಒಲವೇ ಪೂಜೆ ಎಂಬ ಸ್ಥಿತ್ಯಂತರಕ್ಕೆ ಬಂದು ಮನುಷ್ಯ, ಮನುಷ್ಯತ್ವ ಬೆಳೆಸಿಕೊಂಡು ಸಮಾಜದ ಐಕ್ಯತೆಗೆ, ಏಳಿಗೆಗೆ ಶ್ರಮಿಸುತ್ತಾನೆ.

ಪ್ರಸ್ತುತ ದಿನಮಾನದಲ್ಲಿ ಮತೀಯ ಭಾವನೆ ಅಧಿಕವಾಗಿ ಕೋಮುವಾದದ ಭಾವ ಮತ್ತು ಮೂಲಭೂತವಾದದ ಪ್ರಭಾವ ಮನುಷ್ಯರ ಮೇಲೆ ತುಂಬಾ ಪರಿಣಾಮಕಾರಿ ಕೆಲಸಮಾಡುತ್ತದೆ. ಈ ಕೆಲಸ ಅಮಾಯಕ ಜನರ ಸಾವು-ನೋವಿಗೆ ಕಾರಣವಾಗಿದೆ. ಅತಂತ್ರದ ಬದುಕನ್ನು ಕಳೆಯುತ್ತಿದ್ದಾರೆ. ಪರಸ್ಪರ ಒಬ್ಬರಿಗೊಬ್ಬರು ಮಾತನಾಡದ ದುರಂತ ಕಾಲಘಟ್ಟಕ್ಕೆ ತಲುಪಿದ್ದವು. ಧರ್ಮ, ಧರ್ಮ ಮಧ್ಯ, ಜಾತಿ ಜಾತಿಯ ಮಧ್ಯೆ, ಮನುಷ್ಯ ಮನುಷ್ಯರ ಮಧ್ಯೆ, ಗೋಡೆಗಳು ಎದ್ದು ಪ್ರೀತಿ ವಾತ್ಸಲ್ಯ, ಪ್ರೇಮಗಳಲ್ಲಿ ಮುಚ್ಚಿ ಹಾಕಿದ್ದಾರೆ. ಇದಕ್ಕೆ ಪ್ರತಿಯಾಗಿ ಕಾವ್ಯ. ಮನುಷ್ಯನ ನೆಮ್ಮದಿಯ ಬದುಕಿಗೆ ಆ ರೂಪದಿಂದ ಹೊರ ತಂದು ಮಾನವೀಯ ಮೌಲ್ಯಗಳ ಕುರಿತಾಗಿ ಪಾಠ ಮಾಡಿದೆ. ನೀತಿ ಹೇಳುತ್ತಿದೆ. ಕಾವ್ಯವನ್ನು ಕುರಿತು ಕವಿ ಬೇಂದ್ರೆ ಕವಿಯ ಶ್ರದ್ಧೆಯ ಕುರಿತಂತೆ ತುಂಬಾ ಗಂಭೀರವಾದ ವಿಚಾರಗಳನ್ನು ಹೇಳಿದ್ದಾರೆ. ವಾಗ್ಮೀಯತೆ, ಸಂವಾದ, ವಾಗ್ವಾದ, ಮಮಕಾರಗಳು ಕುರಿತಂತೆ ಇಂತಹ ವಿಷಯಗಳನ್ನು ಮರುಧ್ವನಿಸುವ ರೀತಿಯಲ್ಲಿ ತುಂಬಾ ಶ್ರದ್ಧೆ ಕಂಡುಬರುತ್ತದೆ. ಸೌಹಾರ್ದತೆಗಾಗಿ, ಮಾನವೀಯತೆಗಾಗಿ, ಶೋಷಣೆಗಾಗಿ ವಿರುದ್ಧ ಧ್ವನಿ ಎತ್ತಿ ಮಾನವೀಯತೆ ಮರೆಯುವುದಕ್ಕಾಗಲ್ಲಿ ಕಾವ್ಯ ತನ್ನ ಶ್ರದ್ಧೆತೆಯನ್ನು ಕಾಪಾಡಿಕೊಂಡಂತಿದೆ.

ಸಾಮಾಜಿಕ ವೈಚಾರಿಕತೆಯಲ್ಲೂ ಸಾಮಾಜಿಕ ಚಿಂತನೆಯನ್ನು ಅಭಿವ್ಯಕ್ತಿಸಿ ಮೌಲ್ಯಗಳ ಕುರಿತಾಗಿಯೂ ಒಲವನ್ನು ವ್ಯಕ್ತಪಡಿಸಿದ ರೀತಿ ವಿಶಿಷ್ಟವಾಗಿದೆ. ಸಮಕಾಲೀನ ಹಲವಾರು ಕವಿತೆಗಳು ಮೌಲ್ಯವನ್ನೇ ಪ್ರತಿವಾದಿಸುತ್ತವೆ. ಮನುಷ್ಯತ್ವವನ್ನು ಬಿತ್ತುತ್ತವೆ. ಹಾಗೆ ವೈಚಾರಿಕ ಜಾಗೃತೆಯನ್ನು ಸಹ ಅಭಿವ್ಯಕ್ತಿಸುತ್ತಿವೆ. ಕಾವ್ಯ ನಿವೇದನಕ್ಕೆ ಮುಖ್ಯ ಕಾರಣವೆಂದರೆ ಸ್ಫೂರ್ತಿ. ನವೋದಯ ಸಂದರ್ಭದಲ್ಲಿ ಪ್ರಕೃತಿ, ರಮ್ಯತೆ ಸ್ಫೂರ್ತಿಯಾದರೆ ಇಂದಿನ ಸಮಕಾಲೀನ ಕವಿತೆಗೆ ಸಂಕಟಗಳು, ನೋವುಗಳು, ಶೋಷಿತರ ಕಣ್ಣೀರು ಹಾಗೂ ಪ್ರೇಮದ ಅಗಲಿಕೆಯ ಸ್ಫೂರ್ತಿ ಕಂಡುಬಂದಿದೆ. ಜಗತ್ತಿನ ಕಷ್ಟ ತನ್ನ ಎದೆಯ ತೊಟ್ಟಿಲಲ್ಲಿ ಹಾಕಿಕೊಂಡು ತೂಗುವ ಪ್ರತಿಕ್ರಿಯಿಸುವ ಮನೋಧರ್ಮ ಇಂದಿನ ಕಾವ್ಯಕ್ಕೆ ಇದೆ. ಕಾವ್ಯ ಚಿಂತನ ಮೌಲ್ಯಯುಳ್ಳದ್ದು ಅದು 'ಹಳತು-ಹೊಸತು' ತಲೆಪಟ್ಟಿಗೆ ನಿಲುಕುವುದಿಲ್ಲ. ಕಾವ್ಯ ಕಾವ್ಯವಾಗಿದ್ದರೆ ಅದು ಸದಾ ನವ್ಯ, ಸದಾ ನವ್ಯವನ್ನಾಗಿ ಮಾಡುವುದು ಅದರ ರಸ, ವಸ್ತು ಅಭಿವ್ಯಕ್ತಿಯಾಗಿದೆ.

ಜಾಗತೀಕರಣದ ಸಂದರ್ಭದಲ್ಲಿ ಯಾಂತ್ರಿಕೃತವಾದ ಮನುಷ್ಯನ ಬದುಕು ತುಂಬಾ ಅಪಾಯಕಾರಿಯಲ್ಲಿದೆ. ಕೃತಕವಾದ ಜೀವನ, ಆಹಾರ, ಅತಿಯಾದ ಗಳಿಕೆಯ ಬಯಕೆ, ವೇಗವಾದ ಬದುಕಿನ ಓಟ, ಹಣಗಳಿಗೆ, ಸ್ಪರ್ಧಾ ಮನೋಭಾವ ಇವೆಲ್ಲವೂ ಅವನಲ್ಲಿ ಸೇರಿ

ಬದುಕಬೇಕಾದ ರೀತಿಯನ್ನು ಮರೆತು. ಬದುಕುತ್ತಿದ್ದಾನೆ. ಹಕ್ಕಿ, ಪ್ರಾಣಿ, ಪಕ್ಷಿಗಳಿಗೂ ಇರುವ ನೆಮ್ಮದಿಯ ಬದುಕನ್ನು ಮನುಷ್ಯ ಕಳೆದುಕೊಂಡಿದ್ದಾನೆ ಎಂದು ಒಂದೊಂದು ಸಾರಿ ಮನುಷ್ಯರಿಗೆ ಅನಿಸುವಷ್ಟರಮಟ್ಟಿಗೆ ನಿರಾಶಯನಾಗಿದ್ದಾನೆ. ಕಾರಣ ಮೌಲ್ಯಗಳ ವಿನಾಶ. ಅದಕ್ಕಾಗಿ ಕಾವ್ಯ ನೊಂದ ಮನುಷ್ಯನಿಗೆ, ಅಪಾಯವಾದ ಮನುಷ್ಯನಿಗೆ ಮೌಲ್ಯಗಳ ಮೌಲ್ಯವನ್ನು ಲೇಪಿಸುತ್ತಿದೆ. ಪ್ರೀತಿ, ಪ್ರೇಮ, ಸ್ನೇಹಗಳಲ್ಲಿ ಪುನರ್ ಸೃಷ್ಟಿಗೆ ಮನುಷ್ಯತ್ವಕಾರ ಹೊಸ ಬೆಳಕಿಗೆ ಹಂಬಲಿಸುವುದು ಕಂಡುಬಂದಿದೆ.

ನಾನು ಅಪೂರ್ಣ
ನೀನೂ ಅಪೂರ್ಣ
ಜೀವ ಸಂಗಾತದಲಿ ಒಂದಾದರೆ ನಾವು
ಕೂಡಿದರೂ ಕಳೆದರೂ ಕಡೆಗಲಿಯುವುದು ಪೂರ್ಣ...[೧೮]

ಕವಯಿತ್ರಿ ಅನುಪಮಾ ಅವರು ತಮ್ಮ ಕವಿತೆಯಲ್ಲಿ ಮನುಷ್ಯನಲ್ಲಿರುವ ಅಹಂಕಾರದ ಭಾವನೆ ನಾಶಗೊಳಿಸಿ ಪರಸ್ಪರ ಒಂದಾಗಿರಲು ಬಗೆಯನ್ನು ಮೌಲ್ಯವಾಗಿಸಿ ಅಭಿವ್ಯಕ್ತಿಸಿದ್ದಾರೆ. ನಾನು ಅಪೂರ್ಣ ನೀನು ಅಪೂರ್ಣ ಎಂಬ ಮಾತು ಪೂರ್ಣ ಎಂದು, ಶ್ರೇಷ್ಠ, ಜೇಷ್ಠ ಎಂದು ಬೀಗುವ ಮನಸ್ಸುಗಳಿಗೆ ಪೆಟ್ಟುಕೊಟ್ಟಂತಿದೆ. ಮೌಲ್ಯಗಳನ್ನು ಮರೆತು ಮನಸ್ಸುಗಳು ಶ್ರೇಷ್ಠತೆಯ ವ್ಯಸನದಲ್ಲಿ ಪೂರ್ಣ ಎಂದು ಬೀಗುತ್ತಿರುವುದು ಕಂಡುಬಂದಿದೆ. ಇಂತಹ ಮನಸ್ಸುಗಳಿಗೆ ಪಾಠ ಹೇಳುವ ರೀತಿಯಲ್ಲಿ ಎಲ್ಲವೂ ಅಪೂರ್ಣ, ಪೂರ್ಣ ಅನ್ನುವುದು ಇಲ್ಲಿ ಒಂದಕ್ಕೊಂದು ಪರಸ್ಪರ ಸಂಬಂಧವಿದೆ ಈ ಸಂಬಂಧದಲ್ಲೇ ಪೂರ್ಣತೆ ಅಡಗಿದೆ ಎಂದು ಕವಿತೆ ಅಭಿವ್ಯಕ್ತಿಸುತ್ತದೆ. ಪೂರ್ಣತೆಯ ಅಹಂಕಾರದ ಮನಸ್ಸುಗಳಿಗೆ ಸಮಜಕ್ಕೆ ಅಪೂರ್ಣತೆ ಯಾವುದು, ಅಪೂರ್ಣತೆ ಎಂದರೇನು? ಪೂರ್ಣತೆ ಎಂದರೆ ಯಾವುದು? ಅದಕ್ಕೆ ಒಳ್ಳಗೊಳ್ಳಗಿನ ಸಾರ ಎಂಥಹದ್ದು ಎಂದು ತಿಳಿಸುತ್ತಾ ಜಗತ್ತಿನಲ್ಲಿ ಪೂರ್ಣ ಯಾವುದು ಅಪೂರ್ಣ ಯಾವುದು ಎಂದು ಹೇಳುತ್ತಾರೆ. ಸತ್ಯ, ಅಸತ್ಯದ ಜಗಳಗಳಿಗೆ ಸತ್ಯದ ಬೆಳಕನ್ನು ನೀಡಿದಂತಿದೆ. ಭ್ರಮೆಯಲ್ಲಿ ಮುರಿದ ಮನಸ್ಸು ಬುದ್ಧಿಗಳಿಗೆ ವಾಸ್ತವದ ಜ್ಞಾನ ದೃಷ್ಟಿಯನ್ನು ನೀಡಿ, ವೈಜ್ಞಾನಿಕ ವೈಚಾರಿಕ ನೆಲೆಯಲ್ಲಿ ಬದುಕುವುದರ ಪರಿಯನ್ನು ನೀಡಿದೆ. ಸತ್ಯ ಅಸತ್ಯ, ಶ್ರೇಷ್ಠ ಕನಿಷ್ಠ ಎಂಬ ಭಾವಗಳು ಮನುಷ್ಯನನ್ನು ಯಾವ ರೀತಿಯಲ್ಲಿ ಹತೋಟಿಗೆ ತೆಗೆದುಕೊಂಡು ಅನಾಹುತಗಳ, ಮೌಢ್ಯಗಳ ನಡೆಯುವಂತೆ ಮಾಡುತ್ತವೆ. ಎಂಬುದರ ಪ್ರಶ್ನೆಯನ್ನು ಅಭಿವ್ಯಕ್ತಿಸಿ ಪೂರ್ಣತೆಯ ಭ್ರಮೆಯಿಂದ ಹೊರ ತಂದು ಮೌಲ್ಯಯುತ ಬದುಕನ್ನು ಸಾಗಿಸಲು ದಾರಿ ಹಾಕಿಕೊಡುತ್ತಿದೆ.

ಈ ಪೂರ್ಣತೆಯ ಭ್ರಮೆ ಕೇವಲ ವ್ಯಕ್ತಿ ವ್ಯಕ್ತಿಗಳ ಮಧ್ಯ ಇರುವಂತಹದ್ದಲ್ಲ ಪ್ರದೇಶ ಪ್ರದೇಶದ ಮಧ್ಯೆ, ಜನಾಂಗ ಜನಾಂಗದ ಮಧ್ಯೆ, ಸಮುದಾಯ ಸಮುದಾಯದ ಮಧ್ಯೆ, ಭಾಷೆ ಭಾಷೆಯ ಮಧ್ಯೆ, ಶ್ರೇಷ್ಠತೆ, ಪೂರ್ಣತೆ ಎಂಬ ಭ್ರಮೆಯಲ್ಲಿ ಬದುಕುತ್ತಿರುತ್ತಾರೆ. ಈ ಭ್ರಮೆಯನ್ನು

ನಾಶಗೊಳಿಸಿ ಪೂರ್ಣತೆಯ ಕಲ್ಪನೆಯನ್ನೇ ಮುರಿದು ಕಟ್ಟಿ ಹೊಸ ರೀತಿಯಲ್ಲಿ ಜೀವಿಸುವ ಪಾಠವನ್ನು ಹೇಳುತ್ತಿದೆಯ ಕಾವ್ಯ. ಪೂರ್ಣತೆಯ ಹೊಸ ವಾಕ್ಯವನ್ನು ನೀಡಿದ್ದಾರೆ. ಕವಿಗೆ ನಿಜವಾಗಿ ಅನ್ನಿಸಿದ್ದು, ತಾನು ಹೇಳುವುದನ್ನು ಈ ಎರಡೂ ಒಂದೇ ಮಾಡು, ಮಾಡಲು ಯತ್ನಿಸುತ್ತಾ ಹೋಗುವುದು ಅತ್ಯುತ್ತಮವಾದ ಲಕ್ಷಣ ಅಂತ ಲಕ್ಷಣ ಸಮಕಾಲೀನ ಕಾವ್ಯಕ್ಕೆ ಇದೆ. ಎಂದು ತಿಳಿಯುತ್ತಾರೆ ಇದಕ್ಕೆ ಕಾವ್ಯದ ಆಶಯ. ತಂತ್ರಗಳೇ ಸಾಕ್ಷಿಯಾಗಿವೆ.

ಕಾವ್ಯ ಆಶಯ ಪ್ರಧಾನವಾದದ್ದು ಆಶಯ ಮನುಷ್ಯನ ಬದುಕನ್ನು ಬದಲಾವಣೆಯ ಕುರಿತಾಗಿರುವಂತಹದ್ದು. ಕಾವ್ಯ ಕೇವಲ ಕಾವ್ಯಕ್ಕಾಗಿ ಕಾವ್ಯವಾಗಿರದೆ ಸಮಾಜಕ್ಕಾಗಿ ಕಾವ್ಯ, ಜನರ ಬದುಕಿಗಾಗಿ ಕಾವ್ಯ, ಇಂದು ನಾವೂ ಪುರಾತನವಾದ ಆದರ್ಶ, ಜೀವನಕ್ರಮ, ಬದುಕಿನ ರೀತಿ ಪರಂಪರೆಯನ್ನು ಅರಿಯುವುದು ಸಾಹಿತ್ಯ, ಕಾವ್ಯ, ಇನ್ನಿತರ ದಾಖಲೆಗಳ ಮೂಲಕ ಆದ್ದರಿಂದ ಸಮಕಾಲೀನ ಚಿತ್ರಣವು ಸಮಕಾಲೀನ ಕಾವ್ಯ ಸಮರ್ಥವಾಗಿ ಹಿಡಿದಿಟ್ಟದೆ. ಹಾಗೂ ಭವಿಷತ್ತಿಗೆ ಕೊಂಡಿಯಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಮನುಷ್ಯನ ಬದುಕಿನ ಚಿತ್ರಣ, ತಳಮಳ, ಯೋಚನೆ, ಸವಾಲು, ಸಮಸ್ಯೆಗಳು ಕುರಿತಾಗಿ ಕಾವ್ಯ ಮಾತನಾಡುತ್ತದೆ. ಹಾಗೆ ಆ ಸವಾಲುಗಳನ್ನು ಎದುರಿಸುವ ಸಾಧ್ಯತೆಗಳನ್ನು ಕುರಿತಾಗಿಯೂ ಕಾವ್ಯ ಅಭಿವ್ಯಕ್ತಿಸುವುದರೊಂದಿಗೆ ಮನುಷ್ಯ ಸಂಬಂಧಗಳ ಕುರಿತಾಗಿ ಮೌಲ್ಯಗಳ ಕುರಿತಾಗಿ ಅಭಿವ್ಯಕ್ತಿಸಿರುವುದು ಮನುಷ್ಯನ ಕಾಳಜಿಯನ್ನು ತೋರಿಸುತ್ತದೆ. ಕಾವ್ಯಕ್ಕಿರುವ ಕಾಳಜಿ ಮಮಕಾರ ಎಷ್ಟೊಂದು ಕಾವ್ಯವನ್ನು ಅಭ್ಯಾಸಿಸಿದರೆ ತಿಳಿಯುತ್ತದೆ. ಮನುಷ್ಯ ತಾನು ನಿರ್ಮಿಸಿಕೊಂಡ ಕೆಲವು ಹಬ್ಬ ಆಚರಣೆಗಳು ಅವೈಜ್ಞಾನಿಕವಾದರೂ ಆ ಸಂಪ್ರದಾಯಗಳಿಂದ ಮನುಷ್ಯನ ಖುಷಿಯನ್ನು ಹೆಚ್ಚಿಸುತ್ತವೆ. ಒಂದು ವಿಶೇಷವಾದ ಆನಂದ ಉಂಟು ಮಾಡುತ್ತವೆ. ಅಂತಹ ಆನಂದ ಇನ್ನೊಬ್ಬರ ಮೇಲೆ ಕೆಟ್ಟ ಪರಿಣಾಮ ಬೀರದಿದ್ದರೆ ಅದು ಇನ್ನೊಬ್ಬರ ಖುಷಿಯನ್ನು ಸಹ ತರುವಂತಿದ್ದಾರೆ ಅದು ಮೌಲ್ಯವಾಗಿ ರೂಪತಾಳುತ್ತದೆ. ಅದೇ ಪರಸ್ಪರ ಹೊಂದಾಗುವಿಕೆಯಾಗಿದೆ. ಮನುಷ್ಯನಿಗೆ ಮುಖ್ಯವಾಗಿ ಬೇಕಾಗಿರುವುದು ಅದೇ ನಾನು ನಾನು ಎಂಬ ಭಾವನೆ ದೂರಮಾಡಿ ನಾವು ನಾವೆಲ್ಲರೂ ಎಂಬ ಭಾವನೆ ಬಂದಾಗ ಪೂರ್ಣತೆ ಬರುತ್ತದೆ ಎಂಬ ಆಶಯವನ್ನು ಕಾವ್ಯ ಧ್ವನಿಸಿದೆ. ಮಾತಿನಾಚೆಯ ಆಳದ ಅನುಭವವನ್ನು ಮಾತಿನೊಳಗೆ ಹಿಡಿದು ಕಟ್ಟುವ ಸ್ವಂತ ಅನುಭವವನ್ನು ಅಭಿವ್ಯಕ್ತಿಯ ಮೂಲಕ ಒಂದು ಭಾಷೆಯ ಸಂದರ್ಭದಲ್ಲಿ ನಡೆಯುವ ಸೃಜನಕ್ರಿಯೆಯೇ ಕಾವ್ಯ. ದಾಂಪತ್ಯ ರೂಪಕದಲ್ಲಿ ಭಾವ ಮತ್ತು ಭಾಷೆಗಳ ಬಾಂಧವ್ಯ ಇಲ್ಲಿ ಸೂಚಿತವಾಗಿದೆ. ಕವಿಗೆ ಆದ ಯಾವುದೇ ಒಂದು ಅನುಭವ ಹೊಸದೆಂದು ಕಂಡಾಗ ಮತ್ತು ಅದನ್ನು ಹೆಚ್ಚು ಜನರಿಗೆ ತಿಳಿಯುವ ಮಾತಿನಲ್ಲಿ ಮೂಡಿಸಬೇಕೆಂಬ ಹಂಬಲ ಉತ್ಕಟವಾದಾಗ ಹುಟ್ಟುವ ಮಾತುಗಳೇ ಕಾವ್ಯ ಪಂಕ್ತಿಗಳಾಗಿವೆ. ಇಂಥ ಪಂಕ್ತಿಗಳು ಸಾರ್ವತ್ರಿಕ ಸಮ್ಮತಿಯನ್ನು ದೊರೆಯುವಂತಿರಬೇಕು. ಅದು ಒಂದು ಹೊಸ ಚಿಂತನೆ, ಹೊಸ ಮೌಲ್ಯ, ಹೊಸ ರೂಪವಾಗಿ ಮಾಡಬೇಕು. ಹೀಗೆ ಹೊಸ ಚಿಂತನೆ ರೂಪವಾಗಿ ಸಮಕಾಲೀನ ಕಾವ್ಯ ಮೂಡಿಸುತ್ತಿದೆ. ತನ್ನ

ಜೀವಪರ ಆಶಯದ ಮೂಲಕ ಸಮಕಾಲೀನ ಕಾವ್ಯ ಸಾಮಾಜಿಕ ಸನ್ನಿವೇಶಗಳೊಂದಿಗೆ ಸಾಮಾಜಿಕ ಚಿಂತನೆಯನ್ನು ಅಭಿವ್ಯಕ್ತಿಸುತ್ತಿದೆ. ಸಮಾಜಕ್ಕೆ ಬೇಕಾದ ಅಗತ್ಯತೆಯನ್ನು ಕುಂದು ಕೊರತೆಯನ್ನು ಸಹ ಧ್ವನಿಸುತ್ತದೆ. ಆಯಾ ಕಾಲದ ಸಾಂಸ್ಕೃತಿಕ ವಾಸ್ತವಿಕ ಫಲವಾದ ಸಾಹಿತ್ಯ ಹಿನ್ನೆಲೆಯಲ್ಲಿ ಇಡೀ ಪರಂಪರೆಯನ್ನು ಗ್ರಹಿಸಬಹುದು ಅದರಂತೆ ಪ್ರಸ್ತುತ ಸನ್ನಿವೇಶವು ಸಹ ಕಣ್ಣಿಗೆ ಕಂಡದ್ದು ಒಂದಾದರೆ ಅದು ಅಂತರಂಗ ಮತ್ತು ಬುದ್ದಿಗೆ ತಲುಪಿಸುವುದು ಕಾವ್ಯದ ಕೆಲಸ.

ಸಮಾಜವು ತಾನು ರೂಪಿಸಿಕೊಂಡಿರುವ ಮಹತ್ವದ ಮೌಲ್ಯಗಳು ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದು ಸಂಸ್ಕೃತಿಯು ಪುರಾಣ, ಸಂಗೀತ, ಶಿಲ್ಪ, ಸಾಹಿತ್ಯ ಇತ್ಯಾದಿ ಪರಿಕರಗಳಿಂದ ಹಿಡಿದ ಮಹಾಮನೆಯಾಗಿದೆ. ಪರಂಪರೆಯು ಆಯಾಕಾಲದ ಸಾಂಸ್ಕೃತಿಕ ಒತ್ತಡಗಳಿಗೆ ಅನುಗುಣವಾಗಿ ಪರಿವರ್ತನೆಗೊಳ್ಳುತ್ತದೆ. ಕವಿಯಾದವನು ತನ್ನಲ್ಲಿ ಪರಂಪರೆಯನ್ನು ಪುನರುಜ್ಜೀವಿಸಿಕೊಳ್ಳುವುದರಿಂದ ಪರಂಪರೆಯೂ ಹೆಚ್ಚು ಜೀವಂತವಾಗಿರುತ್ತದೆ. ಹಾಗೇ ಕವಿಯು ಜೀವಂತನಾಗುತ್ತಾನೆ. ಹಬ್ಬಗಳು ಗೃಹಕಲ್ಪನೆಗಳು, ದೇವಕಲ್ಪನೆಗಳು ಇವುಗಳಲ್ಲಿ ಪರಂಪರೆಯ ಸತ್ವ ನವೀಕರಿಸುತ್ತ ಹೊಸ ಬಗೆಯಲ್ಲಿ ಅಭಿವ್ಯಕ್ತಿಸಲು ಸಹಾಯಕವಾಗುತ್ತದೆ. ಕಾವ್ಯದ ಜೀವಾಳ ಒಂದೇ ಬಗೆಯಲ್ಲಿ ಹೇಳುವುದು ಸರಿಯಲ್ಲ ಆಶಯ. ತಂತ್ರ, ವಸ್ತು, ನಿರೂಪಣೆ, ರಸ ಎಲ್ಲವೂ ಮುಖ್ಯವಾಗಿ ನಿಲ್ಲುತ್ತವೆ. ಕವಿಗೆ ತೀವ್ರವಾದ ಲೋಕಾನುಭವ ಬೇಕು. ಲೋಕದೃಷ್ಟಿಯು ಎಷ್ಟು ವಸ್ತುನಿಷ್ಟವಾಗಿರುತ್ತದೆಯೋ ಅಷ್ಟೇ ಮಹತ್ವದ ಕಾವ್ಯ ರಚನೆಗೊಳ್ಳುತ್ತದೆ. ಸಮಕಾಲೀನ ಸಂದರ್ಭದಲ್ಲಿ ಕವಿಗಳು ಸಣ್ಣ ಸಣ್ಣ ಘಟನೆಗಳಿಗೆ ತಾತ್ವಿಕತೆಯ ಸಾರವನ್ನು ಲೇಪಿಸಿ ಹೊಸ ಸಂವೇದನೆಯ ಭಾಗವಹಿಸಿ ಅಭಿವ್ಯಕ್ತಿಸುವುದು ಕಂಡು ಬಂದಿದೆ. ಕೆಲವೊಂದು ಜೈವಿಕ ಕ್ರಿಯೆ ನೈಸರ್ಗಿಕ ಕ್ರಿಯೆಯನ್ನು ಕಾವ್ಯವಾಗಿಸಿ ವಿಶೇಷವಾಗಿ ಅಭಿವ್ಯಕ್ತಿಸಿರುವುದು ಕಂಡು ಬಂದಿದೆ. ಮನುಷ್ಯನ ಮೂಲಭೂತ ಬಯಕೆ ಬೇಡಿಕೆಗಳ ಕುರಿತಂತೆ ಕಾವ್ಯ ವೈಚಾರಿಕ ಪ್ರಜ್ಞೆ ದೃಷ್ಟಿ ತಾಳುತ್ತಿದೆ. ಸಮಕಾಲೀನ ಕಾವ್ಯ ಮಮಕಾರ ವಾತ್ಸಲ್ಯ, ಮನುಷ್ಯ ಸಂಬಂಧಗಳ ಬಗ್ಗೆ ತಾಯಿಯ ಕುರಿತಂತೆ ವಿಶೇಷವಾದ ಕಾವ್ಯ ರಚಿಸಿ ಮಾನವೀಯತೆಯನ್ನು ಹೊಂದುವುದು ಹೇಗೆ ಎಂಬುದನ್ನು ಕಾವ್ಯ ಸಾರುತ್ತಿದೆ.

ಈ ನೆಲದ ಮೇಲೆ ನೇಗಿಲುಗಳ ಬಿತ್ತಿ
ತೆನೆಗಳ ಬೆಳೆಯೋಣ
ನಿನ್ನೊಡಲ ನುಡಿಯನ್ನು
ಏಕತಾರಿಗೆ ಕಟ್ಟಿ
ನುಡಿಯಲ್ಲದ ನುಡಿಗೆ
ಸಿರಿಯಲ್ಲದ ಸಿರಿಗೆ
ತಗುಲಿದ ಸಂಕಟವನ್ನಾರಿಸೋಣ[೯೯]

ಮನುಷ್ಯನ ಅಂತರಂಗದಲ್ಲಿ ಬೆಳಕು ಮೂಡಲು ಮೌಲ್ಯಗಳು ಅತ್ಯಗತ್ಯ ಅಂತಹ ಮೌಲ್ಯಗಳನ್ನು ಈ ನೆಲದಲ್ಲಿ ಚಿತ್ರಬೇಕು ಹಾಗೇ ಮುಂದುವರೆಯಬೇಕು ತೆನೆಗಳಾಗಿ ಬೆಳೆಯೋಣ ನುಡಿಯನ್ನು ಒಡಲಿನಿಂದ ನುಡಿಯೋಣ. ಪ್ರಸ್ತುತ ದಿನಮಾನದಲ್ಲಿ ಮನುಷ್ಯನ ಮಾತುಗಳು ಕೃತಕವಾಗಿವೆ ಎಂದು ಕವಿ ಆತಂಕಪಡುತ್ತಾ ಹೃದಯದಿಂದ, ಒಡಲಿನಿಂದ ಮಾತುಗಳನ್ನು ಆಡೋಣ ಅವು ಮೌಲ್ಯಯುತವಾಗಿರುತ್ತವೆ. ಇಲ್ಲಿದಿದ್ದರೆ ಆಡುವ ಮಾತುಗಳು ನೋವು ತರುವ ಮಾತುಗಳಾಗಿರುತ್ತದೆ. ನೋವು ತರದ ಪ್ರೀತಿ ಬಿತ್ತುವ ಮಾತುಗಳು ಮನುಷ್ಯನಿಗೆ ಅತ್ಯಗತ್ಯವಾಗಿದೆ ಎಂದಿದ್ದಾರೆ. ಮನುಷ್ಯನ ಅಂತರದ ಅಂಧಕಾರದ ಸೂಚಕವನ್ನು ನಿವಾರಣೆ ಮಾಡಬೇಕು ಮನುಷ್ಯನಲ್ಲಿ ಜೀವ ಚೈತನ್ಯ ತುಂಬಿ ಸೌಹಾರ್ದತೆಯ ಬೆಳಕನ್ನು ಬೆಳಗಬೇಕು ಎಂಬ ಆಶಯ ಹೊಂದಿದಂತಿದೆ. ರೈತರ ಪರವಾದ ಕಾರ್ಮಿಕರ ಪರವಾದ, ಶೋಷಿತರ ಪರವಾದ ಮಾತುಗಳ ಕಾವ್ಯದಲ್ಲಿ ಕಂಡು ಬರುತ್ತವೆ. ಕಾವ್ಯದ ಶೀರ್ಷಿಕೆಯ ಉರಿವ ಏಕಾಂತ ದೀಪ ಇದು ಬೆಳಕು ನೀಡುವ ಪ್ರೀತಿ ಬಿತ್ತುವ ದೀಪ ಎಂದು ಸಾರಿದಂತಿದೆ.

ಶೋಷಣೆಯ ವಿವಿಧ ಮುಖಗಳನ್ನು ಅದರ ಎಲ್ಲಾ ಆಯಾಮಗಳನ್ನು ಸಮಕಾಲೀನ ಕಾವ್ಯ ಅಭಿವ್ಯಕ್ತಿಸುವುದರ ಜೊತೆಗೆ ಆ ಶೋಷಣೆಯನ್ನು ಪ್ರತಿರೋಧಿಸುವುದು ಹಾಗೂ ಪ್ರತಿರೋಧ ಒಡ್ಡುವುದು ಯಾವ ರೀತಿ ಎಂದು ಹೇಳುತ್ತದೆ. ಅದಕ್ಕೆ ಕವಿಯ ಸಾಲೊಂದು ಗುರುತಿಸುವುದಾದರೆ ಕಾವ್ಯ ನಿಮ್ಮ ಗೋರಿಯ ಮೇಲೆ ವಿಜಯ ಗೀತೆ ಹಾಡುತ್ತದೆ. ನಾನು ಅತ್ತಾಗ ಬಿದ್ದ ಕಣ್ಣೀರಲ್ಲಿ ಜೀವವಿದೆ. ಆ ಕಣ್ಣೀರು ಭೂಮಿ ಸೇರಿ ಮತ್ತೆ ಬೀಜವಾಗಿ, ಮರವಾಗಿ ಮೌಲ್ಯಗಳ ಏಳಿಗೆಗಾಗಿ, ಪ್ರೀತಿ ಪ್ರೇಮಗಳ ಜೀವಂತಿಕೆಗಾಗಿ ಹೋರಾಡುತ್ತೇವೆ ಎಂದು ಆಶಯವನ್ನು ಅಭಿವ್ಯಕ್ತಿಸಿದಂತಿದೆ. ಪ್ರಸ್ತುತ ಸಂದರ್ಭದಲ್ಲಿ ನಡೆಯುವ ಜಾತಿ ಜಗಳ ಅತಿ ಹೆಚ್ಚಾಗಿವೆ. ಅಂತರ ಜಾತಿಯ, ಅಂತರಧರ್ಮದ ಪ್ರೇಮ, ಪ್ರೀತಿಗಳು ಅತಿ ಹೆಚ್ಚಾಗಿ ಕಂಡುಬರುತ್ತವೆ. ಈ ಬದಲಾವಣೆಯನ್ನು ಸಹಿಸದ ಮೂಲಭೂತವಾದಿಗಳು ಕೋಮುವಾದಿಗಳು ಕಲಹಕ್ಕೆ ಮುಂದಾಗುತ್ತಾರೆ. ಹಾಗೆ ಕಾವ್ಯ ಕಣ್ಣೀರು ಹಾಕುತ್ತದೆ. ಮೌಲ್ಯಗಳ ಉಳಿವಿಗಾಗಿ ಹೊಸ ರೂಪ ತಾಳುತ್ತದೆ. ಆ ಕಲಹ ಮನುಷ್ಯತ್ವ ವಿರೋಧಿ ಪ್ರೀತಿ ವಿರೋಧಿ ಎಂದು ಧಿಕ್ಕರಿಸುತ್ತಾ. ಮನುಷ್ಯತ್ವದ ಹಾಡು ಹಾಡುತ್ತದೆ. ಮೌಲ್ಯಗಳ ಉಳಿವಿಗಾಗಿ ಧ್ವನಿ ಎತ್ತುತ್ತದೆ. "ಅನುಭವವನ್ನು ವ್ಯಕ್ತಿಗತ ನೆಲೆಯಿಂದ ಮಾನವಾನುಭವದ ಸಾಧಾರಣೀಕರಣ ಮತ್ತು ಸಾರ್ವತ್ರೀಕರಣಗೊಳಿಸುವ ವಿಶೇಷವೇ ಕಾವ್ಯದ ಮಾಂತ್ರಿಕ ಗುಣ. ಅನುಭವಲೋಕವನ್ನು ವಿಭಿನ್ನವಾಗಿಯೇ ಗ್ರಹಿಸಿ ಸ್ಪಂದಿಸುವ ಪ್ರತಿಕ್ರಿಯೆಯನ್ನು ವ್ಯಾಪ್ರತೆಯಿಂದ, ವಿಷಾದದಿಂದ, ಆರ್ತನೆಯಿಂದ, ಆತ್ಮವಿಶ್ವಾಸದಿಂದ ಎಲ್ಲಕ್ಕಿಂತ ಹೆಚ್ಚಾಗಿ ಒಳಧ್ವನಿಯ ನೈತಿಕತೆಯ ಮುಟ್ಟಿತಡವು ಕೇಳುವಗುಣ ಕಾವ್ಯಕ್ಕೆ ಇದೆ."[೨೦] ಇಂತಹ ಅಂಶಗಳು ಸಮಕಾಲೀನ ಕಾವ್ಯದಲ್ಲಿ ಕಾಣಬಹುದಾಗಿದೆ. ಕಾವ್ಯ ಎಂದರೆ ಕೇವಲ ಚಿಂತನೆಯನ್ನು ಮಾತ್ರ ಬಿತ್ತದೆ ಬದುಕಿನ ಬಗೆಗೆ ಒಂದಿಷ್ಟು ದಾರಿಗಳನ್ನು, ಕನಸುಗಳನ್ನು, ನಗೆಯನ್ನು, ಆಶ್ವಾಸಿಸುವ ಲಯಗಾರಿಕೆಯನ್ನು, ಸ್ಫೂರ್ತಿಯನ್ನು

ಸಹ ಬಿತ್ತುತ್ತದೆ. ಸಮಕಾಲೀನ ಸಂದರ್ಭಕ್ಕೆ ತಕ್ಷಣವಾದ ಪ್ರತಿಕ್ರಿಯಿಸುವುದು ತುಂಬಾ ಕಷ್ಟದ ಕೆಲಸ ಆದರೂ ಕಾವ್ಯ ತಕ್ಷಣದ ಸಂಕಷ್ಟಗಳಿಗೆ ಕಾಣ್ಣೆದುರಿಗೆ ನಡೆಯುವ ಘಟನಾವಳಿಗ ವ್ಯಾಖ್ಯಾನ, ವಿಶ್ಲೇಷಣೆ, ತೀರ್ಮಾನಗಳೂ ತಾತ್ವಿಕ ನೆಲೆಯಲ್ಲಿ ವಿಸ್ತರಿಸುತ್ತಿದೆ. ಅದಕ್ಕೊಂದು ಪರಂಪರೆಯ ಬೆಳಕನ್ನು ನೀಡಿ ವರ್ತಮಾನವನ್ನು ವಿಶಿಷ್ಟ ದೃಷ್ಟಿಕೋನದಲ್ಲಿ ಗ್ರಹಿಸುತ್ತದೆ. ಸಾಂಸ್ಕೃತಿಕ ಧಾರ್ಮಿಕ, ರಾಜಕೀಯ ನಿಲುವುಗಳನ್ನು ಸಮೀಕರಿಸಿ ಪ್ರತಿಕ್ರಿಯಿಸುತ್ತದೆ.

ಮಾನವನು ತನ್ನ ಸುತ್ತಮುತ್ತಲಿರುವ ಜೀವನವನ್ನು ಕಳೆಯಲು ಮೌಲ್ಯಗಳ ಅತ್ಯಗತ್ಯ ಎಂದು ಹೇಳುತ್ತಾ ಆ ಮೌಲ್ಯಗಳನ್ನು ಬೆಳಸಿ ಬೆಳಸುವ, ದಾರ್ಶನಿಕದ ಚಿಂತನೆಗಳನ್ನು ಸಿದ್ಧಾಂತಗಳನ್ನು ವರ್ತಮಾನಕ್ಕೆ ತಂದು ಅವುಗಳ ಜೀವಂತತೆಯಲ್ಲಿ ಪರಿಹಾರ ಕಂಡುಕೊಂಡು ಕಾವ್ಯ ತನ್ನ ಪರಂಪರೆಯ ನಡಿಗೆಯನ್ನು ಮುಂದುವರೆಸಿದೆ. ಸಂಬಂಧಗಳಲ್ಲಿ ಪ್ರೀತಿ, ಪ್ರೇಮ, ಸ್ನೇಹ, ಒಲವು, ನಂಬಿಕೆ, ಆತ್ಮಗೌರವ ಅವುಗಳ ಕುರಿತಾಗಿ ಕಾವ್ಯ ಆಧುನಿಕ ಸಂದರ್ಭದಲ್ಲಿ ಅವುಗಳನ್ನು ಧ್ಯಾನಿಸಿ ಉಳಿಸುವ ಕನಸು ಕಾಣುತ್ತಿದೆ.

ಜಗತ್ತನ್ನು ಬಿಟ್ಟು ಕಾವ್ಯ ಬದುಕಬಾರದು ಅಷ್ಟೇ. ಕಾವ್ಯ ಬಿಟ್ಟು ಜಗತ್ತು ಇರಬಾರದು. ಕಾವ್ಯವೆಂದರೆ ಅನುಭಾವಕ್ಕೆ ಆಕಾರ ಕೊಡುವ ಕೆಲಸ. ಅಂತಹ ಅನುಭಾವದ ಪಾಠ ಸಾಮಾಜಿಕ ಚಿಂತನೆಯನ್ನು ಒಳಗೊಂಡಿರಬೇಕು. ಬದಲಾಗುತ್ತಿರುವ ಜೀವನ ಸಂವೇದನೆಯ ಸಂದರ್ಭದಲ್ಲಿ ವಾಸ್ತವಿಕತೆಯ ಅಗತ್ಯ ಎತ್ತಿ ಹಿಡಿದದ್ದು ಸಮಕಾಲೀನ ಕಾವ್ಯವಾಗಿದೆ. ಹೊಸ ಪ್ರಯೋಗಗಳ ಮೂಲಕ ವಾಸ್ತವಿಕ ಚಿತ್ರಣ ಬಿಚ್ಚಿ ಹೇಳುವುದು ವಿಶಿಷ್ಟವಾಗಿದೆ. ಸಿದ್ಧಾಂತದ ಹಿನ್ನೆಲೆಯಲ್ಲಿ ಮಾನವೀಯ ಮೌಲ್ಯಗಳು, ಜೀವನ ಕ್ರಮಗಳು, ಸಂಕಷ್ಟಗಳು, ಯಾತನೆಗಳು, ಬಯಕೆಗಳು, ಕನಸುಗಳು, ಒಲುವುಗಳನ್ನು ಚಿತ್ರಿಸುವುದು ಕಂಡು ಬಂದಿದೆ. ಕಾವ್ಯವೆಂದರೆ ಅನುಭವಕ್ಕೆ ಆಕಾರ ಕೊಡುವ ಅಸಲು ಕಸಬು, ಬರೀ ನೇಯ್ಗೆಯ ಕೆಲಸದಲ್ಲಿ ಅಲ್ಲಿ ವಿಶೇಷವಾದ ವಿಚಾರ, ಕಾಳಜಿ, ಮಮಕಾರವಿರುತ್ತದೆ. ಪ್ರತಿಯೊಂದು ಯುಗದಲ್ಲಿಯೂ ಪ್ರತಿಯೊಬ್ಬ ವಿಶಿಷ್ಟ ಕವಿಯ ವಿಶಿಷ್ಟ ಕೃತಿಗಳಲ್ಲಿ ಒಂದೊಂದು ಹೊಸತನ ಇರುತ್ತದೆ. ವಸ್ತು ಆಶಯ, ತಂತ್ರ, ಧೋರಣೆ, ಆದರ್ಶ, ಆಕರ್ಷಣೆ ಹಳೆತು ಹೊಸತು ಎರಡೂ ಪರಸ್ಪರ ಹೊಂದಿಕೊಂಡಾಗ ವಿಶೇಷವಾಗಿ ಕಾವ್ಯ ರಚನೆಗೊಂಡು ಶ್ರೇಷ್ಠತೆಯನ್ನು ಪಡೆಯುತ್ತದೆ. ಸಮಕಾಲೀನ ಸಂದರ್ಭದಲ್ಲಿ ಚಿಕ್ಕ ಚಿಕ್ಕ ವಿಷಯ ಮತ್ತು ಸಮಸ್ಯೆಗಳ ಕುರಿತಾಗಿಯೂ ಕಾವ್ಯ ರಚನೆಗೊಳ್ಳುತ್ತಿದೆ. ಹಾಗೇ ಬಹುದೊಡ್ಡ ಮಾರಕವಾಗಿ ಸಮಾಜವನ್ನು ಕಾಡುತ್ತಿರುವ ವಿಚಾರಗಳ ಕುರಿತಾಗಿಯೂ ಕಾವ್ಯ ರಚನೆಯಾಗುತ್ತಿದೆ. ಕೋಮುವಾದ, ಮತೀಯ ಸಂಘರ್ಷ, ಭ್ರಷ್ಟ ಚೌಕ, ಮಹಿಳೆಯರ ಮೇಲೆ ಅತ್ಯಾಚಾರ, ರಾಜಕೀಯ ಭ್ರಷ್ಟಾಚಾರ. ನಾಡುನುಡಿಯ ಕುರಿತಾಗಿ ಹೀಗೆ ವಿಷಯಗಳ ಕುರಿತು ಕಣ್ಣಿಗೆ ಕಟ್ಟುವ ರೀತಿಯ ಕಾವ್ಯ ಧ್ವನಿಸುತ್ತದೆ. ಪ್ರಸ್ತುತದಲ್ಲಿ ಶಾಲೆಗಳಲ್ಲಿ ನಡೆಯುವ ಬಿಸಿ ಊಟದಲ್ಲಿ ಅಡುಗೆ ಮಾಡುವವರು ದಲಿತರಾಗಿದ್ದಾರೆ ಆ ಊಟವನ್ನು ಮಾಡದಂತೆ ಬಹಿಷ್ಕರಿಸುವ ದುರಂತ ಚಿತ್ರಣ ಕಾವ್ಯ ನೀಡುವುದರೊಂದಿಗೆ ಅದು ಅಮಾನವೀಯ ಕೆಲಸ

ಎಂದು ಪ್ರತಿಭಟಿಸಿ ನಿಲ್ಲುವ ಸ್ಫೂರ್ತಿ ತುಂಬುತ್ತದೆ. ಮೌಲ್ಯಗಳ ಕುರಿತಾದ ನುಡಿಯುತ್ತದೆ. ಸಮಾಜದಲ್ಲಿ ನಡೆಯುತ್ತಿರುವ ದುರಂತಗಳು ಆಹಾರ ಸ್ವಾತಂತ್ರದ ಕುರಿತಾಗಿ, ಅಭಿವ್ಯಕ್ತಿಯ ಕುರಿತಂತೆ ಕಾವ್ಯ ರಚನೆಗೊಳ್ಳುತ್ತಿದೆ. ಯುವಕರ ಕುರಿತಾಗಿ ಯುವಪಡೆಯ ಶಕ್ತಿಯ ಕುರಿತಾಗಿ ಅವರು ತುಳಿಯುತ್ತಿರುವ ದಾರಿ ಯಾವ ನೆಲೆಯಲ್ಲಿದೆ. ಆಧುನಿಕ ತಂತ್ರಜ್ಞಾನಕ್ಕೆ ತಂತ್ರವಾಗಿ ತಮ್ಮ ನಿಜವಾದ ಜ್ಞಾನ ಶಕ್ತಿಯನ್ನು ಮರೆತು ಪರಾವಲಂಬಿಗಳಾಗಿರುವುದರ ಕುರಿತು ಕಾವ್ಯ ಮರಗುತ್ತದೆ. ಹಾಗೇ ಅನೇಕ ಆದರ್ಶಗಳನ್ನು ಹೊಂದಿ ಜೀವನ ಸ್ಫೂರ್ತಿದಾಯಕವಾಗುವಂತೆ ಮಾಡಲು ಪ್ರೇರಣೆ ನೀಡುತ್ತದೆ.

"ಸಾಮಾಜಿಕ ಹಿತ ವ್ಯಕ್ತಿ ಹಿತವನ್ನು ಅವಲಂಬಿಸಿದೆ. ವ್ಯಕ್ತಿ ಮತ್ತು ಸಮಾಜ ಪರಸ್ಪರ ಪೂರಕವಾಗಿ ಬೆಳೆಯಬೇಕಾದವು ಜನಸಾಮಾನ್ಯರನ್ನು ನಿರ್ಲಕ್ಷಿಸಿದ ಯಾವುದೇ ಸಮಷ್ಟಿ ಉದ್ಧಾರದ ಪ್ರಯತ್ನ ವಿಫಲವಾಗುತ್ತದೆ. ಆದ್ದರಿಂದಲೇ ಮಹಾತ್ಮದ ಲೋಕ ಸಂಗ್ರಹ ಕಾರ್ಯ ಶ್ರೀಸಾಮಾನ್ಯರ ಬಳಿಗೆ ಇಳಿಯುತ್ತದೆ. ಇದರಂತೆ ಶ್ರೀಸಾಮಾನ್ಯ ಸಂಕಟಗಳು, ಸಮಾಜದ ಸಂಕಟಗಳಾಗಿರುತ್ತವೆ. ಅವನಿಗೆ ನೀಡುವ ಗೌರವ ಸಮಾಜಕ್ಕೆ ನೀಡಿದಂತಾಗುತ್ತದೆ. ಸಮನ್ವಯ ಸಾಧನೆಯ ಪೂರ್ಣದೃಷ್ಟಿ ವಿಶೇಷವಾಗಿ ಕಾವ್ಯ ಒಳಗೊಂಡಿದೆ."[೨೧]

ಒಂದೇ ಒಂದಗಳು
ತಿಪ್ಪೆಯೊಳಗೆ
ನೋಡಿದ್ದೊಂದೇ ಕಾಗೆ
ಮರುಕ್ಷಣ ನೂರಾರು ಕಾಂವ್ ಕಾಂವ್
ಸಿಗುವುದೆಷ್ಟೋ ತಿಳಿಯದು
ಒಮ್ಮೆಗೇ ತಿಪ್ಪೆಗೆರಗಿದ್ದು ಹೌದು.

ಕೂಡಿ ತಿನ್ನುವುದರ ಕುರಿತಾಗಿ ಬಾಳುವುದರ ಕುರಿತಾಗಿ ನಾವು ಗಾದೆಗಳಲ್ಲಿ, ವಚನಗಳಲ್ಲಿ, ದಾಸರ ಹಾಡುಗಳಲ್ಲಿ ಕೇಳಿದ್ದೇವೆ. ಆದರೂ ಕಾವ್ಯ ಅದನ್ನು ಪುನರ್ ಧ್ವನಿಸುತ್ತಿದೆ. ಶತಶತಮಾನದ ಹಿಂದೆ ಹೇಳಿದ್ದರೂ ಮನುಷ್ಯ ಅದರಂತೆ ಜೀವಿಸಲಾಗದೆ ಸ್ವಾರ್ಥ, ದ್ವೇಷ, ಅಸೂಯೆ, ಅಂತರ, ಶ್ರೀಮಂತಿಕೆ ಹೀಗೆ ಅನೇಕ ಕೆಟ್ಟಗುಣಗಳಿಗೆ ಬಲಿಯಾಗಿ ಸ್ವಾರ್ಥವಾಗಿ ಬದುಕುವುದನ್ನು ಕಂಡು ಕಾವ್ಯ ಕೂಡಿ ಬಾಳುವುದಕ್ಕೆ ಕರೆ ನೀಡಿದೆ. ಅದು ಮೌಲ್ಯವಾಗಿಸಿ ಮನುಷ್ಯನಿಗೆ ಅಳವಡಿಸಿಕೊಳ್ಳಲು ಕರೆ ನೀಡಿದೆ. ಮಾತುಬಾರದ, ಮೂಖ ಪ್ರಾಣಿಗಳೇ ಪರಸ್ಪರ ಸಹಕಾರದಿಂದ ಹಂಚಿ ತಿನ್ನುವ ಸ್ವಭಾವ ಹೊಂದಿವೆ, ಆದರೆ ಮನುಷ್ಯ ವಿಚಾರ ಶಕ್ತಿ, ಬುದ್ಧಿಶಕ್ತಿ ಇದ್ದಾಗಲೂ ಆ ರೀತಿ ಬದುಕುವುದನ್ನು ಕಲಿಯಲಿಲ್ಲ ಎಂದು ನೋವಿನಿಂದ ಕಾವ್ಯ ನುಡಿಯುತ್ತಿದೆ. ಒಂದೇ ಅಂಗ-ಅಂಗಳ ಕಂಡರು ಇಡೀ ತನ್ನ ಕುಲವನ್ನೆಲ್ಲ ಕರೆಯುವುದು ಹಂಚಿ ತಿನ್ನಬೇಕು ಎಂಬ ಮೌಲ್ಯ ಮಾನವನಿಗೆ ಕಾಗೆಗಳು ಹೇಳದ ಪಾಠದಂತಿದೆ. ಈ ಚಿತ್ರಣವು ಸ್ಲಮ್‌ಗಳಲ್ಲಿ ಕಾಣಬಹುದು. ನಗರಕೇಂದ್ರಿತ ಸ್ಲಮ್‌ಗಳಲ್ಲಿ ಚಿಕ್ಕ ಚಿಕ್ಕ ಮಕ್ಕಳು, ಕೂಡಿ ಆಟವಾಡುವ ಕೂಡಿ ಹಂಚಿಕೊಳ್ಳುವ

ಗುಣ ಹೊಂದಿದಂತಿದೆ ಕಾರಣ ಹಸಿವು ಎಂತಹದ್ದು ಎಂದು ಪ್ರತಿಯೊಂದು ಜೀವಿಗೂ ಗೊತ್ತಿರುತ್ತದೆ. ಹಾಗಾಗೀ ತನ್ನ ಹಸಿವು ಇನ್ನೊಬ್ಬನ ಹಸಿವೆಂದು, ಇನ್ನೊಬ್ಬನ ಹಸಿವು ತನ್ನ ಹಸಿವೆಂದು ಅರಿತು ಬಾಳುವುದು ಕಂಡು ಬಂದಿದೆ. ಆದರೆ ಇದು ನಗರಕೇಂದ್ರದಲ್ಲಿ ಇತ್ತೀಚಿನ ಆಧುನಿಕಗೊಳ್ಳುತ್ತಿರುವ ಹಳ್ಳಿಗಳಲ್ಲಿಯೂ ಕಾಣೆಯಾಗಿದೆ. ಅದಕ್ಕಾಗಿ ಕೂಡಿ ಬಾಳುವ, ಕೂಡಿ ಜೀವಿಸುವ, ಹಂಚಿತಿನ್ನುವ, ಮೌಲ್ಯವನ್ನು ಕಾವ್ಯ ತನ್ನ ಆಶಯವಾಗಿಸಿಕೊಂಡಿದೆ.

ಸಣ್ಣ ಪುಟ್ಟ ಬಾಲ್ಯದ ಆಟಗಳ ಕುರಿತಾಗಿ ಮಮಕಾರ ತಾಳಿದೆ. ಇಂದು ಬಂಡವಾಳಶಾಹಿ ಕಾಲಘಟ್ಟದಲ್ಲಿ ಪ್ರತಿಯೊಂದು ಆಟಕ್ಕೂ ಹಣದ ಮೂಲಕ ಪ್ರಚಾರ ಮತ್ತು ಪ್ರಸ್ತುತ ಪಡಿಸುತ್ತಿದೆ. ಈ ದುರಂತದಿಂದಾಗಿ, ಹಳ್ಳಿಯ ಅನೇಕ ಆಟಗಳು, ಸುಸಂಸ್ಕೃತಿಯ ನೆಲೆಗಳು ನಾಶವಾಗಿವೆ. ಹಳ್ಳಿಯ ಆಟಗಳಲ್ಲಿ ಬದುಕಿನ ಚಿತ್ರಣ, ಸೋಲು-ಗೆಲವು ಯಾವ ರೀತಿಯಾಗಿ ಸ್ವೀಕರಿಸಬೇಕು, ಯಾವ ರೀತಿಯಾಗಿ ಎದುರಿಸಬೇಕು ಎನ್ನುವ ತತ್ವ ಒಳಗೊಂಡಿರುತ್ತಿದ್ದವೂ ಆದರೆ ಇಂದು ಕ್ರೀಡೆ ಎಂದರೆ 'ಹಣ' ಗಳಿಕೆಯಾಗಿದೆ. ಕಾರಣ ಮೌಲ್ಯಗಳ ವಿನಾಶಕ್ಕಿಂತ ಈ ದುರಂತ ತಲುಪಿದ್ದೇವೆ.

ಮಾನವ ಸಹಜವಾದ ಕೆಲವು ದೌರ್ಬಲ್ಯಗಳ ಪರಿಮಿತಗಳ ಮಧ್ಯದಲ್ಲಿಯವನ್ನು ಮೀರಿ ಆತ್ಮ ವಿಶ್ಲೇಷಣೆಯ ನಿರಂತರ ಜಾಗೃತೆಯಿಂದ ಮಹೋನ್ನತವಾಗಿ ತಿಳಿದ ಚೇತನ ಅದು ವೈಯಕ್ತಿಕ ಸಂಬಂಧಗಳಲ್ಲಾಗಲೀ ಸಾಮೂಹಿಕ ನಡೆನುಡಿಯ ಆಲೋಚನೆ ಆಚರಣೆಗಳಾಗಲೀ ಸಣ್ಣತನ ಯಾವಾಗೂ ಅವರ ಬಳಿಯಲ್ಲಿ ಸುಳಿಯದಿರಲಿ, ಎಂದು ಮಹತ್ತರವಾದ ಆಶಯ ಹೊಂದದೆ. ಮನುಷ್ಯನಲ್ಲಿ ನೆಲನಿಂತಿರುವ ಸಣ್ಣತನಗಳನ್ನು ನಾಶಗೊಳಿಸಿ ವಿಶ್ವಮಾನವಾಗಿ ಬದುಕಲು, ವೈಚಾರಿಕ ಜೀವನ ನಡೆಸಲು ಕಾವ್ಯ ಕರೆ ನೀಡಿದಂತಿದೆ ಹಾಗೂ ಆ ರೀತಿ ಬದುಕಲು ಸಲಹೆ ಸೂಚಿಸುತ್ತಿದೆ. ನಮ್ಮ ಸಮಾಜ, ಧರ್ಮ ಮೊದಲಾದವುಗಳನ್ನು ಕುರಿತು ಹೊಸ ಆಲೋಚನೆಯ ದಿಟ್ಟತನ ಕಾಣುತ್ತದೆ. ಹಳೆಯ ಜಾತಿ, ಮತ, ಮೌಢ್ಯಗಳು ಮರೆಯಾಗಿ ಹೊಸ ಸಮಾಜದ ಹುಟ್ಟು ಹತ್ತಿರವಾಗಿದೆಯೆಂದು ಕಾವ್ಯ ಧ್ವನಿಸುತ್ತಿದೆ. "ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿ ಈ ಮುಖಗಳು ಮೂರಾದರೂ ಒಳಗಡೆ ಮಿಡಿಯುತ್ತಿರುವ ಚೇತನ ಒಂದೇ. ಇಂತಹ ಪೂರ್ಣದೃಷ್ಟಿ ಆಶಯವನ್ನು ಹೇಗೆ ಹೊಂದಬೇಕು ಅದರಿಂದ ಆಗುವ ಪ್ರಯೋಗಗಳು ಕುರಿತು ಕಾವ್ಯ ದುಡಿಯುತ್ತಿದೆ. ಹಾಗೂ ಹೊಂದಿದ್ದರೆ ನಡೆಯುವ ದುರಂತಗಳ ಬಗ್ಗೆ ಎಚ್ಚರಿಕೆಯ ಮಾತುಗಳನ್ನು ಸಹ ನೀಡಿದೆ. ಶ್ರೀಸಾಮಾನ್ಯನೇ ಮೂಲ ಕಾರಣ ಶ್ರೀಸಾಮಾನ್ಯನ ಬದುಕು ನೆಮ್ಮದಿಯಿಂದ ಕೂಡಿದ್ದರೆ ಸಮಾಜ ಸುಖಿಸಮಾಜವಾಗುತ್ತದೆ. ಇಲ್ಲದಿದ್ದರೆ ರಕ್ತಪಾತ ಕಲಹ, ಇನ್ನಿತರ ದುರಂತಗಳನ್ನು ದಿನನಿತ್ಯ ನಡೆಯುತ್ತಿವೆ ಸಮಕಾಲೀನ ನೈಜ ಕಾವ್ಯದ ವೈಚಾರಿಕ ದೃಷ್ಟಿ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆಯಲ್ಲಿ ತೊಡಗಿ ಹೊಸ ಅವಲೋಕನ ಕ್ರಮವನ್ನು ನೀಡುತ್ತಿದೆ. ಸಮಾಜದ ಸಮಸ್ಯೆಗಳಿಗೆ ಸದಾ ಸ್ಪಂದಿಸುತ್ತಾ ಸರ್ವೋದಯದ

ಕನಸು ಕಾಣುವ ಕಾವ್ಯ ಸಮಕಾಲೀನ ಕಾವ್ಯವಾಗಿದೆ. ಜೊತೆಗೆ ಜೀವನ ಮೌಲ್ಯಗಳ ಕುರಿತಾಗಿಯೂ ಹೊಸ ವಿಶ್ಲೇಷಣೆಯನ್ನು ಕಾಣಬಹುದು.

**೭.೪. ಜೀವಪರ ಆದರ್ಶದ ನೆಲೆಗಳು**

ಕನ್ನಡ ಕಾವ್ಯ ಪರಂಪರೆಯಲ್ಲಿ ಅನೇಕ ಆದರ್ಶಗಳು ಕಾಣುತ್ತೇವೆ. ಅದರ ಮುಂದುವರಿಕೆಯ ಭಾಗವಾಗಿ ಸಮಕಾಲೀನ ಕಾವ್ಯ ಜೀವಪರ ಆದರ್ಶ, ಗುರಿಗಳನ್ನು ಹೊಂದಿದೆ. ಪರಂಪರೆಯನ್ನು ಅವಲೋಕಿಸಿದಾಗ ಸಮಾಜದ ಕುರಿತಾಗಿ ಸಮಾಜಕ್ಕೆ, ಸಮುದಾಯಕ್ಕೆ ವ್ಯಕ್ತಿಗತವಾಗಿ ಅನೇಕ ಆದರ್ಶಗಳನ್ನು, ಬದುಕಿನ ನಿಯಮಗಳನ್ನು ಕಾವ್ಯ ನೀಡುತ್ತಾ ಬಂದಿರುವುದು ಕಂಡು ಬಂದಿದೆ. ಆ ಆದರ್ಶಗಳ ವೈಚಾರಿಕತೆಯ ನೆಲೆಯಲ್ಲಿ ಜೀವಪರವಾದ ಚಿಂತನೆಯನ್ನು ಸಾರುತ್ತವೆ. ನವೋದಯ ಕಾವ್ಯದಲ್ಲಿ ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಹೀಗೆ ಸಾಹಿತ್ಯ ಘಟ್ಟದಲ್ಲಿ ಆದರ್ಶಗಳು ಕಾಲಮಾನಕ್ಕನುಗುಣವಾಗಿ ರೂಪಗೊಳ್ಳುತ್ತಿದ್ದವು. ಅದರಂತೆ ಇಂದು ಜಾಗತೀಕರಣದ ಸಂದರ್ಭದಲ್ಲಿ ಜೀವಪರವಾದ ಆದರ್ಶಗಳನ್ನು ಕಾವ್ಯ ಅಭಿವ್ಯಕ್ತಿಸಿ, ಪ್ರತಿಪಾದಿಸುತ್ತಿದೆ. "ಮಾನವನ ಅನುಭವ ಬೆಳೆದಂತೆಲ್ಲಾ ಜ್ಞಾನದ ಈ ಎಲ್ಲಾ ಶಾಖೆಗಳೂ ವಿಕಾಸಗೊಳ್ಳುತ್ತಾ ಪರಿಷ್ಕರಗೊಳ್ಳುತ್ತಾ ಪರಿಪುಷ್ಟಗೊಳ್ಳುತ್ತಾ ಬಂದಿರುವುದನ್ನು ಕಾಣುತ್ತೇವೆ."[೨೨] ತನ್ನ ಅನುಭವಗಳನ್ನು ವಿಶ್ಲೇಷಿಸಿಕೊಳ್ಳುತ್ತಾ ಮುನ್ನಡೆಯುವಾಗ ವಿಚಾರಶಕ್ತಿಯೇ ಕಾರಣ. ಇಂತಹ ಶಕ್ತಿ ಮನುಷ್ಯನನ್ನು ಆದರ್ಶಪ್ರಾಯದತ್ತ ಕೊಂಡೊಯ್ಯುವಂತಾಗಬೇಕು. ಸಾಮಾಜಿಕ, ಸೌಹಾರ್ದಯುತ, ನೆಮ್ಮದಿಯ ಬದುಕನ್ನು ಸೃಷ್ಟಿಸುವಂತಿರಬೇಕು. ಇಂತಹ ಆದರ್ಶಗಳು ಮಾತ್ರ ಮಾನವನನ್ನು ಜೀವಿಯಾಗಿಸುತ್ತವೆ. ಯಾವುದೇ ಒಂದು ಭಾವನೆ ಮನಸ್ಸಿನಲ್ಲಿ ಹೊಳೆದು ತೋರಿದಾಗ ಅದನ್ನು ಮತ್ತೆ ಮತ್ತೆ ಪರಿಭಾವಿಸುತ್ತಾ ಉಜ್ಜಿ, ತಿಕ್ಕಿ, ಬಡಿದು, ಸ್ಪಷ್ಟವಾದ ರೂಪವನ್ನು ಅದು ಪಡೆಯುವಂತೆ ಮಾಡುವುದು ವಿಚಾರ ಶಕ್ತಿಯಾಗಿದೆ. ಈ ವಿಚಾರ ಶಕ್ತಿಯು ಆದರ್ಶದೊಂದಿಗೆ ಬೆರೆತು ಜೀವಪರವಾದ ಆದರ್ಶಗಳು ಸೃಷ್ಟಿಯಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮಾನವನ ಯಾಂತ್ರಿಕ ಜೀವನಕ್ಕೆ ಒಳಗಾಗಿ ಎಲ್ಲವನ್ನು ಒಂದು ರೀತಿಯ ಕೃತವಾಗಿ ಅನುಭವಿಸುವುದನ್ನು ಕಾಣುತ್ತೇವೆ. ಮನಸಾರೆ ನಗಲಾರದೆ, ಅಳಲಾರದೆ ಬದುಕನ್ನು ಮುನ್ನೆಡೆಸುತ್ತಿದ್ದಾನೆ. ಪಕ್ಕದ ಮನೆಯವರನ್ನು ಅನುಮಾನದಿಂದ ನೋಡುವ ದೃಷ್ಟಿ ಬೆಳಸಿಕೊಂಡು ನೆಮ್ಮದಿಯನ್ನು ಸಾರ್ಥಕತೆಯನ್ನು ಕಳೆದುಕೊಂಡು ಬದುಕುವ ದುರಂತಕ್ಕೆ ತಲುಪಿದ್ದಾನೆ. ಇಂತಹ ದುರಂತಕ್ಕೆ ಕಾವ್ಯ ಮುಲಾಮುವಿನ ರೀತಿಯಲ್ಲಿ ಆದರ್ಶಗಳನ್ನು ಲೇಪಿಸಿ ಮನುಷ್ಯನ ಬದುಕನ್ನು ಕಾವ್ಯಮಯವಾಗಿಸುತ್ತಿದೆ.

ಸಮಕಾಲೀನ ಕಾವ್ಯ ಬಹುಕೇಂದ್ರಿಯ ನೆಲೆಗಳನ್ನು ಹೊಂದಿಯೂ ಆದರ್ಶಗಳನ್ನು ಸಮಾಜಕ್ಕೆ ನೀಡುತ್ತಿರುವುದು ಮುಖ್ಯ ಸಂಗತಿಯಾಗಿದೆ. ಕನ್ನಡ ಕಾವ್ಯದ ರಥವನ್ನು ಮುಂದುವರೆಸುವ ಜವಾಬ್ದಾರಿ ಹೊತ್ತಿರುವ ಸಮಕಾಲೀನ ಕವಿಗಳು ಈ ನೆಲದ ದುಃಖವನ್ನು, ಅಂತರವನ್ನು, ದೂರ ಮಾಡಿ ಪ್ರೀತಿ, ಸ್ನೇಹ, ಪರಸ್ಪರ ಹೊಂದಾಗುವ ಬಗೆಯ ಆದರ್ಶಗಳು ಕಾಣುತ್ತೇವೆ.

ಕವಿ ಆರೀಫ್ ರಾಜಾ ತಮ್ಮ ಕವಿತೆಯಲ್ಲಿ ಮಾನವೀಯತೆಯ ಆದರ್ಶವನ್ನು ಕಾಣಲು, ನೀಡಲು, ಹೊರತಂದಿವೆ ಅದಕ್ಕಾಗಿ ಅವರು ಪ್ರೇಮ, ಕಾಮದ ನನ್ನೆರಡು ಕಣ್ಣುಗಳು ಕಾಲವಾಗಿವೆ ಜಂಗಮ ಫಕೀನ ಜೋಳಿಗೆಗಾಗಿ ಎಂಬ ಸಾಲುಗಳ ಮೂಲಕ ಪ್ರಸ್ತುತ ಸಂದರ್ಭದ ಚಿತ್ರಣವನ್ನು ನೀಡುತ್ತದೆ. ನಾವು ಎಂಥ ಕಾಲಘಟ್ಟದಲ್ಲಿ ಇದ್ದೇವೆ. ಪ್ರೇಮಕಾಮುಗಳು ಯಾವ ರೀತಿಯಾಗಿ ಕಾಲವನ್ನು ನಿರ್ಧರಿಸುತ್ತವೆ ಎಂದು ಹೇಳುತ್ತಾ, ಧರ್ಮದ ಅಂತರ ಮೀರಿ ಸೌಹಾರ್ದತೆಯ ಆದರ್ಶ ಬಿತ್ತುವುದು ವಿಶೇಷವಾಗಿದೆ. ಅದರಂತೆ, ಪೀರಬಾಷಾ ಅವರು ದೇವರನ್ನು ಮನುಷ್ಯರಾಗಿಸಲು ಕರೆ ನೀಡಿ ತಾವು ಅತ್ತಾಗ ಬಿದ್ದ ಕಣ್ಣೀರಲ್ಲಿ ಜೀವವಿದೆ ಎಂದು ಹೇಳಿ ತಮ್ಮ ಕಾವ್ಯ ತನಗೆ ಹಿಂಸಿಸಿದವರು ಗೋರಿಯ ಮೇಲೆ ವಿಜಯ ಗೀತೆ ಹಾಡುತ್ತದೆ ಎಂಬ ಆಶಯ ವ್ಯಕ್ತಪಡಿಸಿರುವುದು ಕಾಣುತ್ತೇವೆ.

ಕಾವ್ಯವೇ ನೀ ನನ್ನ
ಕನಸಂತೆ, ಕನವರಿಕೆಯಂತೆ
ಆ... ಸೂರ್ಯ ರಶ್ಮಿಯಂತೆ
ಹರಡು ಸಂದುಗೊಂದುಗಳ
ಕತ್ತಲೆ ಕೊಂದು
ಶ್ವೇತ ಪಾರಿವಾಳವಾಗು.[೨೪]

ಕವಿ ಇಲ್ಲಿ ಕಾವ್ಯದ ಆಶಯದೊಂದಿಗೆ ತನ್ನ ಕಾಲಘಟ್ಟದ ಕವಿತೆ ಎಂತಹ ಕೆಲಸ ಮಾಡಬೇಕು ಎಂಬ ಆದರ್ಶವನ್ನು ತಿಳಿಸುತ್ತಾರೆ. ಇದು ಕೇವಲ ಕಾವ್ಯದ ಆದರ್ಶದಲ್ಲಿ ಅದು ಮನುಷ್ಯನ್ನು ಆ ರೀತಿ ಬಾಳಬೇಕು ಎಂಬ ಮಹತ್ತರವಾದ ಆಶಯವನ್ನು ವ್ಯಕ್ತಪಡಿಸಿರುವುದು ಕಂಡು ಬಂದಿದೆ. ಕಾವ್ಯವೇ ನೀನು ತ್ಯಾಗಮಹಿಯಾಗು, ಯಾವುದೇ ಆರಾಧನವಿಲ್ಲದೆ ಹಾಲು ಹೈನುಗಳ ಪೂಜೆ ಇಲ್ಲದೆ ಭಂಧೋಬಂಧ ಅಲಂಕಾರವಿಲ್ಲದೆ ಬಿಚ್ಚಿಟ್ಟ ಬಗೆದ ಬೆತ್ತಲಾದ ಮೂರ್ತಿಯಂತೆ ನೀನಾಗು ಎಂದು ಹೇಳುವುದರೊಂದಿಗೆ ಮನುಷ್ಯನಲ್ಲಿರುವ ಅಂಧಕಾರವು ಕಳಚಿ ಕಣ್ತೆಗೆದು ಚಿತ್ರವಾಗುವಂತೆ ಕರೆ ನೀಡಿದ್ದಾರೆ. ಬೆತ್ತಲಾಗುವುದೆಂದರೆ ವ್ಯಕ್ತಿ ತನ್ನಲ್ಲಿರುವ ಕೆಟ್ಟಗುಣಗಳನ್ನು ಕಿತ್ತೆಸೆದು ಸದ್ಗುಣದ ಮೂರ್ತಿಯಾಗಬೇಕು ಎಂದಿದ್ದಾರೆ. ಇದು ಮನುಷ್ಯ ಕುರಿತಂತೆ ಹೇಳಿದರ ತನ್ನ ಕಾಲಘಟ್ಟಕ್ಕೆ ಕವಿತೆಯ ಸ್ವರೂಪ ಮತ್ತು ಆಶಯವನ್ನು ಹೇಳಿದಂತಿದೆ. ಹಾಗೇ ಮನುಷ್ಯನ ಜ್ಞಾನ ಮುಗಿಲೆತ್ತರಕ್ಕೆ ಬೆಳೆಯಬೇಕು ಪಾತಾಳದ ತಾಳಕ್ಕೆ ಮುಟ್ಟಿ ಹೊಸ ಬೆಳಕನ್ನು ಸೃಷ್ಟಿಸಬೇಕು. ಸಂಪ್ರದಾಯಸ್ಥ ಚರಿತ್ರೆಯನ್ನು ಮುರಿದು ಹೊಸ ಚರಿತ್ರೆಯನ್ನು ಬರೆಯಬೇಕು ಅದು ಶ್ರೀಸಾಮಾನ್ಯನ ಚರಿತ್ರೆಯಾಗಿರಬೇಕು ಎಂಬ ಆದರ್ಶ ನೀಡುತ್ತದೆ. ಹಾಗೇ ಮುಂದುವರೆದು ಹೂ, ಹಣ್ಣು ಕೊಡು ಎನ್ನುವುದು ಪರೋಪಕಾರದ ಆದರ್ಶವನ್ನು ತಿಳಿಸುತ್ತದೆ. ಇನ್ನೊಬ್ಬರಿಗೆ ನೋವು ನೀಡದೆ ಹಸಿವನ್ನು ನೀಗಿಸೋ ತುತ್ತು ಹಣ್ಣು ಹೂ ನೀಡಬೇಕು ಎನ್ನುವುದು ಕಾವ್ಯದ ಆಶಯ ಹಾಗೂ ಆದರ್ಶ.

ಮಾನವನ ದೈನಂದಿನ ಬದುಕು ಬದಲಾದಂತೆ ಕಾವ್ಯ ತನ್ನ ಭಾಷೆ, ಶೈಲಿ ನುಡಿಗಟ್ಟು ಆದ್ಯತೆಗಳಲ್ಲಿ ಬದಲಾವಣೆ ಕಂಡಿದೆ. ಸಮಕಾಲೀನ ವಿಶೇಷ ಸೂಫಿಸಂತರ ಕಾವ್ಯವನ್ನು ಅನುವಾದಿಸುವುದು ಕಂಡು ಬಂದಿದೆ. ಜಗತ್ತನ್ನು ಬೇರೆಂದು ದೇಶದ ಸಂತರ, ಕಾವ್ಯವನ್ನು ಕನ್ನಡಕ್ಕೆ ತರುವಲ್ಲಿ ತನ್ನ ಮಹತ್ವದ ಪಾತ್ರವಹಿಸಿದೆ. ಆ ಆದರ್ಶವನ್ನು ಈ ನೆಲಕ್ಕೆ ತಕ್ಕುದಾದ ರೀತಿಯಲ್ಲಿ ಅಭಿವ್ಯಕ್ತಿಸುವುದು ಕಂಡು ಬಂದಿದೆ. ಪ್ರೇಮವನ್ನು ಆಧ್ಯಾತ್ಮಿಕ ಮಟ್ಟಕ್ಕೊಯ್ಯುವ ಬಗೆ ವಿಶೇಷವಾಗಿದೆ. ಪ್ರೇಮವನ್ನು ಆದರ್ಶವಾಗಿಸಿ ಪ್ರೇಮದ ಬಗ್ಗೆ ಹೆಚ್ಚಿನ ಒಲುವು ತೋರುವುದು ಕಂಡು ಬಂದಿದೆ. ಪ್ರೇಮ ಅಮೂರ್ತದಲ್ಲಿ ಅದು ಧಮನಿ ಧಮನಿಯ ರಕ್ತಕಣಗಳಲ್ಲಿ ಹುಟ್ಟಿದ ನಿಜದ ಅನುಭವ ಅದು ಎರಡು ದೇಹಗಳ ನಡುವಿನ ಆಕರ್ಷಣೆಯಲ್ಲಿ ಎರಡು ಆತ್ಮಗಳ ನಡುವಿನ ಅನುಸಂಧಾನ. ಪ್ರೇಮಕ್ಕೆ ನಾನು ಹೆದರುವುದಿಲ್ಲ. ಬೆಂಕಿಯ ಉರಿಗೆ ಪತಂಗ ಹೆದರದ ಹಾಗೆ ಎನ್ನುವ ರೂಮಿಯ ಕವಿತೆ ಸಾಲವನ್ನು ಕಾವ್ಯ ಅನುಸರಿಸಿದಂತಿದೆ. ಆದರ್ಶವಾದ ಪ್ರೇಮವನ್ನು ಹೊಂದುವುದು ಅನುಭಾವಿಸುವುದು ಹೇಗೆ ಎಂದು ಕಾವ್ಯ ನುಡಿಯುತ್ತಿದೆ. ಕಾವ್ಯದಲ್ಲಿ ಕಾಣುವ ಆದರ್ಶ ಮನುಷ್ಯನ ಬದುಕಿಗೆ ಬೆಳಕು ನೀಡುವಂತಹದ್ದು. ಕಾವ್ಯವೇ ಕನಸಿನಂತೆ, ಕನವರಿಕೆಯಂತೆ ಸೂರ್ಯ ಕಿರಣಗಳನ್ನು ಹರಡು ಎಲ್ಲಲ್ಲಿ ಕತ್ತಲಿದೆಯೋ ಅಂಧಕಾರವಿದೆಯೋ ಅಲ್ಲಿ ಬೆಳಕನ್ನು ಚೆಲ್ಲು ಹಾಗೂ ಶ್ವೇತ ಪಾರಿವಾಳವಾಗು ಎನ್ನುವಂತಹದ್ದು 'ಶಾಂತ'ತೆಯ ಸೂಚಕವಾಗಿದೆ. ಶಾಂತತೆಯನ್ನು ಒಂದು ಆದರ್ಶವಾಗಿಸಿ ಕಾವ್ಯ ರಚನೆಗೊಳ್ಳಿಸುತ್ತಿದೆ. ಮನುಷ್ಯನಲ್ಲಿ ಶಾಂತಿಯನ್ನು ತುಂಬುವ ಹಾಗೂ ಶಾಂತಿಗಾಗಿ ಮನುಷ್ಯನು ಮಾಡಬೇಕಾದ ತಯಾರಿ ಯಾವ ರೀತಿಯಾಗಿರಬೇಕು ಎನ್ನುವಂತಹದ್ದು ಕಾವ್ಯದಲ್ಲಿದೆ. ಶಾಂತಿಯ ಮಹತ್ವವನ್ನು ಸಾರುತ್ತಿದೆ. ಗಡಿಗಳಲ್ಲಿ ಯುದ್ಧ ನಡೆಯುವುದನ್ನು ವಿರೋಧಿಸಿ ಕಾವ್ಯ ದೇಶ ದೇಶಗಳ ನಡುವೆ ಶಾಂತಿಯುವ ಸಂಬಂಧ ಏರ್ಪಡಿಸಲು ಬಯಸುತ್ತಿದೆ. ಯಾವ ತಪ್ಪು ಮಾಡದ ಸಾವುಗಳು ಸಂಭವಿಸುತ್ತಿರುವುದಕ್ಕೆ ಕಾವ್ಯ ಕಣ್ಣೀರು ಹಾಕುತ್ತಿದೆ. ತನ್ನದಲ್ಲದ ತಪ್ಪಿಗೆ ಜೀವ ಕಳೆದುಕೊಂಡು ಮಣ್ಣಾಗುವ ಚೇತನಗಳನ್ನು ಸ್ಮರಿಸಿ ಇಂತಿಯನ್ನು ಧ್ಯಾನಿಸುತ್ತಿದೆ. ಮನುಷ್ಯನಲ್ಲಿ ಹಡಗಿರುವ ಧರ್ಮಾಂಧತೆ, ಭಾಷಾಪ್ರೇಮ, ಜಾತಿ ಪ್ರೇಮ, ಅತಿಯಾಗಿ ವಿಚಾರತೆಯನ್ನು ನಾಶಗೊಳಿಸಿಕೊಂಡು ವರ್ತಿಸುವ ವರ್ತನೆಗೆ ಧಿಕ್ಕಾರ ಹೇಳಿ ಅವರಲ್ಲಿ ಪ್ರೀತಿ, ಶಾಂತಿಯನ್ನು ತುಂಬುವ ಬಯಕೆ ಹೊಂದಿದೆ.

ಸಮಕಾಲೀನ ಕಾವ್ಯದ ಆದರ್ಶಗಳು ಮನುಷ್ಯನಲ್ಲಿ ಹೊಸ ಚೇತನ, ಚಿಂತನೆಯನ್ನು ಬಿತ್ತುವಲ್ಲಿ ತುಂಬಾ ಪ್ರಭಾವ ಬೀರುತ್ತಿದೆ. ಭಾಷೆ, ದೇಶ, ನೆಲ ಜಲದ ಕುರಿತು ಆದರ್ಶ ಚಿಂತನೆಯನ್ನು ಹೇಗೆ ತಾಳಬೇಕು ಮನುಷ್ಯನು ಜೀವಪರ ನಿಲುವು ಹೇಗೆ ತಾಳಬೇಕು ಎನ್ನುವುದನ್ನು ಕಾವ್ಯ ಹೇಳುತ್ತದೆ. ಅಂತಹ ನಿಲುವುಗಳನ್ನೇ ಆದರ್ಶ, ಗುರಿಯಾಗಿಸಿಕೊಂಡು ಕಾವ್ಯ ತನ್ನ ಪರಂಪರೆಯ ಹಾದಿಯನ್ನು ಮುಂದುವರೆಸುತ್ತಿದೆ.

ಆದರ್ಶದ ಬದುಕಿಗೆ ಮೂಲ ಪ್ರೇರಣೆ ಪ್ರೇಮ ಎಂಬುದು ಕಾವ್ಯದ ಮೂಲಕ ಸ್ಪಷ್ಟವಾಗುತ್ತದೆ. ಅದು ಜೀವಪರ ಮನುಷ್ಯತ್ವ ಆತ್ಮದ ಪ್ರೇಮವಾಗಿದೆ. ಸಮಾಜದಲ್ಲಿ ಅನೇಕ ಸಮಸ್ಯೆಗಳು ಹುಟ್ಟುವುದು ಈ ಪ್ರೇಮದ ಕೊರತೆಯಿಂದ. ಪ್ರೇಮ ಎಲ್ಲವನ್ನು ಗೆಲ್ಲುತ್ತದೆ. ಅಂತಹ ಪ್ರೇಮದ ಜೀವಂತಿಕೆಯನ್ನು ಕಾವ್ಯ ಅಭಿವ್ಯಕ್ತಿಸುತ್ತಿದೆ. ಸಮಾಜದ ಏಳಿಗೆಗೆ ಪ್ರೇಮವೇ ಮದ್ದು, ಈ ಪ್ರೇಮವೊಂದಿದ್ದರೆ ದೇಶ ದೇಶಗಳ ಮಧ್ಯ ಯುದ್ಧ ನಡೆಯುವುದಿಲ್ಲ, ಮನುಷ್ಯ ಮನುಷ್ಯರ ಮಧ್ಯೆ ಅಂತರ ಇರುವುದಿಲ್ಲ. ಅದಕ್ಕಾಗಿ ಪ್ರೇಮವನ್ನು ಕಾವ್ಯ ಹೆಚ್ಚಾಗಿ ಧ್ಯಾನಿಸುವಂತೆ ಕಾಣುತ್ತಿದೆ. "ಕಾವ್ಯದ ಮೂಲಭೂತ ಆರಾಧನಾ ಸ್ಥಾನಗಳಲ್ಲೊಂದಾಗಿದೆ ಈ ಶಕ್ತಿ. ಈ ಬೆಳಕಿನ ಪ್ರವಾಹಕ್ಕೆ ಮುಂಜಾವಿಗೆ ಮೈವೊಡ್ಡುವುದೆಂದರೆ ಹೊಸ ಜೀವನ. ವಿಕಾಸದಲ್ಲಿಯ ದಿವ್ಯಪರ ಪರಿವರ್ತನೆಗೆ ತಮ್ಮನ್ನು ತಾವು ಕೊಟ್ಟುಕೊಂಡಂತೆ ಪ್ರೇಮಕಾರಣವಾಗಿದೆ."[೨೫] ಈ ಪ್ರೇಮದ ಕೊರತೆಯಿಂದ ಮನುಷ್ಯ ತನ್ನನ್ನು ಒಂದು ಸೀಮಿತ ಆಚರಣೆಗೆ ಒಳಪಡಿಸಿಕೊಂಡು ಮತ್ತೊಂದನ್ನು ಅನುಮಾನದಿಂದ ನೋಡುವ, ಅಂತರದಿಂದ ಕಾಣುವ ಮನೋಭಾವವೊಂದಿದ್ದಾನೆ. ಸಾಮಾಜಿಕ ಸಂಬಂಧಗಳು ಸಹ ವ್ಯವಹಾರಿಕ ಸಂಬಂಧಗಳು ಸಹ ಸೌಹಾರ್ದತೆಯಿಂದ ಇರಬೇಕಾದರೆ ಪ್ರೇಮ ಮುಖ್ಯ ಅದಕ್ಕೆ ಕಾವ್ಯ ಪ್ರಸ್ತುತ ಸಂದರ್ಭದಲ್ಲಿ ಪ್ರೇಮವನ್ನು ಆರಾಧಿಸುತ್ತಿದೆ. ಪ್ರೇಮವನ್ನು ಆದರ್ಶವಾಗಿ ಕಾಣುತ್ತಿದೆ. ಪ್ರಕೃತಿಯೊಂದಿಗೆ ಸಹ ಸಂಬಂಧವನ್ನು ಹೊಂದುವುದು ಪ್ರಾಣಿ ಪಕ್ಷಿಗಳನ್ನು ಆಧಾರದಿಂದ ಕಾಣುವುದು ಹಾಗೂ ಅವುಗಳಿಗೆ ಗೌರವ ಸೂಚಿಸುವುದು ಮಿಡಿಯುವುದು ಪ್ರೇಮದಿಂದ.

ಪ್ರಸ್ತುತ ಸಂದರ್ಭದಲ್ಲಿ ತಂದೆ-ಮಕ್ಕಳು, ಗುರು-ಶಿಷ್ಯರ, ಗಂಡ-ಹೆಂಡತಿಯ, ಬಂಧುಬಳಗದವರು, ಮನುಷ್ಯ, ಪ್ರಾಣಿ, ಪಕ್ಷಿ, ನಿಸರ್ಗ-ಸಂಪತ್ತಿನ ಮಧ್ಯೆ ಕಂದಕ ಉಂಟಾಗಿರುವುದಕ್ಕೆ ಪ್ರೇಮದ ಕೊರತೆ ಕಾರಣ ಅದಕ್ಕಾಗಿ ಕಾವ್ಯ ಪ್ರೇಮವನ್ನು ಬಿತ್ತಿ ಬೆಳಗಲು ಹಂಬಲಿಸುತ್ತಿದೆ. ಆದರ್ಶಮಯವಾದ ಜೀವನಕ್ಕೆ ಪ್ರೇಮವು ಕಾರಣವೆಂದಿದೆ. ಮಾತಿನ ಕುರಿತಾಗಿ ಲಕ್ಕೂರ ಆನಂದ ತಮ್ಮ ಕವಿತೆಯಲ್ಲಿ

ನಿನ್ನ ತುಟಿಯಂಚಿನ ಮಾತು
ಇನ್ನಾದರೂ ಮೌನದ ಚಿಪ್ಪೊಡೆದು
ಕಡೆದ ಹಗಲಿನ ಕೂಡ ಒಂದಷ್ಟು ಮಾತಾಡಲಿ
ಹಿಡಿದಿಟ್ಟ ಹೃದಯಗಳೊಡನೆ
ಬೆಸಗೊಳ್ಳದ ಮನಸುಗಳೊಡನೆ
ಕೊಂಚವೆ-ಕೊಂಚ ಮಾತಾಡಿ ಜೀವ ಕೊಡಲಿ.[೨೬]

ಮಾತು ಒಂದು ಆದರ್ಶವಾಗಿಸಿ ಕಾವ್ಯ ಸೃಷ್ಟಿಗೊಂಡಿದೆ ಮಾತೆ ಕಾವ್ಯ. ಕಾವ್ಯವೇ ಮಾತು ಆಗಿದೆ. ಮೌನದ ಭಾರ ಸಾಕಾಗಿ ಮಾತಿಗೆ ಕರೆದಿದ್ದಾರೆ. ಮೌನದ ಚಿತ್ರ ಹೊಡೆದು ಮಾತಿನ ಮುತ್ತು ಹೊರ ಬರಲಿ ಅಲ್ಲಿ ಜೀವವಿದೆ, ಭಾವವಿದೆ, ಕರುಣೆಯಿದೆ ಅದಕ್ಕಾಗಿ

ಪರಸ್ಪರ ಮಾತಾಡಬೇಕು ಎಂದು ಮಾತಿಗೆ ಆಹ್ವಾನ ಕೊಡುತ್ತಿದ್ದಾರೆ ಮಾತು ಮಾತು ಮಥಿಸಿ ಒಂದು ನಾದದ ನವನೀತ ಎನ್ನುವ ಬೇಂದ್ರೆಯವರ ಕವಿತೆಯ ಸಾಲು ಮಾತಿನ ಕುರಿತು ಹೇಳುವಂತಿದೆ. ಮೌನ ಮುನಿಸು ಮುರಿದು ನಗುವ ಬೀರಿ ತುಟಿ ಹಂಚಿನಲ್ಲಿ ಮಾತು ಬೇಕಾಗಿದೆ ಮನಸ್ಸುಗಳಿಗೆ ಸಾಂತ್ವನ, ಹಾರೈಕೆಯ ನುಡಿಗಳು ಬೇಕಾಗಿವೆ ನೋವುಗಳಿಗೆ ಎಂಬಂತೆ ಮಾತಿನ ಕುರಿತಾಗಿ ಕವಿ ತುಂಬಾ ಆಕರ್ಷಿತವಾದ ಸಾಲುಗಳನ್ನು ಬರೆದಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಎಷ್ಟೊಂದು ಭಯವಿದೆ ಮಾತನಾಡಲು, ಧ್ವನಿಗೆ ಧ್ವನಿಗೂಡಿಸುವ ಧ್ವನಿ ಸಿಗಲಾರದೆ ಹೋಗಿದೆ. ಮುಕ್ತವಾಗಿ ಮಾತನಾಡುವ ಮನಸ್ಸು, ಭಯದಿಂದ ನರಳುತ್ತಿದೆ. ಕಾರಣ ಮಾತನ್ನು ಹತ್ತಿಕ್ಕುವ ಕೆಲಸ ಪ್ರಸ್ತುತ ಸಂದರ್ಭದಲ್ಲಿ ನಡೆಯುತ್ತಿದೆ. ಸತ್ಯ, ನಿಷ್ಠೆ, ಪ್ರಾಮಾಣಿಕತೆಯ ಕುರಿತಂತೆ, ವೈಚಾರಿಕವಾಗಿ, ಮುಕ್ತವಾಗಿ ಅಭಿವ್ಯಕ್ತಿಸಿದರೆ ಆ ಧ್ವನಿಯನ್ನು ಹತ್ತಿಕ್ಕುವ ದುರಂತಕಾಲ ಗಟ್ಟಿ ಇದಾಗಿದೆ ಎಂದು ಅದಕ್ಕಾಗಿ ಕಾವ್ಯ ಮಾತನಾಡಲು ಆಹ್ವಾನಿಸುತ್ತಿದೆ. ಎಷ್ಟೊಂದು ನರಳಿಕೆಯಿದೆ ಎದೆಗೂಡಿಂದ ಹೊರಬರುವ ಆ ಒಂದು ಮಾತಿಗೆ ದಿನದ ಬೆಳಕಲ್ಲಿ ನಾಳೆಯ ಕುರಿತು ಕದ ತೆರೆದು ಕನಸು ಕಾಣುವ ಕಣ್ಣುಗಳಲ್ಲಿಯೂ ಸಹ ಕಂಬನಿ, ಆಡುವ ಮಾತಿನಲ್ಲಿಯೂ ಸಹ ನಡುಕ ಹುಟ್ಟಿಸುವ ಪರಿಗೆ ಧಿಕ್ಕಾರ ಹೇಗೆ ಕಾವ್ಯ ಕೊಂಚ ಕೊಂಚ ಮಾತಾಡಿ ಜೀವ ಜೀವ ಕೂಡಲಿ ಎಂದಿದೆ. ನಡೆಯುವ ಪಯಣದಲ್ಲಿ ಹೆಜ್ಜೆ ಹೆಜ್ಜೆಗೂ ಪ್ರಶ್ನೆ, ತಿನ್ನುವ ತುತ್ತು, ತೊಡುವ ಬಟ್ಟೆ, ಆಡುವ ಮಾತನ್ನು ಸಹ ಸಿದ್ಧಪಡಿಸಿ ಪಟ್ಟ ಬಿಟ್ಟಿದ್ದಾರೆ ಅದರಂತೆಯೇ ಮಾತಾಡಬೇಕು, ಅದರಂತೆಯೇ ತೊಡಬೇಕು, ಅದರಂತೆಯೇ ಬದುಕಬೇಕು, ಈ ರೀತಿಯಾದ ನಿಯಮಗಳನ್ನು ಪ್ರಭುತ್ವ ಹೊರಗಾಗಿದೆ ಇದನ್ನು ಮನುಷ್ಯ ವಿರೋಧಿ ಚಿಂತನೆ ಎಂದು ಕಾವ್ಯ ಧಿಕ್ಕರಿಸಿ ಸ್ವತಂತ್ರವಾಗಲು ಎಲ್ಲೆ ಮೇರೆಗಳನ್ನು ಮೀರಿ ಹಾಡುತ್ತಿದ್ದೆ. ಮಾತು ಜೀವ ಜೀವಕ್ಕೆ ಉಪಯುಕ್ತ ಅದಕ್ಕಾಗಿ ಬೇಂದ್ರೆಯವರು ವಾಗ್ದೇವಿಯ ಸಾರವೇ 'ಶಬ್ದವೇ ಕಾವ್ಯ' ಅದು ದೇವರ ನಾಮ ಎಂದಿದ್ದಾರೆ.

ವೈಚಾರಿಕತೆಯ ಮುಖ್ಯ ಲಕ್ಷಣವೆಂದರೆ ಒಳ್ಳೆಯದು ಎಲ್ಲಿ ನಡೆದರೂ ಅದಕ್ಕೆ ನಮ್ಮ ರಚನಾತ್ಮಕ ಬೆಂಬಲವನ್ನು ಕೊಡುವುದು. ಅದು ಯಾವುದೇ ಪ್ರದೇಶ, ಭಾಷೆ, ಧರ್ಮ, ಜಾತಿಯದಾದರೂ ಸರಿಯೇ ಜೀವಪರವಾದ ಒಳ್ಳೆಯ ಆಲೋಚನೆ ಅದಕ್ಕೆ ಬೆಂಬಲ ನೀಡುವುದು ವೈಚಾರಿಕತೆಯ ಸಾರವಾಗಿದೆ. ಸಾಮಾಜಿಕ ಹಿತ ವ್ಯಕ್ತಿಯ ಹಿತವನ್ನು ಅವಲಂಬಿಸಿದೆ. ವ್ಯಕ್ತಿ ಮತ್ತು ಸಮಾಜ ಪರಸ್ಪರ ಪೂರಕವಾಗಿ ಬೆಳೆಯಬೇಕಾದವು. ಜನಸಾಮಾನ್ಯರನ್ನು ನಿರ್ಲಕ್ಷಿಸಿದ ಯಾವುದೇ ಸಮಷ್ಟಿ ಉದ್ಧಾರದ ಪ್ರಯತ್ನ ವಿಫಲವಾಗುತ್ತದೆ. ಆದ್ದರಿಂದ ಸಮಕಾಲೀನ ಕಾವ್ಯ ವ್ಯಕ್ತಿಯನ್ನು ಒಳಗೊಂಡು ಸಮಷ್ಠಿಯತ್ತ ಸಾಗುವುದು ಹೇಗೆ ಎನ್ನುವುದು ಅಭಿವ್ಯಕ್ತಿಸುತ್ತಿದೆ. ಸತ್ಯ, ನಿಷ್ಠೆಯ ಕುರಿತಾಗಿ ಆದರ್ಶಗಳನ್ನು ಹೊಂದಿ ಅವುಗಳ ಜೀವಂತಿಕೆ ಕಾಪಾಡಲು ಪ್ರಯತ್ನಪಡುತ್ತಿದೆ. ಮಾನವೀಯ ಮೌಲ್ಯಗಳ ಕೊರತೆ ಪ್ರಸ್ತುತ ಸಂಬಂಧದಲ್ಲಿ ಅತಿಯಾಗಿದೆ. ಇದಕ್ಕೆ ಬಂಡವಾಳಶಾಹಿ ಧೋರಣೆ ಕಾರಣವಾಗಿದೆ. ಅತಿಯಾದ ಆಧುನಿಕತೆಯ ಪ್ರಭಾವದಿಂದ

ಎಲ್ಲವನ್ನು ವ್ಯಾಪಾರದ ದೃಷ್ಟಿಯಿಂದ ನೋಡಿ ಮನುಷ್ಯನ ವ್ಯಾಪಾರಿಯಾಗಿ ಬಿಟ್ಟಿದ್ದಾನೆ. ಅಲ್ಲಿ ಮಾನವನನ್ನು ವಿಶ್ವಮಾನವನ್ನಾಗಿಸಿ ಮೌಲ್ಯಗಳನ್ನು ಆದರ್ಶಗಳು ಬಿತ್ತುವ ಕೆಲಸ ಸಮಕಾಲೀನ ಕಾವ್ಯ ಮಾಡುತ್ತದೆ.

ಕನ್ನಡ ಕಾವ್ಯ ಕೂಡ ತನ್ನ ರೊಮ್ಯಾಂಟಿಕ್ ಮಾದರಿಯನ್ನು ಬಿಟ್ಟು ಈ ನೆಲದೊಡನೆ ಸಂವಾದಿಸತೊಡಗಿದ ಕಾವ್ಯವಾಗಿದೆ. ಇದರ ಪರಿಣಾಮವಾಗಿ ಹೂ ಹಕ್ಕಿ ಚುಕ್ಕಿ, ತಾರೆ, ಹೆಣ್ಣು, ಹಣ್ಣು, ಸೂರ್ಯ, ತಂಗಾಳಿ ಎಂಬ ಸರಳ ನೆಲೆಗಳನ್ನು ತೊರೆದು ಚರಿತ್ರೆ ಮತ್ತು ಪುರಾಣಗಳ ವಿದ್ರೋಹದ ನೆಲೆಗಳನ್ನು ಪ್ರಶ್ನಿಸಿ ಉತ್ತರ ಕಂಡುಕೊಳ್ಳುವ ಪ್ರಯತ್ನವಾಗಿದೆ. ಹಾಗೇ ಜೀವ ಪರವಾದ ಆದರ್ಶಗಳನ್ನು ಮನುಷ್ಯನಲ್ಲಿ ಬಿತ್ತುವ ಹಾಗೇ ಅವುಗಳೇ ನಿಜವಾದ ಮಂತ್ರ ಕಲ್ಪಗಳೆಂದು ಸಾರುತ್ತಿದೆ. ಇದೆಲ್ಲದರ ಫಲಿತವೇ ಕನ್ನಡ ಕಾವ್ಯಕ್ಕೆ ಹೊಸ ನದಿಗಳ ಸಂಗಮವಾಗಿ ಸಮುದ್ರ ಸಂಗಮವೇ ಏರ್ಪಾಟುಗೊಂಡಿತು. ಇದರ ಮುಂದುವರಿಕೆಯ ಭಾಗವಾಗಿ ಸಮಕಾಲೀನ ಕಾವ್ಯ ನೆಲದ ತಳಮಳವನ್ನು ಹೊಸ ಪರಿಭಾಷೆಯಲ್ಲಿ ಪ್ರಯೋಗಾತ್ಮಕವಾಗಿ ಕಟ್ಟಿಕೊಡುತ್ತಿದೆ. ಸಮಕಾಲೀನ ಸಂದರ್ಭದಲ್ಲಿ ತಂತ್ರಜ್ಞಾನ, ಆಧುನಿಕತೆ, ಜಾಗತೀಕರಣ ಉದಾರೀಕರಣದ ಫಲವಾಗಿ ಮನುಷ್ಯನ ಬದುಕು ಯಾಂತ್ರಿಕವಾಗಿದೆ. ಹಾಗೂ ವ್ಯಾಪಾರೀಕರಣಕ್ಕೆ ಸಮರ್ಪಿಸಿ ಕೊಂಡಂತಿದೆ. ಇದರಿಂದ ಮೌಲ್ಯಗಳ ನಾಶವಾಗುವುದನ್ನು ಕಂಡು ಕಾವ್ಯ ಜೀವಪರ ಮೌಲ್ಯಗಳನ್ನು ಎತ್ತಿ ಹಿಡಿದು ತನ್ನ ಕಾವ್ಯದಲ್ಲಿ ಅಭಿವ್ಯಕ್ತಿಸುತ್ತಿದೆ. ಕನ್ನಡ ಕಾವ್ಯ ಎಲ್ಲಾ ಹಂತಗಳನ್ನು ದಾಟಿ ಜಾಗತಿಕ ಸಂದರ್ಭಕ್ಕೆ ತೆರೆದುಕೊಳ್ಳುವಾಗ, ಇಡೀ ಜಾಗತಿಕ ಸಂಘರ್ಷ, ಚಾರಿತ್ರಿಕ, ಪೌರಾಣಿಕ ವಿದ್ರೋಹಕ್ಕೆ ಉತ್ತರವೆಂಬಂತೆ ಅರಳಿದ್ದಲ್ಲದೆ ಕನ್ನಡ ನೆಲದ ವಿವೇಕ ಮತ್ತು ಜಾಗತಿಕ ಹೆಜ್ಜೆಯೊಡನೆ ನೆಲದ ಧ್ವನಿ ಜೀವಪರವಾದ ದನಿ ಹೇಗೆ ಇರಬೇಕು ಎನ್ನುವುದನ್ನು ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

> ಬೂದಿ ಬೆಳಕಿನ ಕನಸು
> ತಮಾಷೆಗೂ ಕಾಣಬಾರದು ಯಾರು
> ಸ್ವಪ್ನ ಸೀಮೆಯ ಮೀರಿ
> ಬಗ್ಗಡದ ಬದುಕಲ್ಲಿ ಸಂದ ಸತ್ಯ ಹುಡುಕುವಂತೆ
> ಒಳಗಣ್ಣು ನೆಟ್ಟು ಹೋಗುತ್ತೆ
> ಮೀನ ಕುರುಡಿನ ಕನಸು
> ಇಂಥ ಬಣ್ಣಗೇಡಿ ಕನಸು
> ಯಾರಿಗೂ ಬೀಳದಿದ್ದರೆ ಎಷ್ಟು ಲೇಸು[೨]

ನೈಜವಾದ ಒಂದು ಹೊಸದನಿ ಕನ್ನಡದಲ್ಲಿ ಹುಟ್ಟಿರುವುದು ಈ ಮೂಲಕ ಕಾಣುತ್ತದೆ. ವಿನಾಶದ ದವಡೆಯಲ್ಲಿರುವ ಲೋಕದತ್ತ ಆದಿಜಲದ ಕಣ್ಣಿನ ಆರ್ದ್ರ ದೃಷ್ಟಿ ಹಾಸಿದಂತೆ ಕಾಣುತ್ತಿದೆ. ಸತ್ಯವನ್ನು ಕೊಲ್ಲುವ ಅಸತ್ಯವನ್ನು ಸಾರುವಂತಹ ಕನಸು ಯಾರಿಗೂ ಬೀಳಬಾರದು,

ಅದು ಬೂದಿಯಲ್ಲಿರುವ ಕೆಂಡದಂತೆ ತನ್ನ ಪ್ರಭಾವ ಪರಿಣಾಮವನ್ನು ಬೀರುತ್ತದೆ. ಅದಕ್ಕಾಗಿ ಸತ್ಯ ನಾಶ ಮಾಡಿ ಅಸತ್ಯ ಸಾರುವಂತಹ ಮನಸ್ಸು, ಗಾಳಿ, ಕನಸು ಯಾವುದು ಸೋಕದಿರಲಿ- ಮನುಷ್ಯನ ಎದೆಗೂ ಮಿಡಿಯುತ್ತಿದೆ ಕಾವ್ಯ. ಬಂಡಾಯ ದಣಿದಿದೆ, ಕೊಚ್ಚಿ ಕೊಚ್ಚಿ ಕೊಲ್ಲಿ ಎನ್ನುವ ಕಾವ್ಯದ ಮಾದರಿಗಳೂ ದೂರವಾಗಿ ಪ್ರೀತಿ, ಪ್ರೇಮ, ಸ್ನೇಹ ಸೌಹಾರ್ದ ಬಯಸುವ ಕಾವ್ಯ ಕಡೆಗೆ ಸಮಕಾಲೀನ ಕಾವ್ಯ ಮುಖ ಮಾಡಿದೆ. ಈ ಹೊತ್ತಿನ ಕಾವ್ಯವನ್ನು ವರ್ತಮಾನ, ಸಮಕಾಲೀನ ಕಾವ್ಯವೆನ್ನಬಹುದಾಗಿದೆ.

ನವೋದಯ ಆರಾಧಕ ಶೈಲಿಯ ಆಧ್ಯಾತ್ಮ ಪ್ರೇಮ, ನವ್ಯದ ರೂಪಕಾತ್ಮಕ ಬಿಗಿಬಂಧದ ಅಂತರಾವಲೋಕನ, ಪ್ರಗತಿಶೀಲ ಮತ್ತು ಬಂಡಾಯದ ಘೋಷಣಾತ್ಮಕ ಅಭಿವ್ಯಕ್ತಿಯ ಪ್ರಾಮಾಣಿಕವಾದ ಸಮಾಜಮುಖಿ, ಬಂಡಾಯೋತ್ತರ ದಲಿತ ಕಾವ್ಯದ ಸೂಕ್ಷ್ಮ ನೇಯ್ಗೆಯ ಹೊಸ ಬದುಕಿನ ಹಂಬಲಗಳ ಜೊತೆಗೆ, ಈಗಿನ ಚಳುವಳಿರಹಿತದ ಕಾಲದಲ್ಲಿ ಪ್ರಕಟಗೊಳ್ಳುತ್ತಿರುವ ಸಂಕೀರ್ಣವೂ, ಕಲಾತ್ಮಕವೂ ಆದ ಜೀವಪರ ರಚನೆಗಳು ಇಲ್ಲಿವೆ. ಈ ಎಲ್ಲ ಕಾಲಘಟ್ಟಗಳನ್ನು ಪ್ರತಿನಿಧಿಸುತ್ತಾ ಪರಸ್ಪರರಿಗಿಂತ ಭಿನ್ನವಾಗಿ, ತುಂಬ ಸೂಕ್ಷ್ಮವಾದ ಹೆಣೆಯಲ್ಲಿ ಸ್ತ್ರೀವಾದವನ್ನು ಕಟ್ಟುತ್ತಿರುವಂತೆ ಕಾಣುವ ಕವಯಿತ್ರಿಯರೂ ತಮ್ಮ ಕಾವ್ಯ ಕಟ್ಟುತ್ತಿದ್ದಾರೆ. ಯಾವುದೇ ಭಾಷೆಯ ವರ್ತಮಾನದ ಪ್ರತಿಭೆಯು ಅದರ ಕಾವ್ಯ ಪರಂಪರೆಯ ಸತ್ವವನ್ನು ಹೀರಿಕೊಂಡು ಹೊಸ ಪರಿಪ್ರೇಕ್ಷಾದಲ್ಲಿ ಅದರ ಕಲಾತ್ಮಕ ಮುಂದುವರಿಕೆಯ ರೂಪದಲ್ಲಿ ಪ್ರಕಟಗೊಳ್ಳುತ್ತಾ ಸಾಗುತ್ತದೆ. ಹಾಗಾಗಿ ವರ್ತಮಾನವು ಭೂತಕಾಲದ ಬೀಜದುಂದಿಸಿದ ಮರವಾಗಿರುವಂತೆಯೇ ಭವಿಷ್ಯತ್ ಕಾಲದಲ್ಲಿ ಹುಟ್ಟಿ ಬೆಳೆಗಳಿರುವ ಮರು ಬೀಜವೂ ಆಗಿರುತ್ತದೆ. ಅದರಂತೆ ಸಮಕಾಲೀನ ಕಾವ್ಯವಾಗಿದೆ. ಇದು ತನ್ನ ಕಾವ್ಯ ಪಯಣದ ಹಾದಿಯಲ್ಲಿ ಪರಂಪರೆಯ ನೆರಳನ್ನು ಪಡೆದು ವಿಶಿಷ್ಟ ರೀತಿಯಲ್ಲಿ ವರ್ತಮಾನದ ಬೆಳಕನ್ನು ಹರಡಿ ಭವಿಷತ್ತಿನ ಕನಸನ್ನು ಹೆಣೆದಿರುವುದು ಹೆಣೆಯುತ್ತಿರುವುದು ಸೊಗಸಾಗಿ ರಚನೆಗೊಳ್ಳುತ್ತಿದೆ. ಬದುಕನ್ನು ಕಟ್ಟುವ ಮೂರ್ತ ರೂಪಿ ಮನುಷ್ಯ ವೈಯಕ್ತಿಕವಾಗಿ ಅಷ್ಟೇ ಅಲ್ಲ. ತಾನು ಸಾಮಾಜಿಕವಾಗುವ ಸಂದರ್ಭದಲ್ಲಿ ಮಾತ್ರವಲ್ಲ ಸೃಷ್ಟಿಯ ಚಲನೆಯನ್ನು ನಿಯಮಿತವಾಗಿಡಬೇಕಾಗಿರುವ ಜವಾಬ್ದಾರಿಯನ್ನು ತನ್ನ ಕಾಲದಲ್ಲೇ ಹೊಂದಿರಬೇಕು ಎನ್ನುವ ಅಂಶವನ್ನು ಸಮಕಾಲೀನ ಕಾವ್ಯದಲ್ಲಿ ತೀವ್ರವಾಗಿ ಅಭಿವ್ಯಕ್ತಿಗೊಳ್ಳುತ್ತಿದೆ. ಯಾವುದು ಸಮುದಾಯದ ಹಿತದ ಪರವೇ ಅದರ ಪರವಾಗಿ ಮಾತನಾಡಿ ಅದರ ಅಸ್ಮಿತೆಯನ್ನು ಮತ್ತು ಸಾಂಸ್ಥಿಕ ಒಲವನ್ನು ಹೇಳುವ ಕೆಲಸ ಕಾವ್ಯದ್ದಾಗಿದೆ.

"ಸತ್ಯಾನ್ವೇಷಣೆಯ ಮಾರ್ಗದಲ್ಲಿ ಭಾವ ಮತ್ತು ಬುದ್ಧಿಗಳೆರಡೂ ಬೆಳಕನ್ನು ಬೀರಬೇಕು ಇವುಗಳಲ್ಲಿ ಯಾವುದೇ ಒಂದನ್ನು ನಂಬಿದರೂ ಸತ್ಯದ ಪೂರ್ಣ ಸ್ವರೂಪವನ್ನು ಕಂಡುಕೊಳ್ಳುವುದು ಸಾಧ್ಯವಾಗುವುದಿಲ್ಲ"[೫] ವಾಸ್ತವವಾಗಿ ಸತ್ಯವೆಂಬುದು ಗಟ್ಟಿಯಾಗಿ ಹಿಡಿದಿಟ್ಟುಕೊಳ್ಳುವ ಒಂದು ಜಡ ಸಾಮಗ್ರಿಯಲ್ಲಿ ಅದು ವಿವಿಧ ಹಂತಗಳಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುವ ನಿರಂತರ ಪ್ರವಾಹ. ಬುದ್ಧಿ ಆ ಪ್ರವಾಹದ ಒಂದು ಕಣವನ್ನು ಕೈಗೆತ್ತಿಕೊಂಡು ವಿಶ್ಲೇಷಣೆಗೆ ತೊಡಗುತ್ತದೆ. ಈ

ವಿಶ್ಲೇಷಣೆ ಜ್ಞಾನದ ಒಂದು ಮುಖ ಈ ವಿಶ್ಲೇಷಣೆಯಿಂದ ಅದರ ಆಂತರ್ಯದಲ್ಲಿರುವ ಸಂಯೋಜನೆಯನ್ನು ಕಂಡುಕೊಳ್ಳುವುದು ಆ ಜ್ಞಾನದ ಇನ್ನೊಂದು ಮುಖ. ವೈಚಾರಿಕ ವಿಮೋಚನೆಯಲ್ಲಿ ಇದು ಬಹಳ ಮುಖ್ಯವಾಗಿರುವ ಅಂಶವಾಗಿದೆ. ಈ ಅಂಶದಿಂದಾಗಿ ಸತ್ಯದ ಹುಡುಕಾಟ ಕಾವ್ಯದ್ದಾಗಿದೆ. ಅದಕ್ಕಾಗಿ ಕವಿ ಲಕ್ಷ್ಮಿಪತಿ ಕೋಲಾರ ಅವರು ಸತ್ಯ ಮುಚ್ಚುವ ಕನಸು, ಬೂದಿ ಕನಸು ಬೇಡ ಎಂದು ತಮ್ಮ ಕವಿತೆಯಲ್ಲಿ ಹೇಳಿದ್ದಾರೆ.

ಹೊಸ ಮಾರ್ಗ ತೆರೆಯದಿದ್ದರೂ ಸದ್ಯದ ಹೊಸ ಕ್ರಮವೊಂದನ್ನು ಬೆಳಕಿಗೆ ತಂದಿದೆ ಎನ್ನಬಹುದು. ರೂಪಕ ಆಶಯದಲ್ಲಿ, ಅಭಿವ್ಯಕ್ತಿಯಲ್ಲಿ ಹೊಸ ಪ್ರಯೋಗಗಳನ್ನು ಸಮಕಾಲೀನ ಕಾವ್ಯ ಒಳಗೊಂಡಿದೆ. ವ್ಯಕ್ತಗೊಳ್ಳುವ ಸಂವೇದನೆಯಲ್ಲಿ ನೋವು, ನಲಿವು, ಒಲವು, ಆಶಯ, ಅರಿವು ಎಲ್ಲವೂ ವಿಶೇಷವಾಗಿ ಒಡಮೂಡಿದೆ. ವೈಚಾರಿಕತೆಯ ನೆಲೆಯು ಹೆಚ್ಚಾಗಿ ಕಂಡು ಬಂದಿದೆ ಈ ಹಿಂದೆ ಇದ್ದ ಸಿದ್ಧ ಮಾದರಿಯ ಜಾತಿಯ ಜಡ್ಡುಗಟ್ಟಿದ ನಿಯಮಗಳನ್ನು ಮುರಿದು ವಿಶ್ವಮಾನವತೆಯನ್ನು ಮೆರೆದು ಕುವೆಂಪುರವರ ವ್ಯಕ್ತಪಡಿಸಿದ ಆದರ್ಶದ ಆಶಯದಂತೆ ಬಾಳುವುದು ಕಂಡು ಬಂದಿದೆ. ಹಾಗೇ ಮಂತ್ರ ಮಾಂಗಲ್ಯ ಎಂಬುದನ್ನು ಒಂದು ಆದರ್ಶ ಪಾಲಿಸುವುದು ಕಂಡುಬಂದಿದೆ. ಇದನ್ನು ಸಮಕಾಲೀನ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವುದು ಕಂಡುಬಂದಿದೆ. ಸಣ್ಣ ಸಣ್ಣ ಸಮುದಾಯಗಳ ತಮ್ಮ ನಿರ್ಬಂಧಿತ ಸಂಪ್ರದಾಯಸ್ಥ ನಿಯಮಗಳು ಹೊಂದಿರುತ್ತವೆ. ಅವು ಮಾನವನನ್ನು ಒಂದು ಸೀಮಿತ ಚೌಕಟ್ಟಿನಲ್ಲಿ ಮತೀಯ ಅಂಶಗಳು ತುಂಬುವುದು ಕಂಡು ಬರುತ್ತದೆ. ಇದರಿಂದ ಬಿಡುಗಡೆಗೊಂಡು ವಿಶ್ವಮಾನವ ಸಂದೇಶದ ಆಶಯದಂತೆ ಅನೇಕ ಶಿಕ್ಷಿತ ಯುವಪಡೆ 'ಮಂತ್ರ ಮಾಂಗಲ್ಯ' ಆಗುವುದು ಕಂಡುಬಂದಿದೆ. ಇದರಿಂದ ಎರಡು ಒಲಿದ ಜೀವಗಳು ಹೊಸ ಜೀವನ ನಡೆಸಿ, ಮಾನವೀಯತೆಯನ್ನು ಮೆರೆದು ವಿಶ್ವಮಾನವ ಸಂದೇಶದ ಆಶಯವನ್ನು ಪಾಲಿಸುವುದು ಮುಖ್ಯವಾದ ಸಂಗತಿಯಾಗಿದೆ. ಇದರ ಮೂಲಕ ಮನುಷ್ಯನಲ್ಲಿ ನೆಲೆನಿಂತಿದ್ದ ಜಾತಿ, ಧರ್ಮ, ಮತದ ಬಗ್ಗೆ ಇದ್ದ ಮೌಢ್ಯ ನಂಬಿಕೆಗಳು ದೂರಮಾಡಿ ಮನುಜಮತ ವಿಶ್ವಪಥದತ್ತ ಸಾಗಲು ನೆರವಾಗುತ್ತದೆ. ಹಾಗೆ ಮದುವೆ ಎನ್ನುವುದು ಒಂದು ದುಂದು ವೆಚ್ಚ ಮಾಡಿ ವೆಚ್ಚ ಮಾಡದೆ ಕಡಿಮೆ ಖರ್ಚಿನಲ್ಲಿ ಮಾಡುವುದು ಆರ್ಥಿಕ ಸಫಲತೆಯನ್ನು ತಿಳಿಸುತ್ತದೆ. ನಮ್ಮ ದೇಶದ ಸಾಮಾಜಿಕ ಪರಿಸರವನ್ನು ಕುರಿತು ಆಲೋಚನೆ ಮಾಡಿದಾಗ ಮುಖ್ಯವಾಗಿ ಕಂಡು ಬರುವ ಅಂಶ ಸರ್ವಸಮಾನತೆ ಮತ್ತು ಕಾಯಕ ಗೌರವವನ್ನುಳ್ಳ ಸರ್ವೋದಯ ಆದರೆ ಇದು ವಾಸ್ತವ ನೆಲೆಯಲ್ಲಿ ಬಹುಕಾಲದಿಂದ ವರ್ಣವ್ಯವಸ್ಥೆಯ ಬಂಧನಗಳು, ಮತೀಯ ಮೌಢ್ಯವನ್ನು ಅಂಧ ಶ್ರದ್ಧೆಗಳನ್ನು ನಿರಂತರವಾಗಿ ಬೆಳಸಿಕೊಂಡು ಬಂದಿರುವುದನ್ನು ನಾವು ನಮ್ಮ ಪರಂಪರೆಯುದ್ದಕ್ಕೂ ಕಾಣುತ್ತೇವೆ. ಇದು ತುಂಬಾ ಅಪಾಯಕಾರಿ ಎಂದು ಗೊತ್ತಿದ್ದರೂ ಮತ್ತು ಅದೇ ದಾರಿಯಲ್ಲಿ ನಾವೆಲ್ಲ ಹೋಗುತ್ತಿರುವುದು ದುರಂತ. ಈ ದುರಂತಕ್ಕೆ ಕಾವ್ಯ ಮಿಡಿದು ವೈಚಾರಿಕ ಬೆಳಕನ್ನು ನೀಡುತ್ತಿದೆ. ಬುದ್ಧ, ಬಸವಣ್ಣ, ಅಂಬೇಡ್ಕರ್, ಗಾಂಧಿ ಲೋಹಿಯಾ ಮುಂತಾದ ಆದರ್ಶ ಪುರುಷರ

ಆದರ್ಶ ಮತ್ತು ಆಶಯಗಳನ್ನು ಕಾವ್ಯ ಅಭಿವ್ಯಕ್ತಿಸಿ ಹೊಸ ಸಮಾಜಕ್ಕಾಗಿ ಹಂಬಲಿಸುವುದು ಕಂಡು ಬಂದಿದೆ.

ಮುಖದ ತುಂಬಾ ನಾಳೆಯ ನಿರೀಕ್ಷೆ
ಎರಡೂ ಕಣ್ಣಲಿ ಬಣ್ಣದ ಕನಸುಗಳೊಂದಿಗೆ
ತುಟಿಯಂಚಲ್ಲಿ ನಗುವಿನ ಋಣ ಭಾರದೊಂದಿಗೆ...[೨೯]

ಲಕ್ಕೂರ ಆನಂದರ ಕವಿತೆಯ ಸಾಲುಗಳು ಇವು ಸಮಕಾಲೀನ ಕಾವ್ಯದ ಕುರಿತು ಹೇಳಿದಂತಿವೆ ಕಾವ್ಯ ಮುಖದ ತುಂಬಾ ನಾಳೆಯ ನಿರೀಕ್ಷೆಗಳನ್ನು ತುಂಬಿಕೊಂಡಿದೆ. ಎಷ್ಟೇ ಸಂಕಟಗಳು ಇದ್ದರೂ, ಅಪಮಾನ ನೋವುಗಳಿದ್ದರೂ ನಾಳೆ ನಗುವಿನ ಗಳಿಗೆ ಬರುತ್ತದೆ. ಎಂಬ ಜೀವಂತ ಆಶೆಯನ್ನು ಕಾವ್ಯ ಬಿತ್ತುತ್ತದೆ. ಇದರ ಮೂಲಕ ಕಾವ್ಯ ಮನುಷ್ಯನಲ್ಲಿ ಬದುಕುವ ಆಸೆಯನ್ನು ಬೆಳೆಸುತ್ತಿದೆ. ಹಾಗೆ ಕಣ್ಣುಗಳಲ್ಲಿ ಒಲವನ್ನು ಮೂಡಿಸಿ ಹೊಸ ಹೊಸ ಕನಸನ್ನು ಕಾಣಲು ಪ್ರೇರೇಪಿಸುತ್ತದೆ. ಹಾಗೇ ಸಾಮಾಜಿಕ, ಚಿಂತನೆಗಳು, ಆದರ್ಶಗಳು ಬದುಕಿನ ದಾರಿಗಳು, ಸಂವೇದನೆಗಳು, ಕಾಣಬಹುದಾಗಿದೆ. ಸಮಕಾಲೀನ ಕಾವ್ಯ ತನ್ನ ಪರಂಪರೆಯನ್ನು ಮುಂದುವರೆಸುವ ಕೊಂಡಿಯಾಗಿದೆ. ಇದು ತನ್ನ ಪಯಣದ ವಿಶೇಷತೆಯನ್ನು ಹೊಂದಿದೆ. ಹೊಸ ಚರಿತ್ರೆ ಬರೆಯಲು ಮುಂದಾಗಿದೆ. ಹಾಗೇ ಪೀರಬಾಷಾ ಹೇಳುವಂತೆ ಕಾವ್ಯ ಕತ್ತಲಿಗೆ ಬೆಳಕನ್ನು ನೀಡಿ ವಿಜಯ ಗೀತೆ ಹಾಡುತ್ತದೆ ಎಂದು ಹೇಳುತ್ತಾರೆ. ತಮ್ಮ ಕಾವ್ಯದಲ್ಲಿ ಅದರಂತೆ ಹಲವಾರು ವಿಚಾರ ಧಾರೆಗಳು, ಮೌಲ್ಯಗಳು ಆದರ್ಶಗಳು, ಅಭಿವೃದ್ಧಿ ಬದಲಾವಣೆಯ ಚಿಂತನೆಗಳು, ಪ್ರೀತಿ, ಪ್ರೇಮ, ಸ್ನೇಹ, ಸಂಬಂಧಗಳು ಕುರಿತಾಗಿ ಹೆಚ್ಚಿನ ಅಂಶಗಳು ಕಾವ್ಯದಲ್ಲಿ ಮೂಡಿದೆ. ಅನೇಕ ಸಮುದಾಯಗಳಲ್ಲಿ ಮುಖ್ಯ ನೆಲೆಗೆ ಬಾರದೆ ಇದ್ದ ಸಂಗತಿಗಳು, ವಿಶೇಷತೆಗಳು, ಸಂಕಟಗಳು ಕಾವ್ಯದ ಮೂಲಕ ಮುಖ್ಯ ನೆಲೆಗೆ ಬಂದಿವೆ. ಹಾಗೂ ದಮನಿತ ಸಮುದಾಯದ ಧ್ವನಿಯಾಗಿ, ವೈಚಾರಿಕತೆಯನ್ನು ಸಾರುವ ಧ್ವನಿಯಾಗಿ, ಕೊನೆಗೆ ಸಂಕಟಕ್ಕೆ ಮಿಡಿದು ವಿಷಾದ ವ್ಯಕ್ತಪಡಿಸಿ ಕಂಬನಿ ಸುರಿಸುವುದಾಗಿದೆ. ಅದೇ ಏನೇ ಇದ್ದರೂ ನಗುವುದನ್ನು ಕಲಿಸಿ ನಗು-ನಗುತಾ ಬದುಕುವ ದಾರಿಯನ್ನು ವಿಶ್ವಮಾನವ ಸಂದೇಶದ ಆಶಯವನ್ನು ಜೀವಂತವಾಗಿಸುವುದಲ್ಲಿ ಸಮಕಾಲೀನ ಕಾವ್ಯ ಸಫಲತೆಯನ್ನು ಕಾಣುತ್ತಿದೆ. ಈ ಕಾವ್ಯ ಗದ್ಯದಂತೆ ಕಂಡರೂ ಅಲ್ಲಲ್ಲಿ ಕಾವ್ಯದ ಅಂತರ ಲಯವಿದೆ. ಇನ್ನೂ ಹೆಚ್ಚಿನ ರೀತಿಯಲ್ಲಿ ಲಯ ಪಡೆದರೆ ಕಣ್ಣಿನ ಕಾವ್ಯ. ಕಿವಿಯ ಕಾವ್ಯವಾಗುತ್ತದೆ ಕಿವಿಯ ಕಾವ್ಯವಾದಾಗ ಮಾತ್ರ ಅದು ಎಲ್ಲಿದನ್ನು ತಲುಪುತ್ತಾರೆ. ಇಲ್ಲದಿದ್ದರೆ ಕೇವಲ ಅಕ್ಷರಸ್ಥ ಸಮುದಾಯವನ್ನು ಮಾತ್ರ ಕಾವ್ಯ ತಲುಪುತ್ತಾರೆ.

ಇವತ್ತಿನ ಕಾವ್ಯ ವಿಷಾದದ ಜೊತೆಗೆ ವೈಚಾರಿಕ ಅಂಶಗಳನ್ನು ಸಹ ಒಳಗೊಂಡಿದೆ. ಮಾನವೀಯತೆ, ವಿಶ್ವಮಾನವ ಪ್ರಜ್ಞೆಯನ್ನು ಮತ್ತೊಮ್ಮೆ ಈ ನೆಲಕ್ಕೆ ಸದ್ಯದ ಕಾಲಮಾನಕ್ಕೆ ಬೇಕೆಂದು ವಿಶೇಷವಾಗಿ ಜಪಿಸಿರುವುದು ಕಂಡುಬಂದಿದೆ. ಜಾತಿ, ಧರ್ಮ, ಮೌಢ್ಯತೆಯ ಮೂಢನಂಬಿಕೆಯನ್ನು ದೂರ ಮಾಡಿ ವೈಚಾರಿಕತೆಯ ಅಂಶಗಳನ್ನು ಕಾವ್ಯದಲ್ಲಿ ವ್ಯಕ್ತಪಡಿಸಲಾಗಿದೆ.

ಮಾನವೀಯ ಮೌಲ್ಯಗಳು, ಜೀವಪರ ಆದರ್ಶಗಳು, ವಿಶ್ವ ಮಾನವ ಪ್ರಶ್ನೆಗೆ ಸಂಬಂಧಿಸಿದಂತೆ ಕಾವ್ಯ ಸೃಷ್ಟಿಯಾಗಿದೆ. ಯುವಕರಲ್ಲಿ ದೇಶೀಯತೆಯ ಪ್ರಜ್ಞೆಯೊಂದಿಗೆ ವೈಚಾರಿಕತೆಯ ಜ್ಞಾನವನ್ನು ಬಿತ್ತುವ ಕೆಲಸ ಇಂದಿನ ಕಾವ್ಯ ಮಾಡಿದೆ. ಅದರಂತೆ ಇವತ್ತಿನ ಕಾವ್ಯ ಅಧ್ಯಯನ ಮಾಡಿದಾಗ ವೈಚಾರಿಕತೆಯ ಅಂಶಗಳನ್ನು ಕಂಡುಬಂದಿದೆ. ಒಟ್ಟಾರೆ ಜೀವಪರ, ಮೌಲ್ಯಪರ ಮಿಡಿಯುವ ಕಾವ್ಯ ಇಂದಿನ ಕಾವ್ಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಆರೀಫ್ ರಾಜಾ, **ಬೆಂಕಿಗೆ ತೊಡಿಸಿದ ಬಟ್ಟೆ,** ಪುಟ ೫೩.

೨. ಡಿ.ಎಲ್. ಪಾಟೀಲ್, **ಆಧುನಿಕ ವೈಚಾರಿಕತೆಯ ಮಾದರಿಗಳು ಮತ್ತು ಮುಕ್ತ ವೈಚಾರಿಕತೆ,** ಪುಟ ೪೫.

೩. ಮಂಜುನಾಥ ಎಸ್., **ನೆಲದ ಬೇರು, ನಭದ ಬೀಳಲು,** ಪುಟ ೧೪೩.

೪. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೧೩.

೫. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೮೮.

೬. ಡಿ.ಎಲ್. ಪಾಟೀಲ್, **ಆಧುನಿಕ ವೈಚಾರಿಕತೆಯ ಮಾದರಿಗಳು ಮತ್ತು ಮುಕ್ತ ವೈಚಾರಿಕತೆ,** ಪುಟ ೪೨.

೭. ಮಮ್ತಾಜ್ ಬೇಗಂ, **ಕಬಂಧ ಬಾಹುಗಳು ಬೇಕಿಲ್ಲ,** ಪುಟ ೧.

೮. ಡಿ.ಎಲ್. ಪಾಟೀಲ್, **ಆಧುನಿಕ ವೈಚಾರಿಕತೆಯ ಮಾದರಿಗಳು ಮತ್ತು ಮುಕ್ತ ವೈಚಾರಿಕತೆ,** ಪುಟ ೯೨

೯. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೪.

೧೦. ಗೌರೀಶ ಕಾಯ್ಕಿಣಿ, **ಸಮಗ್ರ ಸಾಹಿತ್ಯ,** ಪುಟ ೨೩೪.

೧೧. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೧೨೦.

೧೨. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೪೯.

೧೩. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೧೩೦.

೧೪. ಕೆ. ಷರೀಫಾ(ಸಂ), **ಹೊಸ ಶತಮಾನದ ಕಾವ್ಯ,** ಪುಟ ೩೩೧.

೧೫. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೧೨೫.

೧೬. ಆರೀಫ್ ರಾಜಾ, **ಜಂಗಮ ಫಕೀರನ ಜೋಳಿಗೆ,** ಪುಟ ೪.

೧೭. ಶಿವರಾಜ ಬೆಟದೂರು, **ಈ ಲೋಕದ ಇನ್ನೊಂದು ಗಿಡ,** ಪುಟ ೫೪.

೧೮. ಅನುಪಮಾ ಎಚ್.ಎಸ್., **ಸಹಗಮನ,** ಪುಟ ೧೦೬.

೧೯. ಲಕ್ಕೂರು ಆನಂದ., **ಉರಿವ ಏಕಾಂತ ದೀಪ,** ಪುಟ ೫೮.

೨೦. ನಾರಾಯಣ ಕೆ., ಕ್ಯಾಸಂಬಳ್ಳಿ., **ಹಂಗಿಲ್ಲದ ಅಂಗಳದಲ್ಲಿ,** ಪುಟ ೭೩.

೨೧. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೬೨.

೨೨. ಸುಧಾ ಚಿದಾನಂದಗೌಡ, **ಬಯಲು ಧ್ಯಾನ,** ಪುಟ ೪೮.

೨೩. ಎಚ್. ತಿಪ್ಪೇರುದ್ರಸ್ವಾಮಿ, **ಕುವೆಂಪುರವರ ವೈಚಾರಿಕತೆ,** ಪುಟ ೯.

೨೪. ಪೀರ್‌ಬಾಷ, **ದೇವರು ಮನುಷ್ಯರಾದ ದಿನ,** ಪುಟ ೪೪.

೨೫. ಡಿ.ಆರ್. ನಾಗರಾಜ, **ಶಕ್ತಿ ಶಾರದ ಮೇಳ,** ಪುಟ ೫೫.

೨೬. ಲಕ್ಕೂರು ಆನಂದ, **ಬಟವಾಡಿಯಾಗದ ರಸಿತಿ,** ಪುಟ ೭೨.

೨೭. ನಟರಾಜ ಬೂದಾಳ, **ಕೋ ಲಕ್ಷ್ಮೀಪತಿ ಕೋಲಾರವರ ಆಯ್ದ ಕವಿತೆಗಳು,** ಪುಟ-೮೬

೨೮. ಚಿದಾನಂದ ಸಾಲಿ(ಸಂ), **ಕಡಲ ಹಕ್ಕಿಯ ರೆಕ್ಕೆ,** ಪುಟ ೭.

೨೯. ಲಕ್ಕೂರು ಆನಂದ, **ಬಟವಾಡಿಯಾಗದ ರಸಿತಿ,** ಪುಟ ೪೯.



ಅಧ್ಯಾಯ : ಎಂಟು

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯ ಒಂದು ಸೃಜನಶೀಲ ಪ್ರಕಾರ. ಅದರಂತೆ ಇತ್ತೀಚಿನ ಕನ್ನಡ ಕಾವ್ಯ ಹೊಸ ಸಂವೇದನೆ, ಆಶಯದೊಂದಿಗೆ ತನ್ನ ಕಾವ್ಯ ಪರಂಪರೆಯನ್ನು ಮುಂದುವರೆಸುತ್ತಿದೆ. ಹೊಸ ತಲೆಮಾರಿನ ಕವಿಗಳು ತಮ್ಮೊಳಗಿನ ಪ್ರಾಮಾಣಿಕ ತುಡಿತವನ್ನು ಹೊರಚೆಲ್ಲಲು ಅಕ್ಷರ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಆ ಮೂಲ ಜೀವಪರ ಚಿಂತನೆಯನ್ನು ಅಭಿವ್ಯಕ್ತಿಸಿರುವುದು ಕಾಣುತ್ತೇವೆ. ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಜಾಗತಿಕ ಸಮಸ್ಯೆಗಳ ಕುರಿತಾಗಿ ಕಾವ್ಯ ನೂತನವಾಗಿ ಅಭಿವ್ಯಕ್ತಗೊಳ್ಳಿತ್ತಿರುವ ಇತ್ತೀಚಿನ ಕಾವ್ಯದ ವಿಶೇಷವಾಗಿದೆ. ಹೊಸ ನುಡಿಗಟ್ಟು ಮತ್ತು ಆಶಯವನ್ನು ಒಳಗೊಂಡು ಸಾಮಾಜಿಕ ತಲ್ಲಣಗಳಿಗೆ ಮಿಡಿಯುತ್ತಿದೆ. ಇತ್ತೀಚಿನ ಕನ್ನಡ ಕಾವ್ಯ ವರ್ತಮಾನವನ್ನು ನೋಡುವ, ಕಾಣಿಸುವ ಹೊಸ ಕಣ್ಣಾಗಿದೆ. ಕಾವ್ಯ ಸಮಾಜದ ಚಿತ್ರಣವನ್ನು ನೀಡುವುದರ ಜೊತೆಗೆ ಪ್ರತಿರೋಧ ಒಡ್ಡುತ್ತದೆ. ಸಮಕಾಲೀನ ಕನ್ನಡ ಕಾವ್ಯದಲ್ಲಿ ಜಡಧರ್ಮವನ್ನು ತಿರಸ್ಕರಿಸಿ, ಮಾನವೀಯ ನೆಲೆಗಳನ್ನು ತಮ್ಮದಾಗಿಸಿಕೊಳ್ಳುತ್ತಿದ್ದಾರೆ, ಸಾಮಾಜಿಕ ಸಂಕಷ್ಟಗಳ ಬಗ್ಗೆ ಬರೆಯುತ್ತಿದ್ದಾರೆ, ಸಂಕೀರ್ಣ ಸಮಸ್ಯೆಗಳಿಗೆ ಹೊಸ ರೂಪಕಗಳನ್ನು ರಚಿಸುತ್ತಿರುವುದನ್ನು ಕಾಣುತ್ತೇವೆ. ಸಮಕಾಲೀನ ಸಂದರ್ಭದಲ್ಲಿ ಆಧುನಿಕ ಜಗತ್ತಿನಲ್ಲಿ ಸಾಹಿತ್ಯದ ಕುರಿತು ಅಷ್ಟಾಗಿ ಮನುಷ್ಯ ಒಲವು ತಾಳಲಾರದ ವ್ಯವಹಾರಿಕ ಮನಸ್ಥಿತಿ ತಾಳಿದ್ದಾನೆ. ಇಷ್ಟರ ಮಧ್ಯವು ಸಾಹಿತ್ಯ, ತನ್ನ ಜೀವಂತಿಕೆ ಮತ್ತು ಮಹತ್ವವನ್ನು ಕಾಪಾಡಿಕೊಂಡು ತನ್ನ ಕೆಲಸ ಮಾಡುತ್ತಿದೆ. ಇಂದಿಗೂ ತಂತ್ರಜ್ಞಾನದ ಕಾಲದಲ್ಲಿ ಕಾವ್ಯ ತನ್ನ ಪರಂಪರೆಯ ದಾರಿಯನ್ನು ಯುವಪೀಳಿಗೆಯ ಮನಸ್ಸುಗಳಲ್ಲೆ ಮೂಡಿರುವುದು ಹಾಗೂ ಆ ದಾರಿಯಲ್ಲಿ ಗಂಭೀರ ನಡೆಗೆ ಹೊಂದಿರುವುದು ಕಂಡುಬರುತ್ತದೆ. ಕಾವ್ಯವು ತನ್ನ ಪ್ರಾಚೀನ ಕಾವ್ಯನಿಯಮಗಳನ್ನು ಮೀರಿ ಸಾಮಾಜಿಕ, ರಾಜಕೀಯ ಬದುಕಿನ ಕಟ್ಟುಪಾಡುಗಳನ್ನು ಮುರಿದು ಕಟ್ಟುವಷ್ಟು ಶಕ್ತಿಯುತವಾಗಿ ಮಾಡಿದೆ. ಹಸಿವು, ಬಡತನ, ಕೋಮುವಾದ, ಜನಾಂಗೀಯ ನೋವು, ಸ್ತ್ರೀವಾದ, ದಲಿತವಾದಗಳೊಂದಿಗೆ ಶೋಷಿತರ ಪರವಾದ ಕಾವ್ಯ ರಚನೆಯಾಗುತ್ತಿವೆ. ರೂಢಿಗತ ಕಾವ್ಯಲೋಕವನ್ನು ಇತಿಹಾಸ, ಚರಿತ್ರೆ, ಪುರಾಣಗಳನ್ನು ಮುರಿದು ಕಟ್ಟುವ ಸ್ಥಿತಿಯಲ್ಲಿ

ಇಂದಿನ ಕಾವ್ಯವಾಗಿದೆ. ಸಮಕಾಲೀನ ಕಾವ್ಯದ ವಸ್ತು, ರೂಪ, ಆಕಾರ, ಅಭಿವ್ಯಕ್ತಿ ವಿಧಾನಗಳು ಭಿನ್ನವಾಗಿವೆ. ಅಭಿವ್ಯಕ್ತಿ ನೇರಬದ್ಧ ಮತ್ತು ತೀಕ್ಷ್ಣವಾಗುತ್ತಿದೆ. ತಂತ್ರಜ್ಞಾನವನ್ನು ಬಳಸಿಕೊಂಡು ಅಕ್ಷರ ಲೋಕದ ಹೊಸ ಸಾಧ್ಯತೆಗಳನ್ನು ಪರಿಚಯಿಸುತ್ತಿದೆ. ಬ್ಲಾಗ್‌ಗಳಲ್ಲಿ ಹೊಸ ಕಾವ್ಯದ ಸಾಧ್ಯತೆ ಪರಿಭಾಷೆಗಳು ಹರಿದಾಡುತ್ತಿವೆ. ಇದು ಎಷ್ಟೇ ವೇಗವಾಗಿ ಜನರನ್ನು ತಲುಪಿದಾಗೂ ಮುದ್ರಿತ ಪುಸ್ತಕ ಮಾಧ್ಯಮವೇ ಹೃದಯತಟ್ಟುವ ಕೆಲಸವಾಗಿದೆ ಎಂದು ಹೇಳಬಹುದು. ಕವಿಯು ವೈಯಕ್ತಿಕ ಅನುಭವಗಳ ಗಂಭೀರ ಅನ್ವೇಷಣೆಯಾದ ಕಾವ್ಯ ಒಟ್ಟು ಅರ್ಥವಾಗಿ, ಶಬ್ದ ಶರೀರದ ಮೂಲಕ ರೂಪಕ, ಸಂಕೇತ, ಪ್ರತಿಮೆಗಳ ಮುಖಾಂತರ ಮೈದಾಳಿ ಒಂದು ಸಾವಯವ ಸಮಗ್ರ ಶಿಲ್ಪವಾಗಿ ಘನೀಕೃತವಾಗುತ್ತದೆ. ಒಟ್ಟು ದೇಶದ ಬದುಕು, ಅದರ ಸಾಂಸ್ಕೃತಿಕ ವೈವಿಧ್ಯ ವಿಶಿಷ್ಟತೆಗಳು ಜನತೆಯ ಆಶಯ ಅಭಿಪ್ರಾಯಗಳ ಪ್ರತಿಬಿಂಬಿವಾಗಿ ಮಾನವೀಯ ಮೌಲ್ಯಗಳಿಂದ ಕೂಡಿದ್ದು ಆಯಾಕಾಲದ ಜನರನ್ನು ಜಾಗೃತಗೊಳಿಸುತ್ತಿರುವ ಕಾರ್ಯ ಕಾವ್ಯದ್ದಾಗಿದೆ. ಅದರಂತೆ ಇಂದು ಕೋಮುವಾದ, ಜಾಗತೀಕರಣ, ಖಾಸಗೀಕರಣ, ಮತೀಯವಾದದ ಪ್ರಭಾವಗಳಿಗೆ ನಲುಗಿದ ಮನುಷ್ಯನ ಬದುಕಿನ ಕುರಿತು ಅವುಗಳ ಎಚ್ಚರಿಕೆಯ ಕುರಿತು ಸಮಕಾಲೀನ ಕಾವ್ಯ ಜಾಗೃತಿಯನ್ನು ಮೂಡಿಸುತ್ತಿರುವುದು ಕಾಣುತ್ತೇವೆ. ಹಾಗೇ ಮೂಡಿಸುವ ಆಶಯವು ಕಾವ್ಯದ್ದಾಗಿದೆ.

ಕಾವ್ಯ ವೈಯಕ್ತಿಕ ಅನುಭವವೇ ಆದರೂ ಕೇವಲ ಸ್ವಂತ ಸುಖಾಯ ಅಥವಾ ತೃಪ್ತಿಗಾಗಿ ಎಂಬ ಹೇಳಿಕೆಗೆ ಅರ್ಥ ಉಳಿಯಲಿಲ್ಲ. ಕಾವ್ಯ ಸ್ಫೂರ್ತಿಯ ಫಲವಾಗಿದೆ. ಪರಿಶ್ರಮದ ಫಲ ಎಂದು ಚಿಂತಿಸಲಾಗಿದೆ. ಕಾವ್ಯ ಮಾನಸಿಕ ಕ್ರಿಯೆಯಾಗಿ ಬದುಕಿನ ಎಚ್ಚರಕ್ಕೆ ಹೆಚ್ಚು ಅರ್ಥ ಬಂದಿದೆ. ಕವಿ ನಿತ್ಯವರ್ತಮಾನಕ್ಕೆ ಸಲ್ಲಬೇಕಾದರೆ ಅವನು ತನ್ನ ಸಮಕಾಲೀನತೆಯನ್ನು ಬಳಸಿಕೊಳ್ಳುವ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ. ವಸ್ತುವಿನ ನೆಲೆಯಲ್ಲಿ ಸಮಕಾಲೀನತೆಯಾಗದೆ ಆಶಯದ ನೆಲೆಯಲ್ಲಿ ಸಮಕಾಲೀನತೆಯಾಗುವುದು ಮುಖ್ಯವಾದ ಸಂಗತಿಯಾಗಿದೆ. ಇಂದಿನ ಯುವಪೀಳಿಗೆಯ ಕವಿಗಳು ಕೇವಲ ಮನೋರಂಜನೆಗಾಗಿ ಕಾವ್ಯವನ್ನು ಆಸ್ವಾಧಿಸಿ ರಚಿಸುವ ಕೆಲಸ ಮಾಡದೆ ಅದೊಂದು ಜಾಗೃತಿ ಮೂಡಿಸುವ ಮಾಧ್ಯಮವನ್ನಾಗಿಸಿ ಗಂಭೀರ ರಚನೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಹೊಸ ಹೊಸ ರೂಪಗಳ ಸೃಷ್ಟಿಗೆ ಹಂಬಲಿಸುತ್ತಿರುವುದು ಅವರ ಕಾವ್ಯದ ಮೂಲಕ ತಿಳಿಯುತ್ತಿದೆ.

ಸಮಕಾಲೀನ ಕನ್ನಡ ಕಾವ್ಯದಲ್ಲಿ ಅದರಲ್ಲಿ ವಿಶೇಷವಾಗಿ ಬರೆಯುತ್ತಿರುವ ಹೊಸ ಪೀಳಿಗೆಯವರ ಕಾವ್ಯವನ್ನು ಹೆಚ್ಚಾಗಿ ಗಮನದಲ್ಲಿ ಇಟ್ಟುಕೊಂಡು ಈ ಅಧ್ಯಯನ ಮಾಡಲಾಗಿದೆ. ಕಾವ್ಯ ಪರಂಪರೆಯ ಮಾದರಿಗಳನ್ನು ಯುವ ಬರಹಗಾರರು ಯಥಾವತ್ತಾಗಿ ಅನುಸರಿಸದೆ ಹೊಸ ನುಡಿಗಟ್ಟಿನೊಂದಿಗೆ ಪ್ರಸ್ತುತ ಸುಡುವಾಸ್ತವಗಳ ಕುರಿತಾಗಿ ಹೊಸ ಸಂವೇದನೆಯನ್ನು ಹೊರಚೆಲ್ಲುವ ಅಭಿವ್ಯಕ್ತಿಯ ಕ್ರಮ ವಿಶೇಷವಾಗಿ ಅಭಿವ್ಯಕ್ತಿಗೊಂಡಿದೆ. ಪ್ರಸ್ತುತ ದಿನಮಾನದಲ್ಲಿ, ಅತಿಯಾದ ಕೋಮುವಾದ, ಜಾತೀಯತೆ, ಭಯೋತ್ಪಾದನೆ, ಅಸಮಾನತೆ, ಮೌಢ್ಯತೆಯನ್ನು

ನೂತನವಾಗಿ ಹುಟ್ಟಿಕೊಂಡ ಜಾಗತಿಕ ಸಮಸ್ಯೆಗಳನ್ನು ಸುಡುವಾಸ್ತವಗಳನ್ನು ಬೀದಿಯಲ್ಲೇ ಮಹಿಳೆಯರನ್ನು ಅತ್ಯಾಚಾರಮಾಡುವ ಅಮಾನವೀಯ ಕೆಲಸವನ್ನು ಕಾವ್ಯ ಒಂದು ತಾತ್ವಿಕ ಹಿನ್ನೆಲೆಯಲ್ಲಿ ಅಭಿವ್ಯಕ್ತಿಸುತ್ತಿದೆ. ಇಂತಹ ಕೃತ್ಯಗಳಿಗೆ ಧಿಕ್ಕಾರ ಹೇಳಿರುವುದು ಕಾಣುತ್ತೇವೆ. ಹಾಗೇ ಅಲ್ಪಸಂಖ್ಯಾತರ, ದಲಿತರ ಸಾಮಾಜಿಕ ಬದುಕಿನ ಚಿತ್ರಣ ಹಾಗೂ ಅವರ ಆಹಾರ ಸಂಸ್ಕೃತಿಯ ಮೇಲೆ ಸಾಧಿಸುವ ಹಿಡಿತವನ್ನು ಕಾವ್ಯ ವಿಶೇಷವಾಗಿ ಅಭಿವ್ಯಕ್ತಿಸಿದೆ. ಹಾಗೇ ಪ್ರತಿಯೊಬ್ಬರು ತಮ್ಮ ಆಹಾರ ಸಂಸ್ಕೃತಿಯನ್ನು ಗೌರವಿಸುವುದು ಸಂವಿಧಾನಬದ್ಧ ನಿಯಮ ಎಂದು ಕೂಗಿ ಹೇಳಿದೆ. ಹಾಗೇ ಜಾತಿ ಹೆಸರಲ್ಲಿ ನಡೆಯುವ ಅಮಾನವೀಯ ಕೃತ್ಯಗಳನ್ನು ಧಿಕ್ಕರಿಸಿದೆ. ಅಷ್ಟೇ ಅಲ್ಲದೆ, ಪ್ರಸ್ತುತ ಸಂದರ್ಭದಲ್ಲಿ ಅಕ್ಷರ ಕಲಿತ ಯುವ ಪಡೆ ಸಮಾಜದ ಸುಧಾರಿಸುವ, ಬದಲಾಯಿಸುವ ಮನಸ್ಸುಗಳೇ ಆತ್ಮಹತ್ಯೆಗೆ ಶರಣಾಗುವಂತಹ ದುರಂತದ ಕಾಲಘಟ್ಟವನ್ನು ಕಾವ್ಯ ಚಿತ್ರಿಸಿದೆ ಹಾಗೂ ಆತ್ಮಹತ್ಯೆಗೆ ಕಾರಣವಾಗಿಸುವ ವ್ಯವಸ್ಥೆಯ ಕರಾಳತೆಯನ್ನು ಕಾವ್ಯ ಮೂಡಿಸಿ ಜಾಗೃತಿಯನ್ನು ಉಂಟುಮಾಡುತ್ತಿದೆ.

ಹೊಸ ತಲೆಮಾರಿನ ಯುವಪೀಳಿಗೆಯವರ ಕಾವ್ಯವನ್ನು ಒಂದು ಹೊಸ ಓದಿಗೆ ಒಳಪಡಿಸಿ ಇವರ ತಾತ್ವಿಕ ನೆಲೆಯನ್ನು ಪತ್ತೆ ಹಚ್ಚುವುದು ಅಧ್ಯಯನದ ಆಶಯವಾಗಿತ್ತು.

*** ಅಧ್ಯಯನದ ಫಲಿತಗಳು**

೧. ತತ್ವಪದಕಾರರೇ ಆಧುನಿಕ ಕನ್ನಡ ಕಾವ್ಯದ ಆರಂಭಕಾರರಾಗಿದ್ದು ಭಾರತದ ಅನುಭವ ಪರಂಪರೆ ಹಾಗೂ ಸೂಫಿ ಪರಂಪರೆಗಳ ಸಂಕರಿತ ಧರ್ಮ ನಿರಪೇಕ್ಷ ಸಿದ್ಧಾಂತವನ್ನು ತಮ್ಮ ಕಾವ್ಯದಲ್ಲಿ ಪ್ರತಿಪಾದಿಸಿದ್ದಾರೆ. ಮತ, ಭಾಷೆ, ಜಾತಿ, ಪಂಥ, ಲಿಂಗಗಳ ನಿರಾಕರಣೆ ಆರೂಢ ತತ್ವ, ಶಿಷ್ಟ ಧರ್ಮಗಳನ್ನು ತಿರಸ್ಕರಿಸುತ್ತದೆ. ಹೀಗಾಗಿ ಆಧುನಿಕ ಕನ್ನಡ ಸಾಹಿತ್ಯ ಸಾಹಿತ್ಯ ಉದಯವಾಗಿರುವುದು ಅನುಭಾವಿಕ ನೆಲೆಯಿಂದ ಇಂತಹ ಒತ್ತಾಸೆಯು ಜಾತ್ಯಾತೀತ ತತ್ವವನ್ನು ಇತ್ತೀಚಿನ ಕನ್ನಡ ಕಾವ್ಯ ಪ್ರತಿಪಾದಿಸಿರುವುದು ನೋಡುತ್ತೇವೆ.

೨. ಪ್ರಸ್ತುತ ಸಂದರ್ಭದಲ್ಲಿ ಕೋಮುಗಲಭೆಗಳು, ಸಂಭವಿಸಿದಾಗ, ಮತೀಯ ಹಿಂಸೆ ವಿಜೃಂಭಿಸುವಾಗ ಹಿಂದೂ-ಮುಸ್ಲಿಂ ಸಂಬಂಧದಲ್ಲಿ ಸಂಶಯಗಳು ಹೆಚ್ಚಾಗುವಂಥ ರಾಜಕೀಯ ಸಾಮಾಜಿಕ ಸಂದರ್ಭ ಎದುರಾದಾಗ ಇತ್ತೀಚಿನ ಕನ್ನಡ ಕಾವ್ಯ ಧಾರ್ಮಿಕ ಸಾಮರಸ್ಯವನ್ನು ಬೆಸೆಯುವ ಸೂಫಿ ತತ್ವದ ನೆಲೆಯಲ್ಲಿ ಕವಿತೆ ರಚನೆಗೊಳ್ಳುತ್ತಿರುವುದು ಕಂಡುಬಂದಿದೆ. ಕೆಲವು ಕವಿತೆಗಳಲ್ಲಿ ಅನುಭಾವ ಪರಂಪರೆ ಮತ್ತೆ ಮತ್ತೆ ಪುನರುಕ್ತಗೊಳ್ಳುವುದು ಕುತೂಹಲಕರ ಸಂಗತಿಯಾಗಿದೆ.

೩. ಇತ್ತೀಚಿನ ಕನ್ನಡ ಕಾವ್ಯಕೂಡ ಒಂದೇ ಮನೋಧರ್ಮದವರಾಗಿರುವುದಿಲ್ಲ. ಆಧ್ಯಾತ್ಮಿಕ ಹಂಬಲವುಳ್ಳವರು, ಎಡಪಂಥೀಯರು, ಉದಾರವಾದಿಗಳು, ಮಾನವತವಾದಿಗಳು, ವಿಚಾರವಾದಿಗಳು,

ಸಾಂಸ್ಕೃತಿಕ ಅನುಸಂಧಾನವಾದಿಗಳು, ಮಹಿಳೆಯರು ಹೀಗೆ ಬಹುಮುಖಿಯಾದ ಕವಿಗಳ ತಂತಮ್ಮ ನಿಲುವುಗಳ ಪ್ರತಿಪಾದನೆ ಅನುಭಾವ ಪರಂಪರೆಯಿಂದ ಸಮರ್ಥನೆ ಪಡೆದಿರುವುದು ಬಹುತ್ವದ ಮಾನ್ಯತೆಯನ್ನು ಎತ್ತಿಹಿಡಿದಂತೆ ಸೂಚಿಸುತ್ತದೆ.

೪. ಇತ್ತೀಚಿನ ಕನ್ನಡ ಕಾವ್ಯ ಬಹುಪಾಲು ಕೋಮುವಾದದ ವಿರೋಧಿಯಾಗಿದೆ. ಅದು ಧಾರ್ಮಿಕ ಹಿಂಸೆಯನ್ನು ವಿರೋಧಿಸುತ್ತದೆ. ಧಾರ್ಮಿಕ ಸೌಹಾರ್ದತೆ, ಧಾರ್ಮಿಕತೆ ಹಾಗೂ ಧರ್ಮ ನಿರಪೇಕ್ಷತೆಗಳನ್ನು ಪ್ರತಿಪಾದಿಸುತ್ತದೆ. ಇದರೊಂದಿಗೆ ಸರ್ವಾಧಿಕಾರದ ವಿರೋಧಿ ನೆಲೆ ಹಾಗೂ ವ್ಯಕ್ತಿ ಸ್ವಾತಂತ್ರ್ಯದ ನೆಲೆಯಿಂದ ಧಾರ್ಮಿಕ ಸೌಹಾರ್ದತೆಯನ್ನು ಪ್ರತಿಪಾದಿಸುತ್ತಿರುವ ಕಾವ್ಯ ಇತ್ತೀಚಿನ ಕನ್ನಡ ಕಾವ್ಯವಾಗಿದೆ.

೫. ಸಮಾಜವಾದಿ ನೆಲೆಯಿಂದ ಧಾರ್ಮಿಕ ಹಿಂಸೆಯ ವಿರೋಧ ಹಾಗೂ ಸೌಹಾರ್ದತೆಯ ಪ್ರತಿಪಾದನೆ ಕಂಡುಬಂದಿದೆ. ಅನೇಕ ದಮನಿತ ಸಮುದಾಯಗಳು, ಶೂದ್ರ, ದಲಿತ, ಸ್ತ್ರೀ, ಅಲ್ಪಸಂಖ್ಯಾತರ ಸಂವೇದನೆಗಳನ್ನು ಹಾಗೂ ಪ್ರಾತಿನಿಧ್ಯದ ಪ್ರಶ್ನೆಯನ್ನು ಕಾವ್ಯ ಎತ್ತಿರುವುದು ಕಂಡುಬಂದಿದೆ.

೬. ಇಡೀ ಇತ್ತೀಚಿನ ಕನ್ನಡ ಕಾವ್ಯವನ್ನು ಅವಲೋಕಿಸಿದಾಗ ನೊಂದ. ಅವಮಾನಿತ, ಶೋಷಿತ ಧ್ವನಿಯೇ ಹೆಚ್ಚಾಗಿ ಕಂಡುಬಂದಿದೆ. ಅದಕ್ಕಾಗಿ ಇತ್ತೀಚಿನ ಕನ್ನಡ ಕಾವ್ಯದಲ್ಲಿ ವಿಷಾದತೆ ಹೆಚ್ಚಾಗಿ ಕಂಡುಬಂದಿರುವ ಕಾರಣ ಕಾವ್ಯವನ್ನು ವಿಷಾದಕಾವ್ಯ ಎಂತಲೂ ಕರೆಯಬಹುದಾಗಿದೆ. ಹಾಗೆ ಪ್ರೀತಿಗಾಗಿ ಹಂಬಲಿಸುವ ಪರಿಯು ಕಾವ್ಯದಲ್ಲಿ ವ್ಯಕ್ತಗೊಂಡಿದೆ.

೭. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಉದಾರವಾದಿ, ಮಾನವತವಾದಿ ಕವಿಗಳಿಂದ ಹಿಡಿದು ಎಡಪಂಥೀಯ ದಲಿತ, ಮಹಿಳಾ ನೆಲೆಗಳಿಂದಲೂ ಹಿಂಸೆಯನ್ನು ವಿರೋಧಿಸಿ, ವೈಚಾರಿಕತೆಯ, ಸೌಹಾರ್ದತೆಯ ದೊಡ್ಡ ಪ್ರಮಾಣದಲ್ಲಿ ಕಾವ್ಯ ಸೃಷ್ಟಿಯಾಯಿತು. ಒಟ್ಟಾರೆ ಇಡೀ ಇತ್ತೀಚಿನ ಕನ್ನಡ ಕಾವ್ಯ ಎಲ್ಲ ಕಾಲಗಳಲ್ಲೂ ಧಾರ್ಮಿಕ ಹಿಂಸೆಯನ್ನು ವಿರೋಧಿಸುವ ಹಾಗೂ ಸೌಹಾರ್ದತೆಯನ್ನು ಪ್ರತಿಪಾದಿಸುವ ನಿಯೋಗವನ್ನು ಸಮರ್ಥವಾಗಿ ನಿರ್ವಹಿಸಿದೆ.

೮. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಹೆಚ್ಚಾಗಿ ಕಂಡುಬರುವ ರಾಷ್ಟ್ರೀಯತೆ ಮತ್ತು ಆಹಾರ ಸಂಸ್ಕೃತಿಯ ಕುರಿತು ಹೊಸ ಗ್ರಹಿಕೆ ಮತ್ತು ವ್ಯಾಖ್ಯಾನವನ್ನು ನೀಡಿರುವುದು ಕಂಡುಬಂದಿದೆ. ಮೌಢ್ಯತೆಯಿಂದ ಅವುಗಳನ್ನು ಆರಾಧಿಸುವುದಕ್ಕಿಂತ ವೈಚಾರಿಕತೆಯಿಂದ ಅವುಗಳನ್ನು ಆಚರಿಸುವುದು ಹೇಗೆ ಎಂದು ಹೊಸ ನಿಲುವುಗಳನ್ನು ಕಾವ್ಯ ನೀಡಿದೆ.

೯. ಪ್ರಸ್ತುತ ಸಂದರ್ಭದಲ್ಲಿ ಹಿಂಸೆ ಒಂದೇ ನೆಲೆಯಲ್ಲಿ ತನ್ನ ಕರಾಳತೆಯನ್ನು ಮೆರೆಯುತ್ತಿಲ್ಲ. ಧಾರ್ಮಿಕ ಹಿಂಸೆ, ಸಾಮಾಜಿಕ ಹಿಂಸೆ, ರಾಜಕೀಯ, ಸಾಂಸ್ಕೃತಿಕ, ಹೀಗೆ ಹಲವು ಬಗೆಗಳಲ್ಲಿ

ದಲಿತ ಸಮುದಾಯವು ಅಸಂಘಟಿತ ಅನೇಕ ತಳಸಮುದಾಯಗಳಿಗೆ, ದಲಿತರಿಗೆ ಮಹಿಳೆಯರಿಗೆ ನೀಡುವ ಹಿಂಸೆಯನ್ನು ಕಾವ್ಯ ವಿರೋಧಿಸಿ ಪ್ರಗತಿಪರ ಚಿಂತನೆಯನ್ನು ಹೊಂದಿರುವುದು ಕಾಣುತ್ತೇವೆ. ಎಲ್ಲಾ ಬಗೆಯ ಹಿಂಸೆಗೆ ಕಾವ್ಯ ಧಿಕ್ಕಾರ ಹೇಳುವುದು ವ್ಯಕ್ತಗೊಂಡಿದೆ.

೧೦. ಎಲ್ಲಾ ಮತ, ಧರ್ಮ, ಆಚರಣೆ ಹಾಗೂ ವೈಚಾರಿಕತೆಗಿಂತಲೂ ಬದುಕು ದೊಡ್ಡದು. ತಮ್ಮ ದೈನಂದಿನ ಬದುಕಿನಲ್ಲಿ ಜನ ತಮ್ಮ ಅನುಕೂಲಗಳಿಗೆ ತಕ್ಕಂತೆ ಪರಸ್ಪರಾವಲಂಬಿಗಳಾಗಿ ಬದುಕುತ್ತಾರೆ. ಅದು ಅವರ ಬದುಕಿನ ನಡಿಗೆಯ ಸಹಜ ಲಯ. ಈ ಪರಸ್ಪರಾವಲಂಬನೆಯ ಮುಂದೆ ಎಲ್ಲಾ ಮತ, ಪಂಥಗಳೂ ಕ್ಷುದ್ರವಾಗಿ ಕಾಣಿಸುತ್ತವೆ. ಇಂತಹ ಐಕ್ಯತೆಯ ಬದುಕಿಗಾಗಿ ಕಾವ್ಯ ಮಿಡಿದಿರುವುದು ಹಾಗೂ ಅಭಿವ್ಯಕ್ತಿಸಿರುವುದು ಕಂಡುಬಂದಿದೆ.

೧೧. ಇತ್ತೀಚಿನ ಕನ್ನಡ ಕಾವ್ಯ ಸಮಕಾಲೀನ ತಲ್ಲಣಗಳ ಕುರಿತಾಗಿ ಪೋಷಣಾತ್ಮಕ ಮಾದರಿಯನ್ನು ಅನುಸರಿಸಿ ಕಾವ್ಯ ರಚಿಸುತ್ತಿದೆ. ಹಾಗೆ ಅದನ್ನು ತಾತ್ವಿಕರಿಸಿ ಸಂಕೀರ್ಣ ಮಾದರಿಯನ್ನು ಸಹ ಅನುಸರಿಸುವುದು ಕಂಡುಬಂದಿದೆ. ಮೊದಲನೆಯದು ಆದರ್ಶವಾದ ಹಿನ್ನೆಲೆಯಲ್ಲಿ ಭಾವಾವೇಶವನ್ನು ತರುತ್ತದೆ. ಎರಡನೆಯದ್ದು ಹಿಂಸೆ ಮತ್ತು ಸಾಮರಸ್ಯಗಳಿಗೆ ತೀವ್ರವಾಗಿ ತುಡಿಯುವ, ತನಗೆ ತಾನೇ ಒದ್ದಾಡುವ ಕಂಗೆಟ್ಟ ತಾನೂ ಭಾಗಿ ಎಂದು ಭಾವಿಸುವ ಮಾದರಿ ಇಲ್ಲಿ ಧ್ಯಾನಸ್ಥ ಚಿಂತನೆಗಳು ಆತ್ಮಶೋಧ ಹುಟ್ಟುವಂತೆ ಅಭಿವ್ಯಕ್ತಿ ಇರುತ್ತದೆ. ಎರಡೂ ಬಗೆಯ ಅಭಿವ್ಯಕ್ತಿ ಕ್ರಮಗಳಲ್ಲಿ ಸಾಮಾಜಿಕ ಉಪಯುಕ್ತತೆಯ ದೃಷ್ಟಿಯಿಂದ ಕಾವ್ಯಪರಂಪರೆಯ ಮುಂದುವರಿಕೆ ಹಾಗೂ ಸಂವೇದನೆಗಳನ್ನು ವಿಸ್ತರಿಸುವ ದೃಷ್ಟಿಯಿಂದ ಉಪಯುಕ್ತ ಮಾದರಿಗಳಾಗಿವೆ.

೧೨. ಯಾವುದೇ ಒಂದು ಚಿಂತನೆ ಸಾಹಿತ್ಯದಲ್ಲಿ ಮುನ್ನೆಲೆಗೆ ಬರುವ ಮೂಲಕ ಒಂದು ಭಾಷೆ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಯಾಗುತ್ತದೆ. ಕಾವ್ಯ ಭಾಷೆ ಹೊಸ ಅವತಾರವನ್ನು ತಾಳುತ್ತದೆ. ಅನೇಕ ಹೊಸ ಹೊಸ ರೂಪಗಳು ಕಾವ್ಯದ ಮುಖ್ಯ ಕೇಂದ್ರಕ್ಕೆ ಬಂದ ಪರಿಣಾಮ ಕನ್ನಡ ಕಾವ್ಯ ಭಾಷೆಗೆ ಹೊಸ ಪರಿಭಾಷೆಗಳ ಶಬ್ದಕೋಶ, ಅಲಂಕಾರಿಕ ಆಯಾಮಗಳು ಲಭಿಸಿವೆ. ಬೇರೆ ಬೇರೆ ಭಾಷೆಯ ಪದಗಳು ಈ ನೆಲದ ಭಾಷೆಯಲ್ಲಿ ಅಡಗಿ ಹೊಸ ಸಂವೇದನೆಯನ್ನು ಅರ್ಥೈಸುವಲ್ಲಿ ವಿಶೇಷತೆಯನ್ನು ಪಡೆದಿವೆ. ಕಾವ್ಯ ತನ್ನ ಕಾಲ ಘಟ್ಟದ ಕನ್ನಡಿಯಾಗಿಸಿದ್ದು ಕೂಡ ಭಾಷಿಕ ನೆಲೆಯಾಗಿದೆ.

೧೩. ಇತ್ತೀಚಿನ ಕನ್ನಡ ಸಾಹಿತ್ಯದಲ್ಲಿ ತೌಲನಿಕವಾಗಿ ಗಮನಿಸಿದರೆ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳ ಅಭಿವ್ಯಕ್ತಿಗೆ ಸೃಜನಶೀಲ ಪ್ರಕಾರಗಳಲ್ಲಿ ಕತೆ, ಕಾದಂಬರಿ, ನಾಟಕ ಇತ್ಯಾದಿಗಳಿಗಿಂತ ಕಾವ್ಯವು ಹೆಚ್ಚು ಜಾಗ ನೀಡಿದೆ. ವೈಚಾರಿಕ ಬರಹಗಳ ನಂತರದ ಸ್ಥಾನದಲ್ಲಿ ಕಾವ್ಯವಿದೆ. ಕಾವ್ಯದ ರೂಪಕ್ಕೂ ಈ ವಸ್ತುವಿಗೂ ಇರುವ ಆಂತರಿಕ ಸಂಬಂಧವೇ ಇದಕ್ಕೆ

ಕಾರಣವಾಗಿದೆ. ದುಗುಡ, ಶೋಕ ಸಂಕೀರ್ಣತೆ, ತವಕ ತಲ್ಲಣಗಳನ್ನು ಸರಳವಾಗಿ ನಿರ್ಣಯಕ್ಕೆ ಬಾರದ ಮಗ್ಗಲುಗಳನ್ನು ಸೂಕ್ಷ್ಮಾತಿಸೂಕ್ಷ್ಮ ಭಾವಲೋಕವನ್ನು ಅಭಿವ್ಯಕ್ತಿಸಲು ಕಾವ್ಯವು ಸಮರ್ಥ ಮಾಧ್ಯಮವಾಗಿರುವುದು ಇದಕ್ಕೆ ಕಾರಣವಾದಂತಿದೆ.

೧೪. ಸಮಕಾಲೀನ ಕನ್ನಡ ಕಾವ್ಯ ಚರಿತ್ರೆ ಮತ್ತು ಪುರಾಣದ ಪಾತ್ರಗಳನ್ನು ವರ್ತಮಾನಕ್ಕೆ ತಂದು ಪ್ರಶ್ನಿಸಿ ಅವುಗಳಿಗೆ ಹೊಸ ಅವಲೋಕನ ಕ್ರಮವನ್ನು ಕಾವ್ಯ ನೀಡಿರುವುದು ಕಂಡುಬಂದಿದೆ.

೧೫. ಇತ್ತೀಚಿನ ಕನ್ನಡ ಕಾವ್ಯದಲ್ಲಿ ವಿಶೇಷವಾಗಿ ಮಹಿಳಾ ಕಾವ್ಯ ತನ್ನ ಪರಂಪರೆಯ ಹಾದಿಯನ್ನು ಬಿಡಿಸಿಕೊಂಡು ಹೊಸ ರೂಪಕಗಳನ್ನು ಸೃಷ್ಟಿಸಿ ನೂತನವಾಗಿ ತಮ್ಮ ಸಂವೇದನೆಗಳನ್ನು ಹೊರಚೆಲ್ಲಿರುವುದು ಕಂಡುಬಂದಿದೆ. ಹೊಸ ಹೊಸ ನುಡಿಗಟ್ಟುಗಳನ್ನು ಬಳಸಿಕೊಂಡು ಕಾವ್ಯ ಪರಂಪರೆಯನ್ನು ಮುಂದುವರೆಸಿರುವುದು ಕಂಡುಬಂದಿದೆ. ವರ್ತಮಾನದ ತಲ್ಲಣಗಳನ್ನು, ವ್ಯಕ್ತಿಗತವಾದ ಸಂವೇದನೆ ಮತ್ತು ಸಮುದಾಯದ ಸಂವೇದನೆಯನ್ನು ಚಿತ್ರಿಸಿದ ಬಗೆ ವಿಶೇಷವಾಗಿ ಮೂಡಿ ಬಂದಿದೆ. ಪೌರಾಣಿಕ ಪಾತ್ರಗಳನ್ನು ಪ್ರಶ್ನಿಸಿ ಅವುಗಳನ್ನು ಮರುಚಿಂತನೆಗೆ ಒಳಪಡಿಸಿರುವುದು ವಿಶಿಷ್ಟವಾಗಿ ಕಂಡುಬಂದಿದೆ.

೧೬. ಇತ್ತೀಚಿನ ಕನ್ನಡ ಕಾವ್ಯ ಜಾಗತೀಕರಣದ ತಂದೊಡಿದ್ದ ಕರಾಳತೆಯನ್ನು ಚಿತ್ರಿಸುವುದರ ಜೊತೆಗೆ ಇದರ ಪ್ರಭಾವಕ್ಕೆ ಒಳಗಾದ ಬದುಕು ಮತ್ತು ಸಾಂಸ್ಕೃತಿಕ ಚಿತ್ರಣವನ್ನು ಅಭಿವ್ಯಕ್ತಿಸಿರುವುದು ಕಂಡುಬಂದಿದೆ. ಹಾಗೇ ದೇಶಿತನ ಕೃಷಿ, ವ್ಯವಸಾಯ, ಕುಲಕಸುಬುಗಳಿಗೆ ಬಿದ್ದ ಪೆಟ್ಟನ್ನು ಹೊಸ ನುಡಿಗಟ್ಟಿನಲ್ಲಿ ವ್ಯಕ್ತಪಡಿಸಿರುವುದು ಕಾಣುತ್ತೇವೆ.

೧೭. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಅಭಿವ್ಯಕ್ತಿಯ ನೆಲೆಗಳು ಏಕಕೇಂದ್ರಿಯವಾಗಿರದೆ ಬಹುಕೇಂದ್ರಿಯ ನೆಲೆಯಾಗಿರುವುದು ಕಂಡುಬಂದಿದೆ. ಎಲ್ಲಾ ವಲಯದಲ್ಲಿ ಕಾವ್ಯ ಮೂಡುತ್ತಿರುವ ಕಾರಣವಾಗಿ ಬಹುಕೇಂದ್ರಿಯ ಬಹುತ್ವದ ಮಾದರಿಯ ಕಾವ್ಯ ಅಭಿವ್ಯಕ್ತಿಗೊಳ್ಳುತ್ತಿರುವುದು ಕಂಡುಬಂದಿದೆ.

೧೮. ದಮನಿತ ಸಮುದಾಯಗಳ ನೋವಿನ ಕಾವ್ಯ, ಅವರ ಸಂಕಟ ಮತ್ತು ಸಂಸ್ಕೃತಿಯನ್ನು ಹೊರಚೆಲ್ಲುವ ಕಾವ್ಯವಾಗಿದೆ. ಒಂದು ಅರ್ಥದಲ್ಲಿ ಇತ್ತೀಚಿನ ಕಾವ್ಯ ವಿಷಾದ ಕಾವ್ಯವಾಗಿದೆ ಎಂದು ಹೇಳಬಹುದು.

೧೯. ಇತ್ತೀಚಿನ ಮಹಿಳಾ ಕವಯಿತ್ರಿಯರಲ್ಲಿ ಕೌಟುಂಬಿಕ ಪ್ರತಿರೋಧದೊಂದಿಗೆ ಸಾಮಾಜಿಕ ಪ್ರತಿರೋಧವು ಅಸ್ಮಿತೆಯ ನೆಲೆಯಲ್ಲಿ ಕಂಡುಬಂದಿದೆ. ಈ ಹಿಂದೆ ಇದ್ದ ಮಹಿಳಾ ಕಾವ್ಯ ಅಡುಗೆ ಮನೆಕಾವ್ಯ ಎಂಬ ಮಾತನ್ನು ಹುಸಿಗೊಳಿಸಿ ಜೀವಪರವಾದ ಚಿಂತನೆಯನ್ನು ಸಹ ಅಭಿವ್ಯಕ್ತಿಸಲಾಗಿದೆ ಹಾಗೇ ಜಾಗತಿಕ ಸಮಸ್ಯೆಗಳ ಕುರಿತಾಗಿಯೂ ಕಾವ್ಯ ರಚಿಸಿರುವುದು ಕಂಡುಬಂದಿದೆ. ವಿಶೇಷವಾಗಿ ಮಹಿಳೆಯರ ಸಂಖ್ಯೆ ಕಾವ್ಯ ರಚನೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

೨೦. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಮೂರ್ತರೂಪದ ರೂಪಕಗಳ ಬಳಕೆ ಮಾಡುತ್ತಿರುವುದು ಕಂಡು ಬಂದಿದೆ. ಮೇಲಾಗಿ ವೃತ್ತಿಯಾಧಾರಿತ ರೂಪಗಳು ಹೆಚ್ಚಾಗಿ ಕಂಡುಬಂದಿದೆ. ಹಾಗೇ ಸಂಸ್ಕೃತಿಯ ಪ್ರತಿಬಿಂಬದಂತಿರುವ ಆಹಾರ ಪದಾರ್ಥಗಳು ಸಹ ಕಾವ್ಯದಲ್ಲಿ ರೂಪಕಗಳಾಗಿವೆ. ಇದು ಪ್ರತಿಮೆ ಇದ್ದ ಸಿದ್ಧಮಾದರಿಯನ್ನು ಮುರಿದು ಕಣ್ಣಿಗೆ ಕಾಣುವ ಕತ್ತರಿ, ಉಳಿ, ಅನ್ನ, ಹಾಸಿಗೆ, ಮುಟ್ಟ, ರಕ್ತ ಇನ್ನು ಅನೇಕ ವಸ್ತುಗಳು ರೂಪಕವಾಗಿಸಿ ಶಕ್ತಿಯುತವಾದ ಕಾವ್ಯರಚನೆ ಮಾಡುತ್ತಿರುವುದು ಕಂಡುಬಂದಿದೆ.

೨೧. ಪ್ರಾದೇಶಿಕ ಭಾಷೆ ಬಳಸುತ್ತಿರುವುದು ವಿಶೇಷವಾಗಿ ಕಂಡುಬಂದಿದೆ. ಕಾವ್ಯಭಾಷೆಯೊಳಗೆ ಲೋಕ ಕಾಣುವ ಹೊಸತನದ ಕಾಲಘಟ್ಟವಾಗಿದೆ. ತನ್ನ ಸ್ವಂತ ನೆಲದ ಭಾಷೆಯ ಮೂಲಕ ಸಂಕಟವನ್ನು ಹೊರಚೆಲ್ಲುವ ಕ್ರಮ ಭಾಷಿಕವಾಗಿ ವಿಶೇಷವಾಗಿ ಕಂಡುಬಂದಿದೆ.

೨೨. ಪ್ರೇಮದ ಹುಡುಕಾಟ, ಇತ್ತೀಚಿನ ಹೊಸ ತಲೆಮಾರಿನ ಕಾವ್ಯದಲ್ಲಿ ಪ್ರೇಮದ ಕುರಿತು ಹೆಚ್ಚಾಗಿ ಒಲವು ಮೂಡುತ್ತಿರುವುದು ಕಂಡುಬಂದಿದೆ. ಗಂಡು-ಹೆಣ್ಣಿನ ಪ್ರೇಮ, ಪ್ರಾಣಿ ಪಕ್ಷಿಯ ಪ್ರೇಮ, ಮನುಷ್ಯ-ಮನುಷ್ಯನ ಪ್ರೇಮ, ಪ್ರೇಮಕ್ಕಾಗಿ ಹಂಬಲಿಸುವುದು ಹೆಚ್ಚಾಗಿ ಕಂಡುಬಂದಿದೆ.

೨೩. ಇತ್ತೀಚಿನ ಕನ್ನಡ ಕಾವ್ಯದಲ್ಲಿ ನೂತನ ಪ್ರಯೋಗಶೀಲತೆಗಳು ಕಂಡುಬಂದಿವೆ. ಎರಡು ಧರ್ಮದ ಸಂಕರತೆಯ ಸೂಚಕದಂತೆ, ಜಂಗಮ ಫಕೀರನ ಜೋಳಿಗೆ, ಬಾಳೆ ಎಲೆಯಲ್ಲಿ ಬಿರಿಯಾನೆ, ಹಾಗೇ ಹಡದಿ ಹಾಸಿಗೆಯ ಹಾಡು, ಅಕ್ಕ ಸೀತಾ ನಿನ್ನಂತೆ ನಾನು ಶಂಕಿತ, ಗೋವು ತಿಂದು ಗೋವಿನಂತಾದವನು. ಎನ್ನುವ ಕವಿತೆಯ ಸಾಲುಗಳು ಹೊಸ ಪ್ರಯೋಗಶೀಲತೆಯನ್ನು ಸೂಚಿಸುತ್ತವೆ.

೨೪. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಇಲ್ಲಿಯವರೆಗೆ ಅಕ್ಷರಲೋಕದಿಂದ ದೂರವಿದ್ದ ವಿವಿಧ ಸಮುದಾಯದ ಕವಿಗಳು ಕಾವ್ಯರಚನೆಯಲ್ಲಿ ತೊಡಗಿದ್ದಾರೆ. ಆದ್ದರಿಂದ ಮುಖ್ಯ ನೆಲೆಗೆ ಬಾರದ ಅನೇಕ ತಳಸಮುದಾಯದ ಸಂಕಟಗಳು, ನೋವುಗಳು ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವುದು ಗಮನಿಸಬಹುದಾಗಿದೆ.

೨೫. ವರ್ತಮಾನದ ಬಿಕ್ಕಟ್ಟುಗಳನ್ನು, ಸಮಸ್ಯೆಗಳನ್ನು ಸಮರ್ಥವಾಗಿ ಸಮಕಾಲೀನ ಕಾವ್ಯ ಸಮರ್ಥವಾಗಿ ಅಭಿವ್ಯಕ್ತಿಸುತ್ತಿದೆ.

೨೬. ಇತ್ತೀಚಿನ ಕನ್ನಡ ಕಾವ್ಯದಲ್ಲಿ ಲಯಗಾರಿಕೆ ಕೊರತೆ ಇದೆ. ಕವಿತೆಯ ಸಾಲುಗಳು ಗದ್ಯದ ಸಾಲುಗಳಂತೆ ಕಾಣುತ್ತಿವೆ. ಇದು ಕಣ್ಣಿನ ಕಾವ್ಯವಾಗಿ ನಿಂತಿದೆ. ಆದ್ದರಿಂದ ಇದಕ್ಕೆ ಒಂದು ಚೂರು ಲಯಗಾರಿಕೆ ಸಿಕ್ಕರೆ ಕಣ್ಣಿನ ಕಾವ್ಯ ಕಿವಿಯ ಕಾವ್ಯವಾಗುವ ಸಾಧ್ಯತೆ ಇದೆ.

೨೭. ಇತ್ತೀಚಿನ ಕನ್ನಡ ಕಾವ್ಯದ ಕವಿಗಳು ತಮ್ಮ ಸಂಕಟ, ನೋವು, ಸಿಟ್ಟು, ವ್ಯಕ್ತಿತ್ವ ತಾತ್ವಿಕ ವಿಮೋಚನೆ, ಪ್ರೇಮ, ನಂಬಿಕೆ, ಸಾಮಾಜಿಕ ಕಳವಳಿಯನ್ನು ಹೊರಚೆಲ್ಲಲು ಶೋಷಣೆಯ

ವಿರುದ್ಧ ಧ್ವನಿಯೆತ್ತಲು ಅಕ್ಷರ ಮಾಧ್ಯಮವನ್ನು ಒಂದು ಅಸ್ತ್ರವಾಗಿಸಿಕೊಂಡಿರುವುದರಲ್ಲಿ. ಕಾವ್ಯವೂ ಒಂದಾಗಿದೆ.

೨೮. ಇತ್ತೀಚಿನ ಕಾವ್ಯವು ಕಾವ್ಯ ಪರಂಪರೆಯ ಸಿದ್ಧಮಾದರಿಯನ್ನು ಮುರಿದು ಹೊಸ ನೆಲೆಯಲ್ಲಿ ಕಾವ್ಯಕಟ್ಟುವ ತಂತ್ರಗಾರಿಕೆ ಹೊಂದಿದೆ ಹಾಗೂ ಹಲವಾರು ಕಾವ್ಯರೂಪಗಳನ್ನು ವಿಸ್ತರಿಸಿಕೊಂಡಿದೆ. ಉದಾಹರಣೆ ಖಂಡಕಾವ್ಯ, ಗಜಲ್, ಹೋರಾಟದ ಹಾಡುಗಳು, ಆಧುನಿಕ ವಚನಗಳು, ಆಯ್ಕೆಗಳು ಹೀಗೆ ಕೆಲವು ರೂಪಗಳನ್ನು ನಿರ್ಮಿಸಿಕೊಂಡು ಕಾವ್ಯ ತನ್ನ ಪರಂಪರೆಯ ಹಾದಿಯನ್ನು ಮುಂದುವರೆಸಿದೆ. ಇದರಂತೆ ಮುಂದುವರಿಕೆಯು ಕೊಂಡಿಯಾಗಿ ಇತ್ತೀಚಿನ ಕಾವ್ಯ ಇದೆ. ಭಾಷಿಕವಾಗಿ, ನುಡಿಗಟ್ಟಿನಲ್ಲಿ ರೂಪಕದಲ್ಲಿ ಆಶಯದಲ್ಲಿ ಹೊಸತನ ಪಡೆಯುತ್ತಾ ಸಾಗಿದೆ.

೨೯. ಇತ್ತೀಚಿನ ಕನ್ನಡ ಕಾವ್ಯದಲ್ಲಿ ವೈಚಾರಿಕತೆಯ ಶೋಧವಿದೆ. ಹಲವು ಸಿದ್ಧಾಂತಗಳನ್ನು ತಮ್ಮದಾಗಿಸಿಕೊಂಡು ಸಂಪೂರ್ಣವಾಗಿ ಜೋತು ಬೀಳದೆ ವಿಮರ್ಶೆಯ ನೆಲೆಯಲ್ಲಿ ವಿಮರ್ಶಿಸಬೇಕಾದ್ದುದ್ದನ್ನು ಮಾತ್ರ ಪಡೆದು ಜೀವಪರ ನೆಲೆಯಲ್ಲಿ ಕಾವ್ಯ ರಚನೆಗೊಳ್ಳುತ್ತಿದೆ. ಹಾಗೆ ಮೌಢ್ಯತೆಯ ವಿರುದ್ಧ ವೈಚಾರಿಕತೆಯನ್ನು ಸಾರುತ್ತೀದೆ.

೩೦. ಅಖಂಡತೆಯ ಕುರಿತು ಹೆಚ್ಚಿನ ಒಲವು ಇತ್ತೀಚಿನ ಕಾವ್ಯದಲ್ಲಿ ಕಂಡುಬಂದಿದೆ. ದೇಶ, ಭಾಷೆ, ಲಿಂಗ, ಜಾತಿ, ಧರ್ಮ, ಪ್ರಾಂತ್ಯ ಎಲ್ಲವನ್ನು ಮೀರಿ ಏಕತೆಯನ್ನು ಸಾರುವ ಅಖಂಡತೆಯನ್ನು ವ್ಯಕ್ತಪಡಿಸಿದೆ. ಜಗತ್ತಿನ ಯಾವುದೇ ಮೂಲೆಯಲ್ಲಿ ಸಂಭವಿಸಿದ ನೋವು ತನ್ನ ನೋವು ಎಂದು ಮಿಡಿಯುವುದು ಹೊಸ ತಲೆಮಾರಿನ ಕವಿತೆಯಲ್ಲಿ ಕಂಡುಬಂದಿದೆ.

೩೧. ಜಾಗತಿಕವಾಗಿ, ಪ್ರಾದೇಶಿಕವಾಗಿ ಉಂಟಾಗುತ್ತಿದ್ದ ಮಾರ್ಪಾಡುಗಳು ಮಹಿಳಾಕಾವ್ಯದ ಮೇಲೆ ಪ್ರಭಾವ ಬೀರಿ ಮಹಿಳಾಕಾವ್ಯ ಪ್ರಜ್ಞೆ–ಜಾಗೃತಿಗೊಳಿಸಿದ್ದು ಕಂಡುಬಂದಿದೆ.

೩೨. ಮಾನವೀಯ ಆದರ್ಶನೀಕರಣವನ್ನು ಸ್ಥಿತಿಗೆ ಹೇರಿರುವ ಕೆಲವು ನಿರ್ಬಂಧಗಳನ್ನು ಗಟ್ಟಿಯಾಗಿ ತಿರಸ್ಕರಿಸುವ ಮನೋಭಾವ ಈ ಕಾವ್ಯದಲ್ಲಿ ಕಂಡುಬಂದಿದೆ.

೩೩. ಇತ್ತೀಚಿನ ಮಹಿಳಾಕಾವ್ಯದಲ್ಲಿ ಹೆಣ್ಣಿನ ಅಸ್ಮಿತೆ ಅನನ್ಯತೆಯಿಂದ ನಡೆಯುವ ತಂತ್ರಗಾರಿಕೆಯನ್ನು ಸ್ವೀಕರಣೆಯ ನೆಲೆಯಲ್ಲಿ ಬೆರಸಿಕೊಂಡು ಮಹಿಳಾಕಾವ್ಯ ಗಟ್ಟಿತನ ಹೊಂದಿದೆ.

*** ಮುಂದಿನ ಅಧ್ಯಯನದ ಸಾಧ್ಯತೆಗಳು**

ಪ್ರಸ್ತುತ ಅಧ್ಯಯನವು ಇತ್ತೀಚಿನ ಕನ್ನಡ ಕಾವ್ಯದ ತಾತ್ವಿಕ ನೆಲೆಗಳು ಎಂಬ ವಿಷಯದ ಕುರಿತು ಅಧ್ಯಯನ ನಡೆಸಲಾಗಿದೆ. ಪೂರ್ಣತೆ ಎನ್ನುವುದು ಎಲ್ಲಿಯೂ ಇಲ್ಲ ಅದರಂತೆ ಆ ಅಧ್ಯಯದ ವಿಷಯಕ್ಕೆ ಸಂಬಂಧಿಸಿದಂತೆ ಇನ್ನು ಅಧ್ಯಯನ ಸಾಧ್ಯತೆಗಳನ್ನು ಈ ವಿಷಯ ಒಳಗೊಂಡಿದೆ. ಅವುಗಳನ್ನು ಈ ಮುಂದಿನಂತೆ ನೋಡಬಹುದು.

೧. ಸಮಕಾಲೀನ ಕನ್ನಡ ಕಾವ್ಯದ ಜಿಜ್ಞಾಸೆಗಳು.

೨. ಹೊಸತಲೆಮಾರಿನ ಕನ್ನಡ ಕಾವ್ಯದಲ್ಲಿ ವ್ಯಕ್ತಗೊಂಡಿರುವ ರೂಪಕಗಳ ಸ್ವರೂಪದ ಕುರಿತು ಅಧ್ಯಯನದ ಸಾಧ್ಯತೆ ಇದೆ.

೩. ಹೊಸ ತಲೆಮಾರಿನ ಕನ್ನಡ ಕಾವ್ಯ: ವರ್ತಮಾನದ ತಲ್ಲಣಗಳು ಎಂಬ ವಿಷಯದ ಕುರಿತು ಅಧ್ಯಯನ ಮಾಡಬಹುದಾಗಿದೆ.

೪. ಹೊಸ ತಲೆಮಾರಿನ ಕನ್ನಡಕಾವ್ಯ: ದಲಿತ ಸಂವೇದನೆ ಎಂಬ ವಿಷಯದಲ್ಲಿ ದಲಿತ ಕವಿಗಳ ಕಾವ್ಯ ಅನುಲಕ್ಷಿಸಿ, ಅಧ್ಯಯನ ಮಾಡಬಹುದಾಗಿದೆ.

೫. ಇತ್ತೀಚಿನ ಕನ್ನಡ ಕಾವ್ಯ: ಜಾಗತೀಕರಣ ಎಂಬ ವಿಷಯದ ಕುರಿತು ಜಾಗತೀಕರಣಕ್ಕಾಗಿ ಕಾವ್ಯ ಯಾವ ರೀತಿಯಾಗಿ ಪ್ರತಿಕ್ರಿಯೆ ನೀಡಿದೆ ಎಂಬುದರ ಕುರಿತು ಅಧ್ಯಯನ ಮಾಡಬಹುದು.

೬. ಹೊಸ ತಲೆಮಾರಿನ ಕನ್ನಡ ಕಾವ್ಯದಲ್ಲಿನ ಪ್ರತಿಭಟನಾ ಸ್ವರೂಪ ಎಂಬ ವಿಷಯವನ್ನು ವಿಸ್ತರಿಸಿ ಕಾವ್ಯದಲ್ಲಿ ಮುಡಿದ ಪ್ರತಿಭಟನೆಯ ಸ್ವರೂಪದ ಕುರಿತು ಅಧ್ಯಯನ ಮಾಡಬಹುದು.

೭. ಹೊಸ ತಲೆಮಾರಿನ ಕಾವ್ಯ ಮತ್ತು ವಸ್ತು ಶೈಲಿ, ಆಶಯದ ಹೊಸ ಬೆಳವಣಿಗೆ ಎಂಬ ವಿಷಯದ ಕುರಿತು ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾಗಿದೆ.

೮. ಹೊಸ ತಲೆಮಾರಿನ ಕನ್ನಡ ಕಾವ್ಯದ ಪ್ರೇರಣೆ ಮತ್ತು ಪ್ರಭಾವಗಳು ಯಾವ ರೀತಿಯಾಗಿ ಎಂಬ ವಿಷಯದ ಕುರಿತು ಅಧ್ಯಯನ ಮಾಡಬಹುದು.

೯. ಹೊಸ ತಲೆಮಾರಿನ ಕಾವ್ಯದಲ್ಲಿ ಮಹಿಳಾ ಕಾವ್ಯದ ಸ್ವರೂಪ ಮತ್ತು ಧೋರಣೆಯ ಕುರಿತಂತೆ ಅಧ್ಯಯನ ಮಾಡಬಹುದು.

೧೦. ಹೊಸ ತಲೆಮಾರಿನ ಕಾವ್ಯದಲ್ಲಿ ನಡೆದ ಹೊಸ ಬದಲಾವಣೆಗಳು ಯಾವುವು ಎಂಬುದರ ಕುರಿತು ಅಧ್ಯಯನ ಮಾಡಬಹುದಾಗಿದೆ.



## ೧. ಮೂಲ ಆಕರಗಳು


೧. ಅನುಪಮಾ ಎಚ್.ಎಸ್., ೨೦೧೫, **ಸಹಗಮನ**, ಶ್ರೀರಾಘವೇಂದ್ರ ಪ್ರಕಾಶನ, ಅಂಕೋಲ.

೨. ಅನುಪಮಾ ಎಚ್.ಎಸ್., ೨೦೧೬, **ಉರಿವ ಕುಡಿಯ ನಟ್ಟುನಡುವೆ**, ಲಡಾಯಿ ಪ್ರಕಾಶನ, ಗದಗ.

೩. ಅನುಪಮಾ ಎಚ್.ಎಸ್., ೨೦೧೬, **ಬುದ್ಧ ಚರಿತೆ**, ಲಡಾಯಿ ಪ್ರಕಾಶನ, ಗದಗ.

೪. ಅರುಣ ಜೋಳದ ಕೂಡ್ಲಿಗಿ, ೨೦೧೦, **ಅವ್ವನ ಅಂಗನವಾಡಿ**, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೫. ಅಲ್ಲಾಗಿರಿರಾಜ ಕನಕಗಿರಿ, ೨೦೧೬, **ಸುರೂರ್ ಗಜಲ್**, ಲೀಲಾಗಿರಿ ಪ್ರಕಾಶನ, ಬೆಂಗಳೂರು.

೬. ಅಲ್ಲಾಗಿರಿರಾಜ ಕನಕಗಿರಿ., ೨೦೧೩, **ನೂರ್ ಗಜಲ್**, ಸಮೀರ್ ಪ್ರಕಾಶನ, ಕನಕಗಿರಿ, ಕೊಪ್ಪಳ.

೭. ಅಲ್ಲಾಗಿರಿರಾಜ ಕನಕಗಿರಿ., ೨೦೧೫, **೯೯ ಗಜಲ್**, ಸಮೀರ್ ಪ್ರಕಾಶನ, ಕನಕಗಿರಿ, ಕೊಪ್ಪಳ.

೮. ಅಂಕೂರ ಬೇಟಗೇರಿ., ೨೦೦೪, **ಹಿಡಿದ ಉಸಿರು**, ಅಭಿನವ ಪ್ರಕಾಶನ, ಬೆಂಗಳೂರು.

೯. ಆನಂದ ಸಿ. ಲಕ್ಕೂರು, ೨೦೦೬, **ಇಪ್ಪತ್ತರ ಕಲ್ಲಿನ ಮೇಲೆ**, ಪ್ರಕಾಶನ ಸಿ.ವಿ.ಜಿ ಪಬ್ಲಿಕೇಶನ್, ಬೆಂಗಳೂರು.

೧೦. ಆನಂದ ಸಿ. ಲಕ್ಕೂರು, ೨೦೧೩, **ಊರಿವ ಏಕಾಂತ ದೀಪ**, ಲಡಾಯಿ ಪ್ರಕಾಶನ, ಗದಗ.

೧೧. ಆನಂದ ಸಿ. ಲಕ್ಕೂರು, ೨೦೧೩, **ಬಟವಾಡೆಯಾಗದ ರಸೀತಿ**, ಅಭಿನವ ಪ್ರಕಾಶನ, ಬೆಂಗಳೂರು.

೧೨. ಆರೀಫ್ ರಾಜಾ, ೨೦೧೩, **ಜಂಗಮ ಫಕೀರನ ಜೋಳಿಗೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೩. ಆರೀಫ್ ರಾಜಾ, ೨೦೧೩, **ಬೆಂಕಿಗೆ ತೊಡಿಸಿದ ಬೆಟ್ಟೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೪. ಉಷಾ ಸ. (ಸಂ), ೨೦೦೧, **ಕವಿತೆ ೨೦೦೦**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ಕವಿತಾ ರೈ., ೨೦೧೩, **ನೀರು ಮಾಡು**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೬. ಕಾರ್ಪೆಂಟರ್ ವಿ.ಆರ್., ೨೦೧೧, **ಕಾರ್ಪೆಂಟರ್ ಪದ್ಯಗಳು**, ಅಂಕ ಪ್ರಕಾಶನ, ಬೆಂಗಳೂರು.

೧೭. ಕಾರ್ಪೆಂಟರ್ ವಿ.ಆರ್., ೨೦೦೭, **ಸಿಗ್ನಲ್ ಟವರ್**, ಅಕ್ಕ ಪ್ರಕಾಶನ, ಕುಣಿಗಲ್.

೧೮. ಕಾವ್ಯಾ ಕಡಮೆ., ೨೦೧೩, **ಧ್ಯಾನಕ್ಕೆ ತಾರೀಖಿನ ಹಂಗಿಲ್ಲ**, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೧೯. ಕೃಷ್ಣಮೂರ್ತಿ ಕೈದಾಳ್, ೨೦೧೩, **ಸಮುದ್ರೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೦. ಗೀತಾ ವಸಂತ, ೨೦೧೦, **ಪರಿಮಳದ ಬೀಜ**, ಅಭಿನವ ಪ್ರಕಾಶನ, ಬೆಂಗಳೂರು.

೨೧. ಚನ್ನಪ್ಪ ಅಂಗಡಿ, ೨೦೧೧, **ಭೂಮಿ ತಿರುಗುವ ಶಬ್ದ**, ಲಡಾಯಿ ಪ್ರಕಾಶನ, ಗದಗ.

೨೨. ಚಿದಾನಂದ ಸಾಲಿ(ಸಂ) ೨೦೧೦, **ಕಡಲ ಹಕ್ಕಿಯ ರೆಕ್ಕೆ**, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೨೩. ಚಿದಾನಂದ ಸಾಲಿ(ಸಂ), ೨೦೧೫, **ಕನ್ನಡ ಗಜಲ್**, ಸಾಹಿತ್ಯ ಅಕಾಡೆಮಿ, ನವದೆಹಲಿ.

೨೪. ಚಂದ್ರು ತುರುವಿಹಾಳ್, ೨೦೦೦, **ನಿನ್ನದೊಂದು ರುಜುಬೇಕು**, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ.

೨೫. ಚಂದ್ರಿಕಾ ಪಿ., ೨೦೧೫, 'ಒಬ್ಬಳೇ ಆಡುವ ಆಟ', ಅಕ್ಷರ ಪ್ರಕಾಶನ, ಹೆಗ್ಗೋಡು.

೨೬. ಚಂದ್ರಿಕಾ ಪಿ., ೧೯೯೮, 'ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ', ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೨೭. ತಾರಿಣಿ ಶುಭದಾಯಿನಿ., ೨೦೦೪, **ತೋಡಿರಾಗ**, ಸದಾಸಿರಿ ಪ್ರಕಾಶನ, ಚಿತ್ರದುರ್ಗ.

೨೮. ತೇಜಶ್ರೀ ಜ.ನಾ., ೨೦೦೪, **ಮಾಗಿಕಾಲದ ಸಾಲುಗಳು**, ಸಿವಿಜಿ ಪ್ರಕಾಶನ, ಬೆಂಗಳೂರು.

೨೯. ತೇಜಶ್ರೀ ಜ.ನಾ., ೨೦೧೧, **ಉಸಿರು ಬುಂಡೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೦. ದಸ್ತಗೀರಿಸಾಬ್ ದಿನ್ನಿ., ೨೦೦೧, **ಕಣ್ಣಮುಂದಿನ ಬೆಳಕು**, ಲೋಹಿಯಾ ಪ್ರಕಾಶನ, ಬಳ್ಳಾರಿ.

೩೧. ನಟರಾಜ ಬೂದಾಳ(ಸಂ), **ಕೋ**, ಲಕ್ಷ್ಮೀಪತಿ ಕೋಲಾರ ಅವರ ಆಯ್ದ ಕವಿತೆಗಳು, ಶಾಹು ಪ್ರಕಾಶನ, ಮಾಲೂರು.

೩೨. ನಾಗಣ್ಣ ಕಿಲಾರಿ, ೨೦೧೫, **ತಪಸ್ಸಿಗಿಳಿದ ಮಳೆ**, ಮೇಘಾ ಪಬ್ಲಿಕೇಷನ್ಸ್, ಬೆಂಗಳೂರು.

೩೩. ಪ್ರಜ್ಞಾ ಮತ್ತಿಹಳ್ಳಿ., ೨೦೧೬, **ಕಾಲನ ಕಾಲಂದುಗೆ**, ಲಡಾಯಿ ಪ್ರಕಾಶನ, ಗದಗ.

೩೪. ಪೀರ್‌ಬಾಷ ಬಿ., ೨೦೦೯, **ದೇವರು ಮನುಷ್ಯರಾದ ದಿನ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೫. ಪೀರ್‌ಬಾಷ ಬಿ., ೨೦೦೯, **ಅಕ್ಕ ಸೀತಾ ನಿನ್ನಂತೆ ನಾನೂ ಶಂಕಿತ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೬. ಪುಷ್ಪ ಎಚ್.ಎಲ್., ೨೦೦೯, ೨೦೧೪, **ಲೋಹದ ಕಣ್ಣು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೭. ಬಸವರಾಜ ಹೃತ್ಸಾಕ್ಷಿ, ೨೦೧೬, **ಕಸಬಾರಿಗೆ ಪಾದ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೮. ಬಸವರಾಜ ಸೂಳಿಬಾವಿ, ೨೦೧೩, **ತೇವ ಕಾಯುವ ಬೀಜ,** ಕವಿ ಪ್ರಕಾಶನ, ಕವಲಕ್ಕಿ ಹೊನ್ನಾವರ.

೩೯. ಬಸವರಾಜ ಸೂಳಿಬಾವಿ, ೨೦೧೩, **ದೀಪದ ಗಿಡ,** ಕವಿ ಪ್ರಕಾಶನ, ಕವಲಕ್ಕಿ ಹೊನ್ನಾವರ.

೪೦. ಬಸವರಾಜ ಹೂಗಾರ, ೨೦೧೩, **ಹಾದಿ ಜಂಗಮ,** ಲಡಾಯಿ ಪ್ರಕಾಶನ, ಗದಗ,

೪೧. ಮಾನಸಯ್ಯ. ಆರ್., ೨೦೦೭, **ರಕ್ತದ ರಂಗೋಲಿ,** ದುಡಿಮೆ ಪ್ರಕಾಶನ, ಬೆಂಗಳೂರು.

೪೨. ಮುಮ್ತಾಜ್ ಬೇಗಂ, ೨೦೧೬, **ಕಂಬದ ಬಾಹುಗಳು ಬೇಕಿಲ್ಲ,** ನಿರಂತರ ಪ್ರಕಾಶನ, ಗದಗ.

೪೩. ಮಂಜುನಾಥ ಎಸ್., ೨೦೧೫, **ಬೊಗಸೆ ಜಲ ಒಂದು ಬೀಜಕ್ಕಾಗಿ,** ಅಭಿರುಚಿ ಪ್ರಕಾಶನ, ಮೈಸೂರು.

೪೪. ಮಂಜುನಾಥ ಎಸ್., ೨೦೧೨, **ನೆಲದ ಬೇರು ನಭದ ಬಿಳಲು,** ಅಂಕಿತ ಪುಸ್ತಕ, ಬೆಂಗಳೂರು.

೪೫. ಮಂಜುನಾಥ ವಿ.ಎಮ್., ೨೦೦೫, **ಲೆವಲ್ ಕ್ರಾಸಿಂಗ್,** ಅಕ್ಕ ಪ್ರಕಾಶನ, ಕುಣಿಗಲ್.

೪೬. ಮೃತ್ಯುಂಜಯ ಕೆ.ಪಿ., ೨೦೧೪, **ನನ್ನ ಶಬ್ದ ನಿನ್ನಲ್ಲಿ ಬಂದು,** ಲಡಾಯಿ ಪ್ರಕಾಶನ, ಗದಗ.

೪೭. ಯಲ್ಲಪ್ಪ ಟಿ., ೨೦೧೩, **ಚಿಟ್ಟೆ ಮತ್ತು ಜೀವಯಾನ,** ಅಭಿನವ ಪ್ರಕಾಶನ, ಬೆಂಗಳೂರು.

೪೮. ರಮೇಶ ಅರೋಲಿ, ೨೦೧೪, **ಜುಲುಮೆ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೪೯. ರಮೇಶ ಅರೋಲಿ, ೨೦೧೦, **ಏಳೆಯ ಪಾಪದ ಹೆಸರು ನಿಮ್ಮಿಚ್ಛೆಯಂತೆ ಇಟ್ಟುಕೊಳ್ಳಿ,** ಅಭಿನವ ಪ್ರಕಾಶನ, ಬೆಂಗಳೂರು.

೫೦. ರಮೇಶ ಎಚ್.ಆರ್., ೨೦೧೦, **ಝುನ್ನದಿ,** ಅಭಿನವ ಪ್ರಕಾಶನ, ಬೆಂಗಳೂರು.

೫೧. ರವಿ ಹಂಪಿ., ೨೦೦೭, **ಸಖುಸಖಿ,** ಸೃಷ್ಟಿ ಪ್ರಕಾಶನ, ಬೆಂಗಳೂರು.

೫೨. ರಾಜಶ್ರೀ ಎಚ್.ಎನ್., ೨೦೧೧, **ಕಾಡುವ ನೆನಪುಗಳು,** ಅಭಿನವ ಪ್ರಕಾಶನ, ಬೆಂಗಳೂರು.

೫೩. ರೂಪಾ ಹಾಸನ., ೨೦೧೦, **ಕಡಲಿಗೆ ಎಷ್ಟೊಂದು ಬಾಗಿಲು,** ಲೋಹಿಯಾ ಪ್ರಕಾಶನ, ಬಳ್ಳಾರಿ.

೫೪. ರೂಪಶ್ರೀ ಕಲ್ಲಿಗನೂರು, ೨೦೧೫, **ಚಿತ್ತಭಿತ್ತಿ,** ಲಡಾಯಿ ಪ್ರಕಾಶನ, ಗದಗ.

೫೫. ರಾಮಪ್ಪ ಮಾದರ, ೨೦೦೫, **ಕೆರಹೊತ್ತ ಬಸವ,** ಜನವಿದ್ಯಾ ಪ್ರಸಾರಾಂಗ, ಹೂವಿನಹಡಗಲಿ.

೫೬. ಲಕ್ಷ್ಮೀಪತಿ ಕೋಲಾರ, ೨೦೧೩, **ನೀರ ಚಿಗುರು,** 'ಕೋ' ಪ್ರಕಾಶನ, ಬೆಂಗಳೂರು.

೫೭. ವಿಕ್ರಮ ವಿಸಾಜಿ.(ಸಂ), ೨೦೧೪, **ಮತ್ತೆ ಬಂತು ಶ್ರಾವಣ**, ಕ್ರೈಸ್ಟ್ ಯೂನಿವರ್ಸಿಟಿ, ಕನ್ನಡ ಸಂಘ, ಬೆಂಗಳೂರು.

೫೮. ವಿಭಾ, ೨೦೧೩, **ಜೀವ ಮಿಡಿತದ ಸದ್ದು**, ಲಡಾಯಿ ಪ್ರಕಾಶನ, ಗದಗ.

೫೯. ವಿಠಲ ದಳವಾಯಿ., ೨೦೧೨, **ಬೋಧಿ ನೆರಳಿನ ದಾರಿ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೬೦. ವೀರಣ್ಣ ಮಡಿವಾಳರ., ೨೦೧೦, **ನೆಲದ ಕರುಣೆಯ ದನಿ**, ಕೆಂಗುಲಾಬಿ ಪ್ರಕಾಶನ, ಬಳ್ಳಾರಿ.

೬೧. ಶರೀಫ್ ಹಸಮಕಲ್., ೨೦೧೫, **ಚಿಲ್ಲರೆಗೆ ಕದಲದ ಜಾಗ**, ಗೌತಮ ಬುಕ್‌ಹೌಸ್, ಕಮಲಾಪುರ.

೬೨. ಶಿವರಾಜ ಬೆಟದೂರ., ೨೦೧೧, **ಈ ಲೋಕದ ಇನ್ನೊಂದು ಗಿಡ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೬೩. ಶ್ರೀನಿವಾಸ ಬಿ., ೨೦೧೨, **ಉರಿವ ಒಲೆಯ ಮುಂದೆ**, ಲಡಾಯಿ ಪ್ರಕಾಶನ, ಗದಗ.

೬೪. ಶ್ರೀನಿವಾಸಮೂರ್ತಿ ಕೆ.ಎಸ್., ೨೦೦೯, **ಸೈಟಾದರೂ ಬೇಡವೇಸ್ವಾಮಿ ನಮಗೆ?**, ಅಭಿನವ ಪ್ರಕಾಶನ, ಬೆಂಗಳೂರು.

೬೫. ಶ್ರೀನಿವಾಸರಾಜು. ಚಿ, ಸರ್ವಮಂಗಳ ಚ.(ಸಂ), ೨೦೧೨, **ಬಿಡುಗಡೆಯ ಬೆಳಕು**, ಸಾಹಿತ್ಯ ಅಕಾಡೆಮಿ, ನವದೆಹಲಿ.

೬೬. ಷರೀಫಾ ಕೆ.(ಸಂ), ೨೦೧೧, **ಹೊಸ ಶತಮಾನದ ಕಾವ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೭. ಸಬಿತಾ ಬನ್ನಾಡಿ(ಸಂ), ೨೦೧೭, **ಅವಳ ಕವಿತೆ**, ಕವಿ ಪ್ರಕಾಶನ, ಕವಲಕ್ಕಿ, ಹೊನ್ನಾವರ.

೬೮. ಸರಸ್ವತಿ.ದು., ೨೦೦೬, **ಜೀವಸಂಪಿಗೆ**, ಅಭಿನವ ಪ್ರಕಾಶನ, ಬೆಂಗಳೂರು.

೬೯. ಸುಧಾ ಚಿದಾನಂದಗೌಡ, ೨೦೧೩, **ಬಯಲಧ್ಯಾನ**, ಸುಯೋಧನ ಪ್ರಕಾಶನ, ಬಳ್ಳಾರಿ.

೭೦. ಸೈಫ್ ಜಾನ್ಸೆ ಕೊಟ್ಟೂರು, ೨೦೧೧, **ಅಯ್ಯಂಗಾರಿ ಹತ್ತು ಪೈಸೆಯ ಬ್ರೆಡ್ಡು**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೭೧. ಸಂಧ್ಯಾದೇವಿ., ೨೦೧೧, **ಝುಳಕ್ಕೆ ಮುಖ ಬೆಳಗುತ್ತದೆ**, ಅಭಿನವ ಪ್ರಕಾಶನ, ಬೆಂಗಳೂರು.

೭೨. ಹನುಮಂತಯ್ಯ ಎನ್ಕೆ, ೨೦೧೬, **ಮಾಂಸದಂಗಡಿಯ ನವಿಲು**, ಲಡಾಯಿ ಪ್ರಕಾಶನ, ಗದಗ.

೭೩. ಹನುಮಂತಯ್ಯ ಎಲ್., ೨೦೧೪, **ಕರ್ಣರಾಗ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.



## ೨. ಪರಾಮರ್ಶನ ಗ್ರಂಥಗಳು


೧. ಅನಂತಮೂರ್ತಿ ಯು.ಆರ್, ೧೯೯೭, **ನವ್ಯ ಲೋಕ,** ಅಭಿನವ ಪ್ರಕಾಶನ, ಬೆಂಗಳೂರು.

೨. ಅನಂತಮೂರ್ತಿ ಯು.ಆರ್, ೨೦೦೯, **ಮತ್ತೆ ಮತ್ತೆ ಬ್ರೆಕ್ಟ್,** ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೩. ಅಮರೇಶ ನುಗಡೋಣಿ, ೨೦೦೩, **ಹೈದರಬಾದ ಕರ್ನಾಟಕ ಹಾಡುಪಾಡು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಅಶೋಕ ಟಿ.ಪಿ., ೨೦೧೩, **ಕಾವ್ಯ ಪ್ರೀತಿ,** ಅಕ್ಷರ ಪ್ರಕಾಶನ, ಹೆಗ್ಗೋಡು.

೫. ಅಕ್ಷತಾ ಕೆ.(ಸಂ), ೨೦೧೦, **ಮತ್ತೆ ಮತ್ತೆ ಬೇಂದ್ರೆ,** ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೬. ಆಮೂರು ಜಿಎಸ್., ೨೦೧೬, **ಒಮ್ಮುಖ,** ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೭. ಆಶಾದೇವಿ. ಎಂ.ಎಸ್., ೨೦೧೬, **ಬೆಳಕಿಗಿಂತ ಬೆಳ್ಳಗೆ,** ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮. ಕರೀಗೌಡ ಬೀಚನಹಳ್ಳಿ, ೨೦೧೫, **ಬಸವಣ್ಣ ಪುನರ್ಲೇಖ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಕೃಷ್ಣಮೂರ್ತಿ ಚಂದರ್, ೨೦೧೫, **ನವ್ಯೋತ್ತರದ ವಿಮರ್ಶೆ: ಕೆಲವು ನಿಲುವುಗಳು,** ವಿಸ್ಮಯ ಪ್ರಕಾಶನ, ಮೈಸೂರು.

೧೦. ಕೃಷ್ಣಮೂರ್ತಿ. ಮ.ಸು., ೧೯೯೫, **ಸೂಫಿ ಪ್ರೇಮಕಾವ್ಯ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧. ಗಣೇಶ ಮೊಗಳ್ಳಿ(ಸಂ), ೨೦೦೯, **ಬಣ್ಣದ ಚಿತ್ತ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಗೋವಿಂದರಾಜ ಗಿರಡ್ಡಿ(ಸಂ), ೨೦೦೧, **ಕನ್ನಡ ನವೋದಯ ಕಾವ್ಯ: ಮಂಗಳೂರು ಕೇಂದ್ರ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೩. ಗೋವಿಂದರಾಜ ಗಿರಡ್ಡಿ, ೨೦೦೪, **ಕನ್ನಡ ಕಾವ್ಯ ಪರಂಪರೆ ಮತ್ತು ಬೇಂದ್ರೆಯವರ ಕಾವ್ಯ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪. ಗೋವಿಂದರಾಜು ಗಿರಡ್ಡಿ, ೨೦೧೦, **ಕಾವ್ಯವನ್ನು ಕುರಿತು,** ವಸಂತ ಪ್ರಕಾಶನ, ಬೆಂಗಳೂರು.

೧೫. ಚೆನ್ನವೀರ ಕಣವಿ, ೧೯೯೬, **ಕಾವ್ಯಾನುಸಂಧಾನ,** ಶ್ರೀ ಪ್ರೇಮಸಾಯಿ ಪ್ರಕಾಶನ, ಬೆಂಗಳೂರು.

೧೬. ಜಾ.ಗೋ., ೧೯೯೦, **ಕಾವ್ಯಮಂಥನ,** ಸಮಾಜ ಪುಸ್ತಕಾಲಯ, ಧಾರವಾಡ.

೧೭. ಜೋಗಿ., ೨೦೧೨, **ಹಲಗೆ ಬಳಪ,** ಅಂಕಿತ ಪುಸ್ತಕ, ಬೆಂಗಳೂರು.

೧೮. ಜ್ಯೋತಿ ಗುರುಪ್ರಸಾದ್, ೨೦೧೧, **ವರನಂದಿ ಪ್ರತಿಮೆ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೧೯. ನರಸಿಂಹಸ್ವಾಮಿ ಕೆ.ಎಸ್., ೨೦೦೯, **ಸಮಗ್ರ ವಾಙ್ಮಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೦. ನಟರಾಜ ಬೂದಾಳ ಎಸ್., ೨೦೧೬, **ಕನ್ನಡ ಕಾವ್ಯ ಮೀಮಾಂಸೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ನಾಗರಾಜ ಡಿ.ಆರ್., ೨೦೦೯, **ಅಮೃತ ಮತ್ತು ಗರುಡ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೨೨. ನಾಗರಾಜ ಡಿ.ಆರ್., ೨೦೧೫, **ಶಕ್ತಿ ಶಾರದೆಯ ಮೇಳ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೨೩. ನಾಗಭೂಷಣಸ್ವಾಮಿ ಓ.ಎಲ್., ೧೯೯೭, **ನಮ್ಮ ಕನ್ನಡ ಕಾವ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ನಾರಾಯಣ ಕೆ. ಕ್ಯಾಸಂಬಳ್ಳಿ(ಸಂ), ೨೦೧೪, **ಹಂಗಿಲ್ಲದ ಅಂಗಳದಲ್ಲಿ,** ಕಾಲುದಾರಿ ಪ್ರಕಾಶನ, ಬೆಂಗಳೂರು.

೨೫. ಬಸವರಾಜ ಕಲ್ಗುಡಿ, ೨೦೧೩, **ಮೈಯೇ ಸೂರು ಮನವೇ ಮಾತು,** ಅಭಿನವ ಪ್ರಕಾಶನ, ಬೆಂಗಳೂರು.

೨೬. ಬರಗೂರು ರಾಮಚಂದ್ರಪ್ಪ, ೨೦೦೧, **ಕಾಂಟೆಸಾದಲ್ಲಿ ಕಾವ್ಯ,** ಅಂಕಿತ ಪುಸ್ತಕ, ಬೆಂಗಳೂರು.

೨೭. ಬಸವರಾಜ ಕಲ್ಗುಡಿ, ೧೯೮೯, **ಪ್ರೇಮದ ಆವಿಷ್ಕಾರ,** ಅಭಿನವ ಪ್ರಕಾಶನ, ಬೆಂಗಳೂರು.

೨೮. ಬಸವರಾಜ ಕಲ್ಗುಡಿ(ಸಂ), ೨೦೦೬, **ಸುವರ್ಣ ವಿಚಾರ ಸಾಹಿತ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೯. ಬಾರ್ಕೂರು ಉದಯ., ೨೦೧೦, **ಸಾಮ್ರಾಜ್ಯಶಾಹಿ; ಚಿಂತನೆಗಳು ಮತ್ತು ಸಿದ್ಧಾಂತಗಳು,** ಪ್ರಸಾರಾಂಗ, ಮಂಗಳೂರು, ವಿಶ್ವವಿದ್ಯಾಲಯ, ಮಂಗಳೂರು.

೩೦. ಭಾಗ್ಯಶ್ರೀ(ಅನು), ೨೦೧೨, **ಪ್ರೀತಿ ಮತ್ತು ಕ್ರಾಂತಿ,** ಲಂಕೇಶ ಪ್ರಕಾಶನ, ಬೆಂಗಳೂರು.

೩೧. ಮರುಳಯ್ಯ ಸಾ.ಶಿ., ೧೯೯೪, **ಮಾಸ್ತಿ ಅವರ ಕಾವ್ಯ ಒಂದು ಸಮೀಕ್ಷೆ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೨. ಮಠಪತಿ ಆರ್.ಜಿ., ೨೦೦೪, **ಪ್ರಚಲಿತ ಕನ್ನಡ ಕಾವ್ಯ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೩. ರತಿ ಎಂ.ಟಿ., ೨೦೦೯, **ತಂಪು**, ಕ್ರೈಸ್ಟ್ ಯೂನಿವರ್ಸಿಟಿ, ಕನ್ನಡ ಸಂಘ, ಬೆಂಗಳೂರು.

೩೪. ರವಿನಾಯಕ., ೨೦೦೯, **ಬಿ.ಟಿ. ಲಲಿತಾ ನಾಯಕ್ ಅವರ ಕಾವ್ಯದ ವೈಶಿಷ್ಟ್ಯಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೫. ರಹಮತ್ ತರೀಕೆರೆ(ಸಂ), ೨೦೦೮, **ಹೊಸ ತಲೆಮಾರಿನ ತಲ್ಲಣಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ರಹಮತ್ ತರೀಕೆರೆ(ಸಂ), ೨೦೧೧, **ಮಾತು ತಲೆ ಎತ್ತುವ ಬಗೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ರಹಮತ್ ತರೀಕೆರೆ, ೨೦೧೩, **ನೇತುಬಿದ್ದ ನವಿಲು**, ಲಂಕೇಶ ಪ್ರಕಾಶನ, ಬೆಂಗಳೂರು.

೩೮. ಸರಸ್ವತಿ ದು(ಸಂ), ೨೦೧೩, **ಸಂಗಡ**, ಅಭಿನವ ಪ್ರಕಾಶನ, ಬೆಂಗಳೂರು.

೩೯. ರಾಘವೇಂದ್ರರಾವ್ ಎಚ್.ಎಚ್.(ಸಂ), ೨೦೧೩, **ಕಪ್ಪು ಕವಿತೆ**, ಅಭಿನವ ಪ್ರಕಾಶನ, ಬೆಂಗಳೂರು.

೪೦. ರಾಘವೇಂದ್ರರಾವ್ ಎಚ್.ಎಚ್., ೧೯೯೫, **ಹಾಡೆ ಹಾದಿಯ ತೋರಿತು**, ಕ್ರೈಸ್ಟ್ ಯೂನಿವರ್ಸಿಟಿ, ಕನ್ನಡ ಸಂಘ, ಬೆಂಗಳೂರು.

೪೧. ರಾಮಚಂದ್ರ ಶರ್ಮ., ೧೯೯೬, **ಸಪ್ತಪದಿ**, ಅಭಿನವ ಪ್ರಕಾಶನ, ಬೆಂಗಳೂರು.

೪೨. ಲಕ್ಷ್ಮೀನಾರಾಯಣಭಟ್ಟ ಎನ್.ಎಸ್., ೨೦೦೯, **ಪರಸ್ಪರ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೩. ಲಕ್ಷ್ಮೀನಾರಾಯಣಭಟ್ಟ ಎನ್.ಎಸ್., ೨೦೧೫, **ಕಾವ್ಯ ಪ್ರತಿಮೆ**, ಅಂಕಿತ ಪುಸ್ತಕ, ಬೆಂಗಳೂರು.

೪೪. ವೀಣಾ ಶಾಂತೇಶ್ವರ, ೨೦೦೯, **ಇಲ್ಲಿಂದ ಮುಂದೆಲ್ಲಿಗೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ವಿಕ್ರಮ ವಿಸಾಜಿ, ೨೦೦೮, **ನಾದಗಳು ನುಡಿಯಾಗಲೇ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೪೬. ಶಾಂತಲಕ್ಷ್ಮಿ, ೨೦೦೮, **ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು: ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೪೭. ಶಾಂತರಸ, ೨೦೦೬, **ಗಜಲ್ ಮತ್ತು ಬಿಡಿ ದ್ವಿಪದಿ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೪೮. ಶ್ರೀಮತಿ ಹೆಚ್.ಎಸ್., ೧೯೯೩, **ಹಳೆಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ,** ಅಜಂತ ಪ್ರಕಾಶನ ಹೊಸಪೇಟೆ

೪೯. ಸಬಿಹಾ ಭೂಮಿಗೌಡ., ೨೦೧೪, **ಮಹಿಳೆ ಮತ್ತು ಇಂದಿನ ಸವಾಲುಗಳು,** ಲಡಾಯಿ ಪ್ರಕಾಶನ, ಗದಗ.

೫೦. ಸುಜನಾ., ೨೦೧೧, **ಪರಂಪರೆ ಮತ್ತು ಕುವೆಂಪು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫೧. ಶಿವಾರೆಡ್ಡಿ ಕೆ.ಸಿ., ೨೦೦೩, **ಕನ್ನಡದ ಹಾಡು ಪಾಡು,** ಅಧ್ಯಯನ ಮಂಡಲ, ಬೆಂಗಳೂರು.

೫೨. ಸಿದ್ದರಾಮಯ್ಯ ಎಸ್.ಜಿ., **೨೦೧೦, ಉರಿವ ಬತ್ತಿ ತೈಲ,** ಅಭಿನವ ಪ್ರಕಾಶನ, ಬೆಂಗಳೂರು.

೫೩. ವಿಜಯರಾಘವನ್ ಆರ್., ೨೦೧೫, **ಅನುಸಂಧಾನ,** ವಿಹಾ ಪುಸ್ತಕ, ಬೆಂಗಳೂರು.

೫೪. ಸಿದ್ದರಾಮ ಸಿ.ಪಿ., ೧೯೯೨, **ಮಾಸ್ತಿ ಅವರ ಕಾವ್ಯ: ಒಂದು ಅಧ್ಯಯನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫೫. ಸೋಮಶೇಖರ ಹಾಲತಿ(ಸಂ), ೨೦೧೨, **ಮಹಿಳೆ ಒಂದು ಚಿಂತನೆ,** ವಿಸ್ಮಯ ಪ್ರಕಾಶನ, ಮೈಸೂರು.

೫೬. ಸೋಮಶೇಖರ ಅಪ್ಪಗೆರೆ, ೨೦೦೬, **ಸುಟ್ಟಾವು ಬೆಳ್ಳಿ ಕಿರಣ,** ಪ್ರಸಾದ ಏಜೆನ್ಸಿ, ಮೈಸೂರು.

೫೭. ಸಂಧ್ಯಾದೇವಿ., ೨೦೦೮, **ಅಗ್ನಿದಿವ್ಯ,** ಅಭಿನವ ಪ್ರಕಾಶನ, ಬೆಂಗಳೂರು.



